# ನಿಡಗುರುಕಿ ಜೀವೂಬಾಯಿ ಅವರ ಕೀರ್ತನೆಗಳು: ಒಂದು ಅಧ್ಯಯನ

ಪಿಎಚ್. ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು

ಶ್ರೀಶೈಲ ಗು. ಮಠಪತಿ

ಮಾರ್ಗದರ್ಶಕರು

ಡಾ. ಎಸ್. ಆರ್. ಚನ್ನವೀರಪ್ಪ
ಸಹ ಪ್ರಾಧ್ಯಾಪಕರು



ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೪

# ನಿಡಗುರುಕಿ ಜೀವೂಬಾಯಿ ಅವರ ಕೀರ್ತನೆಗಳು: ಒಂದು ಅಧ್ಯಯನ

ಪಿಎಚ್. ಡಿ. ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು

**ಶ್ರೀಶೈಲ ಗು. ಮಠಪತಿ**

ಮಾರ್ಗದರ್ಶಕರು

**ಡಾ. ಎಸ್. ಆರ್. ಚನ್ನವೀರಪ್ಪ**
ಸಹ ಪ್ರಾಧ್ಯಾಪಕರು

ಭಾಷಾ ನಿಕಾಯ

**ಹಸ್ತಪ್ರತಿ ಶಾಸ್ತ್ರ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬



೨೦೧೪

# ಪ್ರಮಾಣ ಪತ್ರ

**'ನಿಡಗುರುಕಿ ಜೀವೂಬಾಯಿ ಅವರ ಕೀರ್ತನೆಗಳು: ಒಂದು ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎಸ್. ಆರ್. ಚನ್ನವೀರಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಎಲ್ಲಿಯೂ ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 28-8-2014

**ಶ್ರೀಶೈಲ ಗು. ಮಠಪತಿ,**

ಸಂಶೋಧಕರು,

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

ಶ್ರೀಶೈಲ ಗು. ಮಠಪತಿ ಇವರು '**ನಿಡಗುರುಕಿ ಜೀವೂಬಾಯಿ ಅವರ ಕೀರ್ತನೆಗಳು: ಒಂದು ಅಧ್ಯಯನ**' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಎಲ್ಲಿಯೂ ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 30. 8. 2014

**ಡಾ. ಎಸ್. ಆರ್. ಚೆನ್ನವೀರಪ್ಪ**

ಮಾರ್ಗದರ್ಶಕರು

ಸಹ ಪ್ರಾಧ್ಯಾಪಕರು

ಹಸ್ತ ಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ನಿಡಗುರಕಿ ಜೀವೂಬಾಯಿ ಅವರ ಕೀರ್ತನೆಗಳು : ಒಂದು ಅಧ್ಯಯನ

### ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಜನವಾಣಿಯಿಂದ ಆರಂಭಗೊಂಡ ಕನ್ನಡ ಸಾಹಿತ್ಯವು ಇಲ್ಲಿಯವರೆಗೆ ಬಹು ವಿಶಿಷ್ಟವಾಗಿ, ವಿವಿಧ ಕಾಲಘಟ್ಟವನ್ನು ಮತ್ತು ಹಲವು ಹತ್ತು ರೂಪಗಳನ್ನು ಹಾಯ್ದು ಬಂದಿದೆ. ಕವಿರಾಜಮಾರ್ಗದಿಂದ ದಾಖಲೆಗೊಂಡ ಕನ್ನಡ ಸಾಹಿತ್ಯವು ಮುಂದೆ ಪಂಪ, ರನ್ನ ಮುಂತಾದವರ ಚಂಪೂ ರಚನೆಯ ಮೂಲಕ ಮಾರ್ಗ ಕಾವ್ಯ ಪರಂಪರೆಯ ಉನ್ನತಿಯನ್ನು ಪಡೆಯಿತು. ಆಗಮಿಕ–ಲೌಕಿಕ, ದೇಶಿ–ಮಾರ್ಗ, ವಸ್ತುಕ–ವರ್ಣಕಗಳನ್ನು ಸಮಪ್ರಮಾಣದಲ್ಲಿ ಸಂಯೋಜಿಸಿ ಸಾಹಿತ್ಯ ರೂಪಿಸಿರುವುದು ಚಂಪೂ ಕವಿಗಳ ಹಿರಿಮೆ. ಆದರೆ ಈ ಸಾಹಿತ್ಯ ರೂಪವು ಜನಸಾಮಾನ್ಯರಿಂದ ದೂರ ಉಳಿಯಿತು. ಕೇವಲ ಪಂಡಿತರಿಂದ–ಪಂಡಿತರಿಗಾಗಿ ರೂಪಗೊಂಡು ಬೆಳೆಯಿತು.

ಜನಸಾಮಾನ್ಯರನ್ನು ನೇರವಾಗಿ ತಲುಪದ ಸಾಹಿತ್ಯ ಬಹುದಿನಗಳವರೆಗೆ ಬದುಕಲಾರದು. ಬಹು ದಿನಗಳಿಂದ ತಮ್ಮ ಮನದಲ್ಲಿ ಹತ್ತಿಕ್ಕಿಕೊಂಡಿರುವ ಭಾವನೆಗಳನ್ನು ಹೊರಹಾಕಲು ಜನಸಮೂಹವು ಒಂದು ಸರಳ ಸಾಹಿತ್ಯದ ರೂಪವನ್ನು ಹುಡುಕುತ್ತಿರುವ ಸಂದರ್ಭದಲ್ಲಿ 'ವಚನ' ಅವರ ಮನವನ್ನು ಆಕರ್ಷಿಸಿತು. ಶಿವಶರಣರೆಲ್ಲ ಈ 'ವಚನ' ಸಾಹಿತ್ಯ ರೂಪವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡರು. ಜಾತಿ–ಜನಾಂಗ, ಮೇಲು–ಕೀಳು, ಹೆಣ್ಣು–ಗಂಡು, ಬಡವ–ಬಲ್ಲಿದ ಮುಂತಾದ ಯಾವುದೇ ಬಗೆಯ ತಾರತಮ್ಯ ಮೀರಿ ಎಲ್ಲರೂ ಒಂದಾಗಿ 'ವಚನ' ಸಾಹಿತ್ಯವನ್ನು ಹುಲುಸಾಗಿ ಬೆಳೆಸಿದರು. ಇದು ಹಿಂದಿನ ಸಾಹಿತ್ಯ ಪರಂಪರೆಗೆ ಪರ್ಯಾಯವಾಗಿ ಜನಮುಖಿಯಾಗಿ ಬೆಳೆಯಿತು. ಈ ಮೊದಲಿದ್ದ ಛಂದೋನಿಯಮಗಳನ್ನೆಲ್ಲ ಮೀರಿ ಸ್ವತಂತ್ರವಾಗಿ ಸಾಹಿತ್ಯ ರಚಿಸಿರುವುದು ಶಿವಶರಣರ ಹಿರಿಮೆ. ಜನವಾಣಿಯನ್ನು ದೇವವಾಣಿಯ ಮಟ್ಟಕ್ಕೇರಿಸಿದ ಶಿವಶರಣರು ಸಾಹಿತ್ಯದಲ್ಲಿ ಅಪ್ಪಟ ಕನ್ನಡತನವನ್ನು ತರುವಲ್ಲಿ ಯಶಸ್ವಿಯಾದರು. ಇದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅದ್ಭುತವಾದ ಕಾರ್ಯವೆನಿಸಿದೆ.

ವಚನಸಾಹಿತ್ಯದ ತರುವಾಯ ಕರ್ನಾಟಕದಲ್ಲಿ ಮತ್ತೊಂದು ಜನಮುಖಿ ಸಾಹಿತ್ಯವು ರೂಪಗೊಂಡಿತು. ಅದುವೇ ಕೀರ್ತನ ಸಾಹಿತ್ಯ ಅಥವಾ ಹರಿದಾಸ ಸಾಹಿತ್ಯ. ಸಂಗೀತ ಪ್ರಧಾನ ರಚನೆಗಳ ಮೂಲಕ ಜನಸಾಮಾನ್ಯರನ್ನು ತಮ್ಮತ್ತ ಸೆಳೆದುಕೊಳ್ಳುವಲ್ಲಿ ಹರಿದಾಸರು ಪ್ರಯತ್ನಿಸಿ ಯಶಸ್ವಿಯಾದರು. ಈ ಹಿಂದಿನ ವೀರಶೈವ ಧಾರ್ಮಿಕ ಪರಂಪರೆಯ ತೀವ್ರತೆಯಿಂದ ವೈಷ್ಣವ ಧಾರ್ಮಿಕ ಪರಂಪರೆಯನ್ನು ಪುನರ್

ನಿರ್ಮಾಣ ಮಾಡಿಕೊಳ್ಳುವಲ್ಲಿಯೂ ಸಫಲರಾದರು. ಇವರು ತಮ್ಮನ್ನು 'ಹರಿದಾಸ'ರೆಂದು ಕರೆದುಕೊಂಡರು. ಈ ಹಿಂದಿನ ವಚನಕಾರರು ತಾವು ಶಿವನ ಆರಾಧಕರಾದುದರಿಂದ ತಮ್ಮನ್ನು 'ಶಿವಶರಣ'ರೆಂದು ಕರೆದುಕೊಂಡರು. ಹಾಗೆಯೇ ಕೀರ್ತನಕಾರರು ತಾವು ಹರಿಯ ಆರಾಧಕರಾದುದರಿಂದ ತಮ್ಮನ್ನು 'ಹರಿದಾಸ'ರೆಂದು ಕರೆದುಕೊಂಡರು. ಪ್ರತಿಯೋರ್ವ ಹರಿದಾಸರು ಗುರುಮುಖದಿಂದ ಅಂಕಿತವನ್ನು ಪಡೆದುಕೊಂಡು ಇಲ್ಲವೇ ತಾವೇ ಇಟ್ಟುಕೊಂಡು ಕೀರ್ತನೆ, ಉಗಾಭೋಗ, ಸುಳಾದಿಗಳನ್ನು ಹಾಗೂ ಕಾವ್ಯಗಳನ್ನು ರಚಿಸಿದರು.

ದಾಸರು ತಮ್ಮ ರಚನೆಗಳಲ್ಲಿ ಹರಿಯೇ ಸರ್ವೋತ್ತಮ, ಈ ಜಗತ್ತು ಸತ್ಯ ಮತ್ತು ನಿತ್ಯ. ಈ ಭೂಮಿಯ ಮೇಲಿನ ಎಲ್ಲ ಜೀವಿಗಳು ಶ್ರೀಹರಿಯ ಅನುಚರರು. ಪರಿಶುದ್ಧವಾದ ಭಕ್ತಿಯು ಮುಕ್ತಿಯ ಪರಮ ಸಾಧನ. ಹೀಗೆ ನಂಬಿಕೊಂಡು ಮುಂದುವರೆದ ದಾಸಪಂಥವು ಆ ದಿಶೆಯಲ್ಲಿ ಕಾರ್ಯಪ್ರವೃತ್ತವಾದುದು ಕೀರ್ತನೆಗಳಿಂದ ತಿಳಿದುಬರುತ್ತದೆ. ಸಾಹಿತ್ಯ ಮತ್ತು ಸಂಗೀತವನ್ನು ಒಂದರೊಂದಿಗೆ ಸಮ್ಮಿಳಿತಗೊಳಿಸಿರುವುದು ಹರಿದಾಸರ ಒಂದು ಹಿರಿಮೆ, ವಿಭಿನ್ನ ರಾಗ, ತಾಳ, ಲಯಗಳಲ್ಲಿ ಕೃತಿ ರಚಿಸಿರುವುದು ಅವರ ಸಂಗೀತ ಪ್ರೀತಿಯನ್ನು ತೋರುತ್ತದೆ.

ಪ್ರಾಚೀನವಾದ ಭಾಗವತ ಪರಂಪರೆಯ ಜೊತೆಗೆ ಮಧ್ವಮತದ ತತ್ವಗಳ ಆಧಾರದ ಮೇಲೆ ಭಗವಂತನ (ಶ್ರೀಹರಿಯ) ವಿವಿಧ ರೂಪ, ಸಾಧನೆ, ಶಕ್ತಿಗಳನ್ನು ಬಣ್ಣಿಸುವ ಭಕ್ತನ ಅಂತರಂಗದ ಹುಡುಕಾಟ, ಕಳವಳ ಹಾಗೂ ಸಮರ್ಪಣಾ ಮನೋಭಾವಗಳು ಕೀರ್ತನೆಗಳಲ್ಲಿ ಕಂಡುಬರುವ ಅಂಶಗಳು. ದಾಸಸಾಹಿತ್ಯವು ಕೇವಲ ವ್ಯಕ್ತಿಯ ಆತ್ಮಕಲ್ಯಾಣವನ್ನು ಬಯಸದೇ ಸಮಾಜ ಕಲ್ಯಾಣವನ್ನು ಬಯಸುವ ಕಳಕಳಿಯನ್ನೂ ಹೊಂದಿತ್ತು. ತಮ್ಮನ್ನು ತಾವು ತಿಳಿದುಕೊಳ್ಳುವುದರ ಜೊತೆಗೆ ಸುತ್ತಲಿನ ಪರಿಸರವನ್ನು ತಿಳಿದುಕೊಳ್ಳಲು ಹರಿದಾಸರು ಪ್ರಯತ್ನಿಸಿದರು. ಶಿವಶರಣರ ಹಾಗೆಯೇ ಭಾಷೆಯನ್ನು ಸರಳಗೊಳಿಸಿ ಒಮ್ಮೊಮ್ಮೆ ಗ್ರಾಮ್ಯ ಭಾಷೆಯನ್ನು ಬಳಸಿರುವುದು ಕಂಡುಬರುತ್ತದೆ. ಕೀರ್ತನಗಳಲ್ಲಿ ತುಂಬಿರುವ ಗೇಯಗುಣದಿಂದಾಗಿ ಹರಿದಾಸರು ಏಕಕಾಲಕ್ಕೆ ಪಂಡಿತರನ್ನೂ ಪಾಮರರನ್ನೂ ಆಕರ್ಷಿಸುವಲ್ಲಿ ಯಶಸ್ವಿಯಾದರು. ಆ ರಚನೆಗಳಿಗೆ ಸಾಹಿತ್ಯ ಮತ್ತು ಸಂಗೀತ ಎರಡರ ಸ್ಪರ್ಶವಿದೆ.

ಹರಿದಾಸ ಸಾಹಿತ್ಯ ಚರಿತ್ರೆಯಲ್ಲಿ ಸುಮಾರು ಒಂದು ನೂರಾ ಮುವತ್ತೊಂಬತ್ತು ಜನ ಹರಿದಾಸರು ಆಗಿಹೋಗಿದ್ದಾರೆ. ಸುಮಾರು ಹದಿನಾಲ್ಕು ಸಾವಿರಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದಾರೆಂದು ಊಹಿಸಲಾಗಿದೆ. ನರಹರಿತೀರ್ಥರಿಂದ ಆರಂಭಗೊಂಡ ಹರಿದಾಸ ಸಾಹಿತ್ಯ ಪರಂಪರೆಯು ಇಲ್ಲಿಯವರೆಗೂ ನಿರಂತರವಾಗಿ ಮುಂದುವರೆದುಕೊಂಡು ಬಂದಿರುವುದು ಕೀರ್ತನ ಸಾಹಿತ್ಯದ ಪ್ರಸ್ತುತತೆಗೆ ಮತ್ತು ಜನಪ್ರೀಯತೆಗೆ ನಿದರ್ಶನ.

ಇಂಥ ಹರಿದಾಸ ಸಾಹಿತ್ಯವನ್ನು ವಿದ್ವಾಂಸರು ಅದು ಬೆಳೆದು ಬಂದ ಬಗೆಯನ್ನು ನಾಲ್ಕು ಘಟ್ಟಗಳಲ್ಲಿ ಗುರುತಿಸುತ್ತಾರೆ.

೧. ನರಹರಿ ತೀರ್ಥರು, ಶ್ರೀಪಾದರಾಯರು – ಮೊದಲನೆಯ ಘಟ್ಟ ೧೩ನೇ ಶತಮಾನದಿಂದ ೧೬ನೇ ಶತಮಾನ

೨. ವ್ಯಾಸರಾಯರು, ಪುರಂದರದಾಸರು, ಕನಕದಾಸರು – ಎರಡನೆಯ ಘಟ್ಟ ೧೬ನೇ ಶತಮಾನದಿಂದ ೧೮ನೇ ಶತಮಾನ

೩. ವಿಜಯದಾಸರು, ಗೋಪಾಲದಾಸರು – ಮೂರನೆಯ ಘಟ್ಟ ೧೮ನೇ ಶತಮಾನದಿಂದ ೧೯ನೇ ಶತಮಾನ

೪. ವೇಣುಗೋಪಾಲ, ಪ್ರಾಣೇಶ ವಿಠ್ಠಲ – ನಾಲ್ಕನೆಯ ಘಟ್ಟ ೧೯ ನೇ ಶತಮಾನದ ನಂತರ

ಈ ಕಾಲ ಘಟ್ಟಗಳಲ್ಲಿ ಆಗಿಹೋದ ಹರಿದಾಸರನ್ನು ಮತ್ತು ಅವರ ಕೃತಿಗಳನ್ನು ಕುರಿತು ಅಧ್ಯಯನಗಳು ವಿಭಿನ್ನ ನೆಲೆಯಲ್ಲಿ ನಡಿದಿವೆ. ಆದರೆ ಮಹಿಳಾ ಕೀರ್ತನಕಾರ್ತಿಯರನ್ನು ಕುರಿತು ಅಷ್ಟೊಂದು ವ್ಯಾಪಕ ಪ್ರಮಾಣದ ಅಧ್ಯಯನಗಳು ನಡೆದಿರುವುದು ಕಂಡುಬರುವುದಿಲ್ಲ. ಕೇವಲ ಬೆರಳೆಣಿಕೆಯಷ್ಟು ಗಂಭೀರ ಅಧ್ಯಯನಗಳು ನಡೆದಿರುವುದು ತಿಳಿದುಬರುತ್ತದೆ.

ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ೧೮ನೇ ಶತಮಾನದಿಂದ ಮಹಿಳೆಯರು ಕೀರ್ತನ ರಚನೆಯಲ್ಲಿ ತೊಡಗಿಕೊಂಡಿರುವುದು ಗಮನಾರ್ಹವಾಗಿದೆ. ಇದಕ್ಕೂ ಮೊದಲು ಮಧ್ವಾಚಾರ್ಯರ ಸೋದರಿ ಕಲ್ಯಾಣಿದೇವಿ, ಪುರಂದರದಾಸರ ಪತ್ನಿ ಸರಸ್ವತಿಬಾಯಿ ಹಾಗೂ ಪುತ್ರಿಯರು ಅಂಕಿತವನ್ನು ಪಡೆದುಕೊಂಡು ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳುತ್ತಾರೆ. ಆದರೆ ಈ ಹೇಳಿಕೆಗೆ ಪೂರಕವಾಗುವ ಯಾವುದೇ ಆಧಾರಗಳು ಇಲ್ಲಿಯವರೆಗೆ ಲಭ್ಯವಿಲ್ಲ. ಮಹಿಳಾ ಹರಿದಾಸ ಪರಂಪರೆಯಲ್ಲಿ ಗಲಗಲಿ ಅವ್ವನವರು ಮೊದಲಿಗರು. ಇವರು ಕ್ರಿ.ಶ.೧೬೭೦ ರಿಂದ ಕ್ರಿ.ಶ. ೧೭೬೦ ರ ಕಾಲಾವಧಿಯಲ್ಲಿ ಜೀವಿಸಿದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು. ಇವರ ಸಮಗ್ರ ಸಾಹಿತ್ಯವನ್ನು ಕುರಿತು (ಗಲಗಲಿ ಅವ್ವ ಜೀವನ ಮತ್ತು ಕೃತಿಗಳು ಎಂಬ ಶೀರ್ಷಿಕೆಯಲ್ಲಿ) ಈಚೆಗೆ ಸಮಗ್ರ ಅಧ್ಯಯನ ಆಗಿದೆ. ಈ ಅಧ್ಯಯನದಲ್ಲಿ ಗಲಗಲಿ ಅವ್ವನವರ ಜೀವನ, ಕೀರ್ತನೆಗಳಲ್ಲಿ ನಿರೂಪಿತವಾಗಿರುವ ಸಾಮಾಜಿಕ ಮೌಲ್ಯ ಕುರಿತು, ಸಾಹಿತ್ಯದ ಮೌಲ್ಯ, ಭಾಷೆ ಶೈಲಿ ವಿಷಯಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ಇನ್ನೋರ್ವ ಶ್ರೇಷ್ಠ ಕೀರ್ತನಕಾರ್ತಿ ಹೆಳವನಕಟ್ಟೆ ಗಿರಿಯಮ್ಮ. ಇವಳು ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದವಳು. ಇವಳ ಜೀವನ ಮತ್ತು ಸಾಹಿತ್ಯವನ್ನು ಕುರಿತು ನಡೆದಷ್ಟು ಅಧ್ಯಯನಗಳು ಬೇರೆ ಯಾವ ಕೀರ್ತನಕಾರ್ತಿಯರ ಬಗ್ಗೆಯೂ ನಡೆದಿಲ್ಲ. ಕಮಲಾ ಹಂಪನಾ – ಹೆಳವನಕಟ್ಟೆ ಗಿರಿಯಮ್ಮ, ಕಾವ್ಯ ಪ್ರೇಮಿ– ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು,

ಜಯಸಿಂಹ–ಹೆಳವನಕಟ್ಟೆ ಗಿರಿಯಮ್ಮ. ಟಿ.ಕೆ. ಇಂದುಬಾಯಿ – ಹೆಳವನ ಕಟ್ಟೆಯ ಗಿರಿಯಮ್ಮನ ಹಾಡುಗಳು, ಬಿ.ವಿ.ವೀರಭದ್ರಪ್ಪ–ಹೆಳವನಕಟ್ಟೆ ಗಿರಿಯಮ್ಮ, ಕಾಕೋಳ ಸರೋಜಾ ರಾವ್ – ಹೆಳವನಕಟ್ಟೆ ಗಿರಿಯಮ್ಮ ಮುಂತಾದ ಕೃತಿಗಳಲ್ಲಿ ಗಿರಿಯಮ್ಮನ ಹಾಡುಗಳು ಮತ್ತು ಜೀವನ ವಿಚಾರವಾಗಿ ವಿವರಣೆ ಮೂಡಿ ಬಂದಿವೆ. ಗಿರಿಯಮ್ಮಳ ಸಮಗ್ರ ಸಾಹಿತ್ಯವನ್ನು ಕುರಿತು ಉಷಾರಾಣಿ ಪಿ. ಅವರು 'ಹೆಳವನಕಟ್ಟೆಯ ಗಿರಿಯಮ್ಮಳ ಜೀವನ ಮತ್ತು ಕೃತಿಗಳು' ಎಂಬ ಪ್ರೌಢ ಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಗಿರಿಯಮ್ಮಳ ಜೀವನ, ಬೆಳೆದು ಬಂದ ಪರಿಸರ, ಕೀರ್ತನೆಗಳ ವಿಶ್ಲೇಷಣೆ, ಖಂಡಕಾವ್ಯಗಳ ವಿವೇಚನೆ, ಭಾಷೆ, ಛಂದಸ್ಸಿನ ಅಧ್ಯಯನ, ಮಹಿಳಾ ದೃಷ್ಟಿಕೋನಗಳನ್ನು ಕುರಿತು ವಿವೇಚಿಸಲಾಗಿದೆ. ಹರಪನಹಳ್ಳಿ ಭೀಮವ್ವನ ಕೀರ್ತನೆಗಳ ಕುರಿತು ತಕ್ಕಮಟ್ಟಿನ ಅಧ್ಯಯನಗಳು ನಡೆದಿವೆ ಇವಳು ಕ್ರಿ.ಶ.೧೮೨೩ ರಿಂದ ಕ್ರಿ.ಶ. ೧೯೦೩ರ ವರೆಗೆ ಬದುಕಿದ್ದಳೆಂಬುದು ತಿಳಿದು ಬರುತ್ತದೆ. ಸರಿತಕುಮಾರ ದೇಸಾಯಿ ಅವರು 'ಹರಪನಹಳ್ಳಿ ಭೀಮವ್ವನ ಹಾಡುಗಳು ಒಂದು ಅಧ್ಯಯನ' ಎಂಬ ವಿಷಯ ಕುರಿತು ಅಧ್ಯಯನ ಮಾಡಿದ್ದಾರೆ. ಅಂಬಾಬಾಯಿಯವರು ಕ್ರಿ.ಶ. ೧೯೦೨ ರಿಂದ ೧೯೪೫ರವರೆಗೆ ಬದುಕಿದ್ದಳು. ಇವರ ಕೀರ್ತನೆಗಳ ಬಗೆಗೆ ಡಾ. ಅನಂತ ಪದ್ಮನಾಭರಾವ್ ಅವರು ಅಧ್ಯಯನ ಮಾಡಿದ್ದಾರೆ. ಇನ್ನುಳಿದ ಕೀರ್ತನ ಕಾರ್ತಿಯರಾದ ಯದುಗಿರಿಯಮ್ಮ, ಸರಸ್ವತಿಬಾಯಿ, ನಂಜನಗೂಡು ತಿರುಮಲಾಂಬ, ಬಳ್ಳಾರಿ ರಾಧಾಬಾಯಿ, ಕಳಸದ ಸುಂದರಮ್ಮ, ಗುಂಡಮ್ಮ. ಸರಸ್ವತಿಬಾಯಿಯವರ ಬಗೆಗೆ ಕ್ವಚಿತ್ತಾಗಿ ಬಿಡಿಯಾಗಿ ಪರಿಚಯಾತ್ಮಕ ಚಿಂತನೆಗಳು ನಡೆದಿವೆ. ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸಿರುವ ಸಮಗ್ರ ದಾಸಸಾಹಿತ್ಯ ಸಂಪುಟಗಳಲ್ಲಿ ಇವರೆಲ್ಲರ ಕೀರ್ತನೆಗಳನ್ನು ವಿದ್ವಾಂಸರಿಂದ ಒಂದೆಡೆಗೆ ಸಂಗ್ರಹಿಸಿ ದೀರ್ಘವಾದ ಪ್ರಸ್ತಾವನೆಯನ್ನು ಬರೆಯಿಸಿ ಪ್ರಕಟಿಸಿದ್ದಾರೆ. ಈ ಪ್ರಸ್ತಾವನೆಯಲ್ಲಿ ಕೀರ್ತನಕಾರ್ತಿಯರ ಸಂಕ್ಷಿಪ್ತ ಜೀವನ ವಿಚಾರ, ಕೃತಿ ಸಮೀಕ್ಷೆಯು ಸೇರಿಕೊಂಡಿದೆ. ಆಧುನಿಕ ಕೀರ್ತನಕಾರ್ತಿಯರಲ್ಲಿ ಓರ್ವಳಾದ ದೊಡ್ಡ ಸುಧಾಬಾಯಿಯು 'ಕಪಿಲನಾಯಕ' ಅಂಕಿತದಿಂದ ಮೂರುನೂರಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿರುವಳು. ಇವುಗಳನ್ನು ಕುರಿತು ಕುಮಾರಿ ಜ್ಯೋತಿಯವರು ಅಧ್ಯಯನ ಮಾಡಿದ್ದಾರೆ. ಕರ್ನಾಟಕದ ಕವಯತ್ರಿಯರು (ಡಾ.ಸರೋಜನಿ ಮಹೀಷಿ), ಕರ್ನಾಟಕದ ಹರಿದಾಸ ಸಂಚಯ ಮತ್ತು ಸಾಹಿತ್ಯ ಚಿಂತನೆ (ಡಾ.ಅರಳುಮಲ್ಲಿಗೆ ಪಾರ್ಥಸಾರಥಿ), ಹರಿದಾಸ ಪರಂಪರೆ ಮತ್ತು ಕೀರ್ತನಕಾರ್ತಿಯರು (ಡಾ.ಜ್ಯೋತಿ ಶಂಕರ), ಮಹಿಳಾ ಸಾಹಿತ್ಯ ಚರಿತ್ರೆ (ಡಾ.ಎಚ್.ಎಸ್.ಶ್ರೀಮತಿ) ಗಳಲ್ಲಿ ಮಹಿಳಾ ಕೀರ್ತನಕಾರ್ತಿಯರ ಕುರಿತು ಕೆಲವು ವಿಷಯಗಳು ಚರ್ಚಿಸಲ್ಪಟ್ಟಿವೆ.

ಮಹಿಳಾ ಕೀರ್ತನಕಾರ್ತಿಯರ ಪರಂಪರೆಯಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ಬಾಳಿಬದುಕಿದ ನಿಡಗುರುಕಿ ಜೀವೂಬಾಯಿಯು ಓರ್ವಳು. ಇವಳು ಇಂದಿನ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲೂಕಿನ ನಿಡಗುರುಕಿಯವಳು. ಪುಟ್ಟ ಗ್ರಾಮದ ಶಾನುಭೋಗರ ಕುಟುಂಬದ ದೇಶಮುಖ

ರಾಮಚಂದ್ರರಾಯರು ಮತ್ತು ರಮಾಬಾಯಿಯ ಉದರದಲ್ಲಿ ನಾಲ್ಕನೆಯ ಮಗಳಾಗಿ ೧೮ನೇ ನವ್ಹೆಂಬರ ೧೮೯೭ರಂದು ಜನಿಸಿದಳು. ೧೧ನೇ ವಯಸ್ಸಿಗೆ ವೈಧವ್ಯಕ್ಕೊಳಗಾದಳು. ವೈದಿಕ ಧರ್ಮದ ಅನ್ವಯ ವಿಧವಾ ಸಂಸ್ಕಾರ ಪಡೆದು ತವರು ಮನೆಯಲ್ಲಿಯೇ ಬದುಕು ಸಾಗಿಸಿದಳು. ಮನೆಯವರ ಸೇವೆ ಮತ್ತು ಗೋವುಗಳ ಪಾಲನೆಯಲ್ಲಿ ತನ್ನನ್ನು ಪೂರ್ಣ ತೊಡಗಿಸಿಕೊಂಡಳು. ಆರಂಭದಲ್ಲಿ ಕತೆಯನ್ನು ಬರೆಯಲು ಆರಂಭಿಸಿದಳು. ಆದರೆ ಇದು ಅವಳಿಗೆ ನೆಮ್ಮದಿಯನ್ನು ನೀಡಲಿಲ್ಲ. ತಾಯಿಯ ಮರಣಾನಂತರ ತಂದೆಯೊಂದಿಗೆ ಸಂಚಾರಿ ಜೀವನ ನಡೆಸಿದಳು. ಬೆಂಗಳೂರು, ಮೈಸೂರುಗಳಲ್ಲಿ ಸಹೋದರರ ಮನೆಯಲ್ಲಿ ವಾಸವಾದಳು. ಹಾಸನದಲ್ಲಿ ಉರಗಾದ್ರಿ ವಿಠ್ಠಲದಾಸರಿಂದ 'ಶ್ರೀಕಮಲನಾಭವಿಠ್ಠಲ' ಎಂಬ ಅಂಕಿತವನ್ನು ಪಡೆದುಕೊಂಡು 'ಕಮಲನಾಭ ವಿಠ್ಠಲ ಕಾಯಬೇಕಯ್ಯಾ' ಎಂಬ ಕೀರ್ತನೆ ಬರೆದಳು. ಇದು ಅವಳ ಬರೆದ ಮೊದಲು ಕೀರ್ತನೆ. ಒಟ್ಟು ೧೭೦ ಕೀರ್ತನೆಗಳನ್ನು ಬರೆದಿದ್ದಾಳೆ. ಇದರ ಜೊತೆಗೆ ಶ್ರೀಹರಿಲೀಲಾ, ಶ್ರೀರಾಮ ಜನನ ಮತ್ತು ಸೀತಾಕಲ್ಯಾಣ, ಶ್ರೀಕೃಷ್ಣಲೀಲಾ, ಸಮುದ್ರಮಥನ, ಶ್ರೀಪುರಂದರವಿಠ್ಠಲದಾಸರ ಚರಿತ್ರೆ, ಶ್ರೀಹರಿಮಾನಸ ಪೂಜಾ, ಗಾಲವ ಚರಿತ್ರೆ, ರಾಧಾಮಾಧವ ವಿಲಾಸ ಎಂಬ ಹತ್ತು ಖಂಡಕಾವ್ಯಗಳನ್ನು ರಚಿಸಿದ್ದಾಳೆ. ' ಸ್ಮರಿಸಿ ಬದುಕಿರೋ ಗುರುವರ ನರಹರಿಸ್ಮರಣೆ ಮರೆಯದೆ ಕೀರ್ತಿಸಿ ನಲಿದವರ' ಇದು ಜೀವೂಬಾಯಿಯು ಬರೆದ ಕೊನೆಯ ಕೀರ್ತನೆ. ಇಂಥ ವಿಶಿಷ್ಠ ಕೀರ್ತನಕಾರ್ತಿಯಾದ ಜೀವಮ್ಮ ೧೯೮೩ನೇ ಇಸ್ವಿಯ ಜೂನ ೯ರಂದು ಈ ಲೋಕದ ವ್ಯಾಪಾರ ಮುಗಿಸಿದಳು.

ನಿಡಗುರುಕಿ ಜೀವೂಬಾಯಿಯವರ ಕೀರ್ತನೆಗಳನ್ನು ಕುರಿತು ಇದುವರೆಗೆ ಗಂಭೀರವಾದ, ಪೂರ್ಣ ಪ್ರಮಾಣದ ಅಧ್ಯಯನಗಳು ನಡೆದಿಲ್ಲ, ಅಲ್ಲಲ್ಲಿ ಸಾಂದರ್ಭಿಕವಾಗಿ ವಿವಿಧ ಕೃತಿಗಳಲ್ಲಿ ಇವಳ ಸಂಕ್ಷಿಪ್ತ ಪರಿಚಯ ಬಂದಿದೆ. ಈ ಮೊದಲು ತಿಳಿಸಿದ ಡಾ. ಶ್ರೀಮತಿಯವರ– ಮಹಿಳಾ ಸಾಹಿತ್ಯ ಚರಿತ್ರೆಯಲ್ಲಿ, ಡಾ.ಜ್ಯೋತಿ ಶಂಕರ ಅವರ ಹರಿದಾಸ ಪರಂಪರೆ ಮತ್ತು ಕೀರ್ತನಕಾರ್ತಿಯರು ಕೃತಿಯಲ್ಲಿ ಜೀವೂಬಾಯಿ ಬದುಕು ಮತ್ತು ಕೃತಿಗಳ ಬಗೆಗೆ ಕೆಲವು ವಿಚಾರಗಳು ಪ್ರಸ್ತಾಪಿಸಲ್ಪಟ್ಟಿವೆ. ಲೀಲಾವತಿ ಎಸ್.ರಾವ್ ಅವರು (ಸಮಗ್ರ ದಾಸಸಾಹಿತ್ಯ ಸಂಪುಟ ೧೮, ಭಾಗ ೨) "ನಿಡಗುರುಕಿ ಜೀವೂಬಾಯಿಯವರ ಕೀರ್ತನೆಗಳು" ಎಂಬ ಕೃತಿಯನ್ನು ಸಂಪಾದನೆ ಮಾಡಿದ್ದಾರೆ ಇದರಲ್ಲಿ ಜೀವೂಬಾಯಿಯವರ ಸಂಕ್ಷಿಪ್ತ ಜೀವನ ಚಿತ್ರಣ ಮತ್ತು ಕೃತಿ ಸಮೀಕ್ಷೆ ಇದೆ. ಇದನ್ನು ಹೊರತುಪಡಿಸಿದರೆ ಯಾವುದೇ ರೀತಿಯ ಸಮಗ್ರ ಅಧ್ಯಯನಗಳು ಈವರೆಗೆ ನಡೆದಿಲ್ಲ.

ಆಧುನಿಕ ದಾಸಸಾಹಿತ್ಯದ ಮಹಿಳಾ ಕೀರ್ತನಕಾರರಲ್ಲಿ ಬಹು ಮುಖ್ಯ ಎನಿಸುವ ಜೀವೂಬಾಯಿಯು ಬಾಳಿ ಬದುಕಿದ ಪರಿಸರ, ಅವಳ ಕೀರ್ತನೆಗಳು ಹಿನ್ನೆಲೆ, ಮೂಡಿಬಂದ ವಿಷಯಗಳು, ಭಾಷೆ–ಸಂಸ್ಕೃತಿ–ಛಂದಸ್ಸಿನ ಅಂಶಗಳು, ಖಂಡಕಾವ್ಯಗಳಲ್ಲಿ ಒಡಮೂಡಿದ ವಿಭಿನ್ನ ವಿಷಯಗಳನ್ನು ಗಂಭೀರ ಅಧ್ಯಯನಗಳಿಗೆ ಒಳಪಡಿಸಿ ಅವಳ ಸಾಹಿತ್ಯದ ಮೇಲೆ ಹೊಸ ಬೆಳಕು ಚೆಲ್ಲಬೇಕೆಂಬ ಆಶಯವನ್ನಿಟ್ಟುಕೊಂಡು "ನಿಡಗುರುಕಿ

ಜೀವೂಬಾಯಿ ಅವರ ಕೀರ್ತನೆಗಳು: ಒಂದು ಅಧ್ಯಯನ" ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಜೀವೂಬಾಯಿಯವರ ಕೀರ್ತನೆಗಳಲ್ಲಿ ಮೂಡಿಬಂದ, ಸ್ತುತಿ–ಸ್ತೋತ್ರ, ನವವಿಧ ಭಕ್ತಿ, ಭಗವಂತನ ಸಂಕೀರ್ತನೆ, ದಶಾವತಾರಗಳು, ಲೋಕನೀತಿ, ಸಂಪ್ರದಾಯತೆ, ಭಾಷೆ–ಛಂದಸ್ಸು, ಸಾಂಸ್ಕೃತಿಕ ಅಂಶಗಳನ್ನು ಗುರುತಿಸುವುದು ಹಾಗೂ ಖಂಡಕಾವ್ಯಗಳನ್ನು ವಿಶ್ಲೇಷಣೆಗೊಳಪಡಿಸಿ ಅವುಗಳಲ್ಲಿಯ ಮುಖ್ಯ ವಿಷಯಗಳನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಖಂಡಕಾವ್ಯಗಳ ಪ್ರಸ್ತುತತೆಯನ್ನು ಅರಿತುಕೊಳ್ಳಲು ಕೂಡ ಪ್ರಯತ್ನಿಸಲಾಗಿದೆ. ಅಧ್ಯಯನದ ವ್ಯಾಪ್ತಿಯು ಬಹು ಸ್ಪಷ್ಟವಾಗಿದ್ದು ಜೀವೂಬಾಯಿಯ ಕೀರ್ತನೆಗಳಿಗೆ ಮತ್ತು ಖಂಡಕಾವ್ಯಗಳಿಗೆ ಸೀಮಿತವಾಗಿದೆ. ಈ ಅಧ್ಯಯನಕ್ಕೆ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕ ವಿಧಾನವನ್ನು ಬಳಸಿಕೊಳ್ಳಲಾಗಿದೆ.

ಮಹಾಪ್ರಬಂಧವು ಒಟ್ಟು ೯ ಅಧ್ಯಾಯಗಳನ್ನು ಒಳಗೊಂಡಿದೆ. ಉದ್ದೇಶ ಮತ್ತು ಸ್ವರೂಪ ಹಾಗೂ ವಿಧಿವಿಧಾನಗಳನ್ನು ಕುರಿತು ಮೊದಲ ಅಧ್ಯಾಯದಲ್ಲಿ ತಿಳಿಸಲಾಗಿದೆ. ಎರಡನೆಯ ಅಧ್ಯಾಯ ಹರಿದಾಸ ಮಹಿಳಾ ಪರಂಪರೆಯಲ್ಲಿ ಮಹಿಳಾ ಕೀರ್ತನಕಾರ್ತಿಯರ ಪರಂಪರೆಯಲ್ಲಿ ಬರುವ ಮಹಿಳೆಯರ ಜೀವನ ಮತ್ತು ಕೃತಿಗಳನ್ನು ಪರಿಚಯಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ನಿಡಗುರಕಿ ಜೀವೂಬಾಯಿಯವರ ಬಾಲ್ಯ, ಜೀವನ, ಜನ್ಮಸ್ಥಳ, ಬೆಳೆದ ಪರಿಸರ ಬದುಕಿದ ಕಾಲ, ಕೃತಿ ರಚನೆಯ ಪ್ರೇರಣೆಗಳನ್ನು ಕುರಿತು ವಿಷಯ ನಿರೂಪಿತಗೊಂಡಿದೆ. ಅಧ್ಯಾಯ ನಾಲ್ಕರಲ್ಲಿ, ಜೀವೂಬಾಯಿಯವರ ಕೀರ್ತನೆಗಳನ್ನು ವಿವಿಧ ವಿಭಾಗಗಳಲ್ಲಿ ವರ್ಗೀಕರಿಸಿ ವಿಶ್ಲೇಷಿಸಲಾಗಿದೆ. ಸ್ತುತಿ–ಸ್ತೋತ್ರ–ನವವಿಧ ಭಕ್ತಿ, ಭಗವಂತನ ಸಂಕೀರ್ತನೆ, ಆತ್ಮನಿವೇದನೆ, ದಶಾವತಾರ, ಲೋಕನೀತಿ, ಸಂಪ್ರದಾಯದ ಹಾಡುಗಳು, ಯುಗಾದಿಯಂದು ರಚಿತವಾದ ಕೀರ್ತನೆಗಳು ಹಾಗೂ ವಿಶೇಷ ಕೀರ್ತನೆಗಳು ಎಂದು ವಿಭಾಗೀಕರಿಸಿ ಕೀರ್ತನೆಗಳಲ್ಲಿ ಅಡಗಿರುವ ವಸ್ತು ವೈವಿಧ್ಯತೆ, ಪುರಾಣ ಕತೆಗಳು, ಭಾಗವತ ವಿಷಯಗಳು, ಸಂಪ್ರದಾಯ, ಆಚಾರ ವಿಚಾರಗಳನ್ನು ಅಭ್ಯಸಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಜೀವೂಬಾಯಿಯವರ ಖಂಡಕಾವ್ಯಗಳಾದ ಶ್ರೀಹರಿಲೀಲಾ, ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ, ಸಮುದ್ರಮಥನ, ಶ್ರೀಪುರಂದರ ವಿಠ್ಠಲದಾಸರ ಚರಿತ್ರೆ, ಶ್ರೀಹರಿಮಾನಸಪೂಜಾ, ಗಾಲವ ಚರಿತ್ರೆ, ಶ್ರೀವರಮಹಾಲಕ್ಷ್ಮಿಯ ಕತೆ, ಶ್ರೀ ಪಾಂಡುರಂಗ ಚರಿತ್ರೆ, ರಾಧಾಮಾಧವವಿಲಾಸ ಕೃತಿಗಳ ವಿಷಯವನ್ನು ಕುರಿತು ವಿವೇಚಿಸಲಾಗಿದೆ. ಖಂಡಕಾವ್ಯಗಳ ಪ್ರಸ್ತುತತೆಯನ್ನು ಕುರಿತು ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಜೀವೂಬಾಯಿಯವರ ಕೀರ್ತನೆಗಳಲ್ಲಿ ಅಡಕವಾದ ಭಾಷಿಕ ಮತ್ತು ಛಂದಸ್ಸಿನ ಅಂಶಗಳನ್ನು ಗುರುತಿಸಲಾಗಿದೆ. ಕೀರ್ತನೆಗಳಲ್ಲಿ ಬಳಕೆಯಾಗಿರುವ ಅನುಕರಣವಾಚಿ ಶಬ್ದಗಳು, ದ್ವಿರುಕ್ತಿಗಳು, ಧ್ವನಿವ್ಯತ್ಯಾಸ, ವರ್ಣ ಪಲ್ಲಟಗಳನ್ನು ಗುರುತಿಸಿದೆ. ಸೀಸ, ಷಟ್ಪದಿ, ಕಂದ ಎಂದು ಗುರುತಿಸಿದ ಪದ್ಯಗಳನ್ನು ಛಂದೋನಿಯಮಗಳಿಗೆ ಒಳಪಡಿಸಿ ಅವುಗಳು ನಿಯಮಬದ್ಧವಾಗಿಲ್ಲ ಎಂಬುದನ್ನು

ತಿಳಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಜೀವೂಬಾಯಿಯವರ ಕೀರ್ತನೆ ಮತ್ತು ಖಂಡಕಾವ್ಯಗಳಲ್ಲಿ ಅಡಕಗೊಂಡ ಸಾಂಸ್ಕೃತಿಕ ಅಂಶಗಳನ್ನು ಕುರಿತು ವಿವೇಚಿಸಲಾಗಿದೆ. ತಿಂಡಿ-ತಿನಿಸುಗಳು, ಉಡುಗೆ-ತೊಡುಗೆಗಳನ್ನು, ಸಂಪ್ರದಾಯ ಆಚರಣೆಗಳನ್ನು ಅವುಗಳ ಸ್ವರೂಪಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಮಹಿಳಾ ಕೀರ್ತನಕಾರ್ತಿಯರಲ್ಲಿ ಜೀವೂಬಾಯಿಯ ಸ್ಥಾನವನ್ನು ಗುರುತಿಸಲಾಗಿದೆ. ಇತರೆ ಮಹಿಳಾ ಕೀರ್ತನಕಾರ್ತಿಯರ ರಚನೆಗಳೊಂದಿಗೆ ಜೀವೂಬಾಯಿಯ ಕೀರ್ತನೆಗಳನ್ನಿಟ್ಟು ನೋಡಿ ಅವಳು ಹಿರಿಯ ಕೀರ್ತನಕಾರ್ತಿಯರ ಪ್ರಭಾವಕ್ಕೊಳಗಾದುದನ್ನು ಗುರುತಿಸಲಾಗಿದೆ. ಒಂಭತ್ತನೆಯ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ. ಅನುಬಂಧಗಳಲ್ಲಿ ಭಾವಚಿತ್ರ ಮತ್ತು ಆಕರ ಗ್ರಂಥಗಳನ್ನು ಕೊಡಲಾಗಿದೆ. ಹೀಗೆ ಅಧ್ಯಯನವು ಸಂಶೋಧನಾತ್ಮಕವಾಗಿ ಅಧಿಕೃತವೂ, ವೈವಿಧ್ಯಪೂರ್ಣ ಮತ್ತು ಮಾಹಿತಿಪೂರ್ಣ ಆಗಿರುವಂತೆ ಪ್ರಯತ್ನಿಸಲಾಗಿದೆ.

ಅಧ್ಯಾಯ ೨

# ಮಹಿಳಾ ಹರಿದಾಸ ಪರಂಪರೆ

ವಚನಸಾಹಿತ್ಯದ ನಂತರ ಕರ್ನಾಟಕದಲ್ಲಿ ಬಹುವ್ಯಾಪಕವಾಗಿ ಜನಪ್ರೀಯತೆಯೆಡೆಗೆ ಬೆಳೆದ ಸಾಹಿತ್ಯವೆಂದರೆ ದಾಸಸಾಹಿತ್ಯ. ಈ ದಾಸಸಾಹಿತ್ಯದ ಉಗಮವು ಯಾವಾಗ, ಯಾರಿಂದ ಆಯಿತು ಎಂಬುದರ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ "ದಾಸಸಾಹಿತ್ಯದ ನಿಜವಾದ ಉಗಮ ಋಗ್ವೇದದಲ್ಲಿ, ವೇದಯುಗದ ಮಹಾಮನೀಷಗಳು ಋಗ್ವೇದದ ವಿಷ್ಣು ಸೂಕ್ತ, ಅಗ್ನಿ ಸೂಕ್ತಗಳಲ್ಲಿ ಪರಮಾತ್ಮನನ್ನು ಕುರಿತು ಭಕ್ತಿ ಭಾವಪರವಶರಾಗಿ ದಾಸ್ಯಭಾವ ತುಂಬಿ ಸ್ತುತಿಸಿದ್ದಾರೆ. ಭಾಗವತದ ಭಕ್ತಿಯೋಗವಂತೂ ಪ್ರಹ್ಲಾದರ ನವವಿಧ ದಾಸ್ಯ ತತ್ವದ ನಿರೂಪಣೆಯ ನಿದರ್ಶನ"[೧] ಎಂಬ ಅಂಶವು ತಿಳಿದುಬರುತ್ತದೆ.

ಮಧ್ವಾಚಾರ್ಯರ ಪ್ರಭಾವದಿಂದಾಗಿ ಭಾರತ ದೇಶಾದ್ಯಂತ ಬೇರೆ ಬೇರೆ ವ್ಯಕ್ತಿಗಳ ಮೇಲೆ ಭಾಗವತ ಭಕ್ತಿಯು ತನ್ನ ನೆರಳನ್ನು ಮೂಡಿಸಿದೆ. ಅವರಲ್ಲಿ ಬಂಗಾಲದ ಚೈತನ್ಯರು. ಮಹಾರಾಷ್ಟ್ರದ ಜ್ಞಾನೇಶ್ವರರು ತೀವ್ರ ಪ್ರಭಾವಕ್ಕೆ ಒಳಗಾದುದು ಕಂಡಬರುತ್ತದೆ. ಮುಂದುವರೆದು ಮಹಾರಾಷ್ಟ್ರದ ತುಕಾರಾಮ, ಏಕನಾಥ, ನಾಮದೇವ, ಮುಂತಾದ ಸಂತ ಕವಿಗಳ ಮೇಲೆ ಅಪಾರ ಪ್ರಮಾಣದ ಛಾಪನ್ನು ಮೂಡಿಸಿತು. ಅಂತೆಯೇ ಕನ್ನಡ ದಾಸ ಪರಂಪರೆಯ ಮೇಲೆಯೂ ಮದ್ವಾಚಾರ್ಯರ ಪ್ರೇರಣೆ ಮತ್ತು ಪ್ರಭಾವವು ಉಂಟಾಯಿತು. ನರಹರಿತೀರ್ಥರಿಂದ ಕನ್ನಡದಲ್ಲಿ ದಾಸ ಪಂಥ ಆರಂಭವಾಯಿತು ಎಂಬುದನ್ನು ಸಂಶೋಧಕರಾದ ಆರ್. ಎಸ್.ಪಂಚಮುಖಿಯವರು ತಮ್ಮ 'ಕರ್ನಾಟಕದ ಹರಿದಾಸ ಸಾಹಿತ್ಯ' ಕೃತಿಯಲ್ಲಿ ಅಭಿಪ್ರಾಯಪಡುತ್ತಾರೆ. ಹರಿದಾಸ ಸಾಹಿತ್ಯದ ಮೂಲ ಪ್ರವರ್ತಕರು ಶ್ರೀ ಅಚಲಾನಂದದಾಸರು ಎಂಬುದು ಶ್ರೀ ಬೇಲೂರು ಕೇಶವದಾಸರ ಅಭಿಮತ. ಡಾ.ರಂ.ಶ್ರೀ. ಮುಗಳಿಯವರು ೧೪ ನೇ ಶತಮಾನದ ನರಹರಿ ತೀರ್ಥರಿಂದಲೇ ದಾಸಸಾಹಿತ್ಯ ಆರಂಭಗೊಂಡಿತು ಎಂಬುದನ್ನು ತಿಳಿಸಿದ್ದಾರೆ. ಆದರೆ ಕ್ರಿ.ಶ. ೧೪೮೪ ರಿಂದ ೧೫೬೪ ರ ಅವಧಿಯಲ್ಲಿ ಬಾಳಿರುವ ಶ್ರೀ ಪುರಂದರದಾಸರು ತಮ್ಮ ಕೀರ್ತನೆಯೊಂದರಲ್ಲಿ ಮಧ್ವಾಚಾರ್ಯರು ಹರಿದಾಸ ಪರಂಪರೆಯ ಮೂಲ ಪುರುಷರು ಎಂಬುದನ್ನು ತಿಳಿಸಿದ್ದಾರೆ.

ಮದ್ವಾಚಾರ್ಯರ ಶಿಷ್ಯರಾದ ನರಹರಿತೀರ್ಥರು, ಜಯತೀರ್ಥರು, ಶ್ರೀಪಾದರಾಜರು, ವ್ಯಾಸತೀರ್ಥರು ತಮ್ಮ ಲೌಕಿಕವಾದ ರಚನೆಗಳಿಂದ ಜನರಿಗೆ ನೀಡಿದ ಉಪದೇಶವು ದಾಸ ಸಾಹಿತ್ಯದ ಮೊದಲ ಘಟ್ಟ, ವಿಜಯನಗರದ ಶ್ರೀಕೃಷ್ಣದೇವರಾಯರ ಆಳ್ವಿಕೆಯ ಸಂದರ್ಭದಲ್ಲಿ ಬೆಳೆದು ಬಂದ

ದಾಸಸಾಹಿತ್ಯವು ದಾಸ ಸಾಹಿತ್ಯ ಪರಂಪರೆಯಲ್ಲಿಯೇ ಉನ್ನತಮಟ್ಟದ ಸುಗ್ಗಿಕಾಲದ ಹಂತ. ಇದು ಎರಡನೆಯ ಘಟ್ಟ. ಈ ಘಟ್ಟವನ್ನು ದಾಸ ಸಾಹಿತ್ಯದ ಹೊನ್ನಬೆಳೆಯ ಹಂತವೆಂದು ಕರೆಯುತ್ತೇವೆ. ಪುರಂದರದಾಸರು, ಕನಕದಾಸರು, ವಾದಿರಾಜರು ಮುಂತಾದವರು ಈ ಅವಧಿಯಲ್ಲಿ ದಾಸ ಸಾಹಿತ್ಯವನ್ನು ಉನ್ನತ ಶಿಖರಕ್ಕೇರಿಸಿದರು. ನಂತರ ಬಂದ ವಿಜಯದಾಸರು, ಪ್ರಸನ್ನವೆಂಕಟದಾಸರು, ಮಹಿಪತಿದಾಸರು, ಗೋಪಾಲದಾಸರು ಇನ್ನುಳಿದ ದಾಸಶ್ರೇಷ್ಠರಿಂದ ವಿಜಯನಗರ ಸಾಮ್ರಾಜ್ಯದ ಪಥನಾನಂತರ ದಾಸಸಾಹಿತ್ಯವು ಬೆಳೆದು ಬಂದಿತು. ಇದನ್ನು ದಾಸ ಸಾಹಿತ್ಯದ ಮೂರನೆಯ ಘಟ್ಟವೆಂದು ಗುರುತಿಸುತ್ತಾರೆ. ಕಾಖಂಡಕಿಯ ಕೃಷ್ಣದಾಸರು, ಪ್ರಾಣೇಶದಾಸರು, ಗುರು ಪ್ರಾಣೇಶರಾಯರು ಮುಂತಾದವರು ದಾಸ ಸಾಹಿತ್ಯವನ್ನು ಮುಂದುವರೆಸಿಕೊಂಡು ಬಂದುದು ನಾಲ್ಕನೆಯ ಘಟ್ಟ. ಇಂದಿಗೂ ಈ ದಾಸ ಸಾಹಿತ್ಯ ಪರಂಪರೆಯು ಮುಂದುವರೆಯುತ್ತಿರುವುದು ಸಪ್ತಾಹ, ಕೀರ್ತನೆಗಳಂತಹ ಧಾರ್ಮಿಕ ಆಚರಣೆಗಳಿಂದ ತಿಳಿದುಬರುತ್ತದೆ.

"ಎಚ್.ಕೆ.ವೇದವ್ಯಾಸಾಚಾರ್ಯರು ನರಹರಿತೀರ್ಥರೇ ದಾಸಕೂಟಕ್ಕೆ ಆಚಾರ್ಯರೆಂದು ಹೇಳಬಹುದು ಎಂದಿದ್ದಾರೆ. ರಂ.ಶ್ರೀ.ಮುಗಳಿಯವರು, ಕಪಟರಾಳ ಕೃಷ್ಣರಾಯರು ಈ ವಾದವನ್ನು ಅನುಮೋದಿಸಿದ್ದಾರೆ"[೨] ಒಟ್ಟಿನಲ್ಲಿ ನರಹರಿತೀರ್ಥರೇ ದಾಸಸಾಹಿತ್ಯದ ಮೂಲ ಪುರುಷರೆಂಬುದು ಹಲವಾರು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಆದ್ದರಿಂದ ನರಹರಿ ತೀರ್ಥರೆ ದಾಸಸಾಹಿತ್ಯದ ಪ್ರವರ್ತಕರೆಂಬುದು ನಮ್ಮ ಅಭಿಪ್ರಾಯ.

ಇಂಥ ಸುದೀರ್ಘವಾದ ದಾಸಸಾಹಿತ್ಯ ಪರಂಪರೆಯಲ್ಲಿ ಪುರುಷರ ಜೊತೆಗೆ ಸರಿಸಮವಾಗಿ ಮಹಿಳೆಯರೂ ಕೂಡ ಕೀರ್ತನೆ ರಚಿಸಿರುವುದು ಕಂಡುಬರುತ್ತದೆ. ದಾಸ ಸಾಹಿತ್ಯಕ್ಕಿಂತ ಪೂರ್ವದ ವಚನಸಾಹಿತ್ಯ ಸಂದರ್ಭದಲ್ಲಿ ಮಹಿಳೆಯರು ಸಾಹಿತ್ಯ ರಚನೆಯಲ್ಲಿ ತೊಡಗಿರುವ ಬಗ್ಗೆ ಆಧಾರಗಳು ದೊರೆಯುತ್ತವೆ.

ವಚನಸಾಹಿತ್ಯ ರಚನಾ ಸಂದರ್ಭದಲ್ಲಿ ಪ್ರಪ್ರಥಮವಾಗಿ ಮಹಿಳೆಯರು ಪುರುಷರಿಗೆ ಸರಿಸಮಾನವಾಗಿ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ವಿಶಿಷ್ಠ ಸಾಧನೆ ಮಾಡಿದ್ದಾರೆ. ಅಂಥ ವಿಶಿಷ್ಠ ಸಾಧಕರಲ್ಲಿ ಇದುವರೆಗೆ ಲಭ್ಯವಾಗಿರುವ ಆಕರಗಳ ಮೇಲಿಂದ ಅಕ್ಕಮಹಾದೇವಿಯೇ ಮೊದಲಿಗಳು ಎಂಬುದು ತಿಳಿದುಬರುತ್ತದೆ. ಹಾಗೆಯೇ ದಾಸಸಾಹಿತ್ಯ ರಚನೆಯ ಸಂದರ್ಭದಲ್ಲಿಯೂ ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡಿರುವುದು ಗೊತ್ತಾಗುತ್ತದೆ. ಆದರೆ ಈ ಕುರಿತು ಇದುವರೆಗೆ ಹೆಚ್ಚಿನ ಪ್ರಮಾಣದ ಸಂಶೋಧನೆಗಳು ನಡೆದಿಲ್ಲ ಎಂಬುದು ಕಂಡುಬರುತ್ತದೆ. ಕವಿಚರಿತೆಕಾರರು ಕೇವಲ ಹೆಳವನಕಟ್ಟೆಯ ಗಿರಿಯಮ್ಮ, ಹರಪನಹಳ್ಳಿ ಭೀಮವ್ವನವರ ಹೆಸರುಗಳನ್ನು ಮಾತ್ರ ಪ್ರಸ್ತಾಪಿಸುತ್ತಾರೆ. ಇಲ್ಲಿಯವರೆಗೆ ಲಭ್ಯವಿರುವ ಆಕರ ಮತ್ತು ಮಾಹಿತಿಗಳ ಆಧಾರದ ಮೇಲೆ ದಾಸಸಾಹಿತ್ಯ ಪರಂಪರೆಯಲ್ಲಿ ಮೂಡಿಬಂದ ಮಹಿಳಾ ಪರಂಪರೆಯನ್ನು ಇಲ್ಲಿ ಗುರುತಿಸಲು ಯತ್ನಿಸಲಾಗಿದೆ.

೧೩ನೇ ಶತಮಾನದಿಂದೀಚೆಗೆ ಬೆಳೆದು ಬಂದ ದಾಸಸಾಹಿತ್ಯದಲ್ಲಿ ಆರಂಭದ ಐದು ಶತಮಾನಗಳಲ್ಲಿ ಯಾವುದೇ ಮಹಿಳಾ ಕೀರ್ತನಕಾರರು ಇದ್ದ ಬಗ್ಗೆ ತಿಳಿದುಬರುವುದಿಲ್ಲ. ಮಧ್ವಾಚಾರ್ಯರ ಸಹೋದರಿ ಕಲ್ಯಾಣಿದೇವಿ, ಪುರಂದರದಾಸರ ಪತ್ನಿ ಸರಸ್ವತಿಬಾಯಿ ಮತ್ತು ಅವಳ ಪುತ್ರಿಯರು ಕೀರ್ತನೆ ರಚಿಸಿದ್ದಾರೆ ಎಂದು ಹೇಳುತ್ತಾರೆ. ಆದರೆ ಈ ಹೇಳಿಕೆ ಒಪ್ಪಿಕೊಳ್ಳುವಲ್ಲಿ ನಿರ್ದಿಷ್ಟವಾದ ಮತ್ತು ನಿಖರವಾದ ಆಕರಗಳ ಕೊರತೆ ಎದ್ದು ಕಾಣುತ್ತದೆ ೧೮ನೇ ಶತಮಾನದ ಕೊನೆಯವರೆಗೆ ಯಾವುದೇ ಮಹಿಳಾ ಕೀರ್ತನಕಾರ್ತಿಯರ ಇಡಿಯಾದ ಕೀರ್ತನೆಗಳು ನಮಗೆ ಲಭ್ಯವಾಗುವುದಿಲ್ಲ. ಇದುವರೆಗೆ ಲಭ್ಯವಿರುವ ಆಕರಗಳ ಆಧಾರದ ಮೇಲಿಂದ ಗಲಗಲಿ ಅವ್ವನವರೇ ಪ್ರಪ್ರಥಮ ಮಹಿಳಾ ಕೀರ್ತನಕಾರ್ತಿಯರು ಎಂದು ವಿದ್ವಾಂಸರು ಗುರ್ತಿಸಿದ್ದಾರೆ. ಗಲಗಲಿ ಅವ್ವನವರಿಂದ ಇಲ್ಲಿಯವರೆಗೆ ಕೀರ್ತನ ರಚನೆಯಲ್ಲಿ ತೊಡಗಿದ ಮಹಿಳಾ ಬರಹಗಾರರ ಪರಂಪರೆ ಹೀಗಿದೆ.

**ಗಲಗಲಿಯ ಅವ್ವನವರು :– ( ಕ್ರಿ.ಶ.೧೭೨೫)**

ಕೀರ್ತನ ಸಾಹಿತ್ಯ ಪರಂಪರೆಯಲ್ಲಿ ಕಂಡುಬರುವ ಮೊದಲ ಮಹಿಳೆ ಗಲಗಲಿ ಅವ್ವನವರು. ಇವರು ಕೊಪ್ಪಳ ತಾಲೂಕಿನ (ಇಂದು ಕೊಪ್ಪಳ ಜಿಲ್ಲೆ) ಭೋಗಾಪುರದವರು. ತಂದೆ ಗ್ರಾಮದ ಶಾನುಭೋಗರು. ಇವರ ಹಿಂದೆ ಕೀರ್ತನೆ ರಚಿಸಿದ ಯಾವುದೇ ಮಹಿಳೆ ಕಾಣುವುದಿಲ್ಲ. ಶ್ರೀನಿವಾಸ ಹಾವನೂರ ಅವರು ಗಲಗಲಿ ಅವ್ವನವರೇ ದಾಸಸಾಹಿತ್ಯ ಪರಂಪರೆಯಲ್ಲಿ ಬರುವ ಮೊದಲ ಮಹಿಳೆ ಎಂದು ಹೇಳಿದ್ದಾರೆ. ಇದೇ ರೀತಿಯ ಅಭಿಪ್ರಾಯವನ್ನು ತಾಸಗಾಂವಕರರು ವ್ಯಕ್ತಪಡಿಸಿದ್ದಾರೆ.

ವಿಜಾಪೂರ ಜಿಲ್ಲೆಯ ಗಲಗಲಿಯ ಗೋವಿಂದಾಚಾರ್ಯರರ ಮಗ ಮುದ್ಗಲಾಚಾರ್ಯರು ತನ್ನ ಐದು ಮಕ್ಕಳ ಜೊತೆಗೆ ಮೈಸೂರಿಗೆ ಹೋಗಿ ಮರಳಿ ಬರುವಾಗ ಭೋಗಾಪುರದ ಶಾನಭೋಗರ ಮನೆಯಲ್ಲಿ ಉಳಿದರು. ಮನೆಯಲ್ಲಿ ಓಡಾಡುತ್ತಿದ್ದ ಶಾನುಭೋಗರ ಹನ್ನೆರಡು ವರ್ಷದ ಮಗಳನ್ನು ನೋಡಿದ ಮುದ್ಗಲಾಚಾರ್ಯರು "ನಾನು ಈ ಕನ್ನೆಯನ್ನು ಮುದುವೆಯಾಗಬೇಕೆಂದು ಬಯಸಿರುವೆ ಇದಕ್ಕೆ ನಿಮ್ಮ ಅಭಿಪ್ರಾಯವೇನು" ಎಂದು ಶಾನುಭೋಗರನ್ನು ಕೇಳಲು "ಆಚಾರ್ಯರೇ ಹನ್ನೆರಡು ನೂರು ರೂಪಾಯಿಗಳನ್ನು ಕೊಟ್ಟರೆ ನನ್ನ ಮಗಳನ್ನು ನಿಮಗೆ ಕೊಡುತ್ತೇನೆ" ಎಂದರು. ಅಷ್ಟರಲ್ಲಿ ಆಚಾರ್ಯರು ಅಷ್ಟು ಹಣವನ್ನು ಶಾನುಭೋಗರಿಗೆ ಕೊಟ್ಟರು. ಇದನ್ನೇ ನೋಡುತ್ತಿದ್ದ ಆ ಮಗಳು ತಾನೇ ಸ್ವತ: ಆಚಾರ್ಯರೊಂದಿಗೆ ತೆರಳಿದಳು. ಮುಂದೆ ತಮ್ಮ ಸ್ವಗ್ರಹದಲ್ಲಿ ಮುದ್ಗಲಾಚಾರ್ಯರು ೯೫ನೇ ವಯಸ್ಸಿನಲ್ಲಿ ರಮಾಬಾಯಿಯನ್ನು ಮದುವೆಯಾದರು. ಗಲಗಲಿ ವಂಶದವರು ಮುದ್ಗಲಾಚಾರ್ಯರರನ್ನು ಅಪ್ಪನೆಂದು, ರಮಾಬಾಯಿಯವರನ್ನು ಅವ್ವನೆಂದು ಗೌರವಿಸುವರು.

ಮದುವೆಯಾದ ಕೇವಲ ಎಂಟು ದಿನಗಳಲ್ಲಿ ರಮಾಬಾಯಿಯವರಿಗೆ ವೈಧವ್ಯ ಪ್ರಾಪ್ತವಾಯಿತು. ಸಾಯುವಾಗ ಆಚಾರ್ಯರು ತಮ್ಮ ಐದು ಮಕ್ಕಳಿಗೆ "ನನ್ನ ಹೆಂಡತಿಗೆ ನೀವೇ ವಿದ್ಯಾದಾನ ಮಾಡಬೇಕು. ಇವಳಿಂದ ನಮ್ಮ ವಂಶವು ಒಳ್ಳೆಯ ಕೀರ್ತಿ ಮತ್ತು ಮರ್ಯಾದೆಯನ್ನು ಗಳಿಸುತ್ತದೆ" ಎಂದು ಹೇಳಿದರಂತೆ. ತಂದೆಯ ಉಪದೇಶದಂತೆ ಮಕ್ಕಳು ತಮ್ಮ ತಾಯಿಗೆ ವಿದ್ಯಾಗುರುಗಳಾಗಿ ವಿದ್ಯಾಭ್ಯಾಸ ಮಾಡಿಸಿದರು. ಮಕ್ಕಳಿಂದ ವಿದ್ಯಾಭ್ಯಾಸ ಕಲಿತು ವಿವಿಧ ವಿಷಯಗಳಲ್ಲಿ ಪಾಂಡಿತ್ಯವನ್ನು ಸಾಧಿಸಿದರು.

ಒಮ್ಮೆ ಉತ್ತರಾದಿ ಮಠದ ಸತ್ಯಧರ್ಮ ಸ್ವಾಮಿಗಳು ಗಲಗಲಿಗೆ ಬಂದಿದ್ದರು. ಅಲ್ಲಿ ಪಾಠ ಹೇಳುವಾಗ ಒಂದು ಸಲ ವಾಕ್ಯಾರ್ಥದಲ್ಲಿ ಸಂದೇಹ ಬಂದಂತೆ ವರ್ತಿಸಿದರು. ಆ ಮಠದಲ್ಲಿನ ಉಳಿದ ವಿದ್ವಾಂಸರು ತಾವೇ ಜಾಣರೆಂದು ಬೀಗುತ್ತಿದ್ದರು. ಅವರ ಅಹಂಕಾರವನ್ನು ತೊಲಗಿಸಬೇಕೆಂಬ ಉದ್ದೇಶದಿಂದಲೇ ಈ ಸಂದೇಹ ಪ್ರಸ್ತಾಪಿಸಿದರು. ಎಷ್ಟೇ ಪ್ರಯತ್ನಿಸಿದರೂ ಸಂದೇಹ ಪರಿಹಾರವಾಗಲಿಲ್ಲ. ಆಗ ಶ್ರೀಗಳು ಇದಕ್ಕೆ ಅವ್ವನವರು ಪರಿಹಾರ ಹೇಳುತ್ತಾರೆ ಕೇಳಿರಿ ಎಂದಾಗ, ಎಲ್ಲ ಪಂಡಿತರು ಅವ್ವನವರ ಬಳಿಹೋಗಿ ಸಂದೇಹ ಪರಿಹಾರ ಮಾಡಿಕೊಂಡರು.

ಒಂದುಸಾರಿ ಅವ್ವನವರು ಪುಣೆಯಲ್ಲಿ ಶ್ರಾವಣಮಾಸದ ಸಭೆಗಾಗಿ ಹೋದಾಗ ಉತ್ತರದ ಪಂಡಿತರು ದಕ್ಷಿಣದ ಪಂಡಿತರನ್ನು ಸೋಲಿಸಿದರು. ಇಪ್ಪತ್ತೆಂಟು ದಿನಗಳ ಕಾಲ ವಾದ ವಾಗ್ವಾದ ನಡೆಯಿತು. ಕೊನೆಗೆ ಆರು ಪಂಡಿತರು ನಿರುತ್ತರರಾಗಿ ಹಿಂದಿರುಗುವ ಪ್ರಸಂಗ ಬಂತು. ಆ ಪಂಡಿತರು ತಮ್ಮ ತಾಯಿ ಅವ್ವನವರನ್ನು ಕೇಳಿ ಎಲ್ಲ ವಿಷಯ ತಿಳಿದುಕೊಂಡು ಪುನಃ ಪಂಡಿತ ಮಕ್ಕಳು ವಾದ ಆರಂಭಿಸಿದರು. ಇದನ್ನು ತಿಳಿದು ಸಂತೋಷಪಟ್ಟ ಪೇಶ್ವೆಯವರು ದಕ್ಷಿಣದವರ ಮಾನವನ್ನು ಉಳಿಸಿದರೆಂದು ಅವರಿಗೆ ಬಾಗಲಕೋಟೆಯ ಉಪಖಜಾನೆಯಲ್ಲಿ ವಾರ್ಷಿಕ ಮಾಶಾಸನವನ್ನು ಕೊಡಮಾಡಿದರು. ಹೀಗೆ ಅವ್ವನವರು ಎಲ್ಲೆಡೆಗೆ ಸಂಚರಿಸಿ ಬದುಕಿನ ಕೊನೆಗಾಲವನ್ನು ಶೂರ್ಪಾಲಿಯಲ್ಲಿ ಕಳೆದು ಅಲ್ಲಿಯೇ ಕೊನೆಯುಸಿರೆಳೆದರು.

ಮುಯ್ಯದ ಪದಗಳು, ಮೋರೆಗೆ ನೀರು ತಂದ ಹಾಡುಗಳು, ಶೃಂಗಾರ ತಾರತಮ್ಯ, ಬೀಗರ ಹಾಡುಗಳು ಅವ್ವನವರ ಕೃತಿಗಳಾಗಿವೆ. 'ಶ್ರೀ ರಾಮೇಶ' ಮತ್ತು 'ರಮೀ ಅರಸ' ಎಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸಿದ್ದಾರೆ.

ಭಕ್ತಗಣದ ಸಹವಾಸದಲ್ಲಿರುವುದು ಆಭರಣವನ್ನು ತೊಟ್ಟಂತೆ ಎಂಬುದು ಅವ್ವನವರ ನಿಲುವು. ಶೃಂಗಾರ ತಾರತಮ್ಯದಲ್ಲಿ ವಿವಿಧ ಆಭರಣಗಳನ್ನು ಆಕರ್ಷಕ, ಅಲಂಕಾರ ಭಾಷೆಯಲ್ಲಿ ತಿಳಿಸಿದ್ದಾಳೆ. ಈ ಕೃತಿಯಲ್ಲಿ ಮಹಿಳೆಯರ ಆಭರಣಗಳನ್ನು ಮಾತ್ರ ಹೇಳುತ್ತಾಳೆ. ದೇವತಾ ತಾರತಮ್ಯದ ಜೊತೆಗೆ ಆಭರಣಗಳ ತಾರತಮ್ಯ ಜ್ಞಾನವೂ ಕೂಡಿಕೊಂಡಿದೆ.

ವಿವಾಹದ ಸಂದರ್ಭದಲ್ಲಿ ಹೆಣ್ಣಿನ ಬೀಗರು ಗಂಡಿನ ಬೀಗರ ಮನೆಗೆ ಮೊರೆಗೆ ನೀರು ತರುವುದು ಒಂದು ಸಂಪ್ರದಾಯ. ಈ ಸಂದರ್ಭದಲ್ಲಿ ಪರಸ್ಪರ ಒಬ್ಬರನ್ನೊಬ್ಬರು ನಿಂದಿಸುವುದು ವಿಶೇಷ.

ದೇವತೆಗಳಿಲ್ಲಿಯೂ ಈ ರೀತಿಯ ಸಂಪ್ರದಾಯವನ್ನು ಕಲ್ಪಿಸಿಕೊಂಡು ಅವ್ವನವರು ಉತ್ತರ ಮತ್ತು ಪ್ರತ್ಯುತ್ತರ ಮಾದರಿಯಲ್ಲಿ ಬಲು ಸೊಗಸಾಗಿ ಹಾಡುಗಳನ್ನು ರಚಿಸಿದ್ದಾರೆ. ಮುಯ್ಯದ ಹಾಡುಗಳು ಅವ್ವನವರ ಮತ್ತೊಂದು ವಿಶೇಷ. ಸ್ವತ: ಅವ್ವನವರೇ ಇವುಗಳನ್ನು ಹಾಡುತ್ತಿದ್ದರು. ಸೀಗಿಹುಣ್ಣಿಮೆ ಮತ್ತು ಗೌರಿಹುಣ್ಣಿಮೆಯ ದಿನ ಮುಯ್ಯನ್ನು ತೀರೀಸುವುದು ವಿಶೇಷ ವಾಡಿಕೆ. ಸುಭದ್ರೆ ಮತ್ತು ದ್ರೌಪದಿಯರು ರುಕ್ಮಿಣಿಗೆ ಮುಯ್ಯನ್ನು ಒಯ್ಯುವುದು. ಇದರಲ್ಲಿ ಪುರುಷರು ಪಾಲ್ಗೊಂಡು ಆನಂದಿಸುತ್ತಾರೆ. ಈ ಹಾಡುಗಳಲ್ಲಿ ಕೃಷ್ಣನ ಪ್ರೀತಿಯ ವರ್ಣನೆ, ರುಕ್ಮಿಣಿ ಸತ್ಯಭಾಮೆಯರ ಜಗಳ, ಸುಭದ್ರೆ ದ್ರೌಪದಿಯರ ಅಸಹಾಯಕ ಸ್ಥಿತಿ ನಿರೂಪಿತಗೊಂಡಿದೆ.

ಹೀಗೆ ಅವ್ವನವರ ರಚನೆಗಳಲ್ಲಿ ವಿಶೇಷವಾದ ವಸ್ತು, ಭಾಷೆ, ನಿರೂಪಣೆ ವಿಧಾನ ಆಕರ್ಷಕವಾಗಿ ಮೂಡಿನಿಂತಿದೆ. ನಂತರ ಅವ್ವನವರ ಶಿಷ್ಯೆ ಭಾಗಮ್ಮಳು ಕೀರ್ತನ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿರುವುದು ತಿಳಿದುಬರುತ್ತದೆ.

**ಭಾಗಮ್ಮ :-**

ಇವಳಿಗೆ ಪ್ರಯಾಗವ್ವ ಎಂಬ ಹೆಸರು ಇದ್ದ ಬಗ್ಗೆ ತಿಳಿದುಬರುತ್ತದೆ. ಯಾವಾಗಲು ಇವಳು ಅವ್ವನೊಂದಿಗೆ ಇರುತ್ತಿದ್ದಳು. ಅವ್ವನ ಹಾಡುಗಳನ್ನು ಕಂಠಪಾಠ ಮಾಡಿ ಹಾಡುತ್ತಿದ್ದಳು. ಒಮ್ಮೆ ಭಾಗಮ್ಮ ಕಾಲರಾ ರೋಗಕ್ಕೆ ಒಳಗಾದಳು. ಆಗ ಅವ್ವನವರು ಇವಳಿಗೆ ಕಾಲರಾ ಬೇನೆ ಕಳೆದುಕೊಳ್ಳಲು ತೃತಿಯ ಸ್ಕಂದ ಭಾಗವತ ರಚಿಸುವಂತೆ ಹೇಳಿದರು. ಅವ್ವನವರ ಆದೇಶದ ಮೇರೆಗೆ ಭಾಗಮ್ಮಳು ಕೃತಿ ರಚಿಸಿ ಕಾಲರಾ ಬೇನೆಯಿಂದ ಮುಕ್ತಳಾದಳು. ಈ ಕೃತಿಯನ್ನು ಹೊರತುಪಡಿಸಿ ಭಾಗಮ್ಮಳು ರಚಿಸಿದ ಇನ್ನುಳಿದ ಯಾವುದೇ ಕೃತಿಗಳು ಇದುವರೆಗೆ ಲಭ್ಯವಾಗಿಲ್ಲ.

**ಹೆಳವನಕಟ್ಟೆ ಗಿರಿಯಮ್ಮ :- (ಕ್ರಿ.ಶ.೧೭೫೦ ರಿಂದ ೧೭೫೦)**

ಮಹಿಳಾದಾಸ ಸಾಹಿತ್ಯ ಪರಂಪರೆಯಲ್ಲಿ ಹೆಳವನಕಟ್ಟೆ ಗಿರಯಮ್ಮಳಿಗೆ ವಿಶಿಷ್ಟವಾದ ದೊಡ್ಡ ಸ್ಥಾನವಿದೆ. ಕವಿಚರಿತೆಕಾರರು ಇವಳು ಕ್ರಿ.ಶ.೧೭೫೦ರಲ್ಲಿ ಇದ್ದಿರಬಹುದೆಂದು ಹೇಳಿದ್ದಾರೆ. ಈ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೂ ಕ್ರಿ.ಶ. ೧೭೫೦ ರಿಂದ ೧೭೫೦ರ ಕಾಲಾವಧಿಯಲ್ಲಿ ಗಿರಿಯಮ್ಮ ಬದುಕಿರಬಹುದು ಎಂಬುದನ್ನು ಬಹುಜನ ವಿದ್ವಾಂಸರು ಒಪ್ಪಿಕೊಂಡಿದ್ದಾರೆ.

ಗಿರಿಯಮ್ಮಳು ಧಾರವಾಡ (ಇಂದಿನ ಹಾವೇರಿ) ಜಿಲ್ಲೆಯ ರಾಣೆಬೆನ್ನೂರಿನವಳು. ತಂದೆ ಭೀಮಪ್ಪ ಜೋಯಿಸ. ಹರಿಹರದ ಮಲೆಬೆನ್ನೂರಿನ ಗ್ರಾಮದ ಶಾನಭೋಗ ಕೃಷ್ಣಪ್ಪನ ಮಗನಾದ ತಿಪ್ಪರಸನೊಂದಿಗೆ ಚಿಕ್ಕವಳಿರುವಾಗ ಗಿರಿಯಮ್ಮಳ ಮುದುವೆಯಾಯಿತು. ಆದರೆ ದಾಂಪತ್ಯ ಜೀವನ ನಡೆಸಬೇಕು, ಸುಖಸಂತೋಷ ಹೊಂದಬೇಕೆಂಬ ಬಯಕೆ ಗಿರಿಯಮ್ಮಳಿಗೆ ಆಗಲಿಲ್ಲ. ಬಾಲ್ಯದಿಂದ ದೇವರ ಬಗ್ಗೆ

ಹೊಂದಿದ ಅನನ್ಯವಾದ ಶ್ರದ್ಧೆ ಗಂಡನ ಮನೆಗೆ ಬಂದ ಮೇಲೆ ಹೆಳವನಕಟ್ಟೆಯ ರಂಗನ ಮೇಲೆ ನೆಲೆಗೊಂಡಿತು. ಕುಮಾರ ಹಳ್ಳಿಯ ಹತ್ತಿರದ ದಿಬ್ಬದ ರಂಗನಾಥನ ದರ್ಶನ ಮಾಡಿದ ಗಿರಿಯಮ್ಮ ಆತನನ್ನು ಬಿಟ್ಟು ಬರಲೇ ಇಲ್ಲ. ಆಗ ಪರಮಾತ್ಮನು ಗಿರಿಯಮ್ಮಳ ಭಕ್ತಿಗೊಲಿದು ಅವಳ ನಾಲಗೆಯ ಮೇಲೆ ಬರೆದನಂತೆ. ಅಂದಿನಿಂದ ಗಿರಿಯಮ್ಮಳಿಗೆ ಜ್ಞಾನೋದಯವಾಗಿ ಕೀರ್ತನೆ, ಪದ್ಯಗಳನ್ನು ಬರೆಯಲು ಆರಂಭಿಸಿದಳು. ಆಕೆಗೆ ಪ್ರತಿಯೊಂದು ವಸ್ತುವಿನಲ್ಲಿಯೂ ರಂಗನಾಥನೇ ಕಾಣುತ್ತಿದ್ದನಂತೆ. ಗಿರಿಯಮ್ಮಳ ಹಸ್ತಗುಣದ ಬಗ್ಗೆ ಹಲವಾರು ಪವಾಡಗಳು, ಐತಿಹ್ಯಗಳು ಇಂದಿಗೂ ಪ್ರಚಲಿತದಲ್ಲಿವೆ. ಜನರು ಇವಳನ್ನು ರಾಧೆಯ ಅವತಾರವೆಂದು ನಂಬಿದ್ದರು.

ಗಿರಿಯಮ್ಮಳು ಹಲವಾರು ಭಕ್ತಿಗೀತೆಗಳನ್ನು, ಕಥನಕಾವ್ಯಗಳನ್ನು ಬರೆದಿದ್ದಾರೆ. ಗಿರಿಯಮ್ಮಳದು ಹರಿಹರರನ್ನು ಏಕೋಭಾವದಿಂದ ಕಾಣುವ ವಿಶೇಷ ಗುಣ. 'ಹೆಳವನಕಟ್ಟೆ ರಂಗನಾಥ' ಎಂಬುದು ಇವಳ ಅಂಕಿತ.

ಕೊರವಿಯ ರೂಪವನ್ನು ಧರಿಸಿದ ಪರಮಾತ್ಮನು ಕಂಸನ ಬಂಧನದಲ್ಲಿದ್ದ ದೇವಕಿಗೆ ಶಕುನ ಹೇಳುವುದು ಬ್ರಹ್ಮಕೊರವಂಜಿಯ ಕಥಾವಸ್ತು. ರಾಮನು ಸೀತೆಯನ್ನು ಲಕ್ಷ್ಮಣನೊಂದಿಗೆ ಕಾಡಿಗೆ ಕಳುಹಿಸುವುದು, ವಾಲ್ಮೀಕಿ ಸೀತೆಯನ್ನು ಆಶ್ರಮಕ್ಕೆ ಕರೆದುಕೊಂಡು ಹೋಗುವುದು, ಲವಕುಶರ ಜನನ, ವಿದ್ಯಾಭ್ಯಾಸ, ರಾಮನ ಅಶ್ವದ ಕುದುರೆಯನ್ನು ಕಟ್ಟುವುದು, ರಾಮ-ಲವ-ಕುಶರ ಕಾಳಗ, ವಾಲ್ಮೀಕಿಯಿಂದ ಶ್ರೀರಾಮನಿಗೆ ನಿಜವಾದ ವೃತ್ತಾಂತ ಪರಿಚಯ, ಹೆಂಡತಿ ಮಕ್ಕಳೊಂದಿಗೆ ರಾಮ ಅಯೋಧ್ಯೆಗೆ ತೆರಳುವುದು, 'ಲವಕುಶರ ಕಾಳಗದ' ವಿಷಯ, ಇದು ಐದು ನೂರು ನುಡಿಗಳಲ್ಲಿದೆ. ತಂದೆ ತಾಯಿಗಳು ನರಕದಲ್ಲಿದ್ದರೆ ಅವರಿಗೆ ಸ್ವರ್ಗ ಅಥವಾ ಸದ್ಗತಿ ಪ್ರಾಪ್ತವಾಗಬೇಕಾದರೆ ಮಕ್ಕಳಿರಬೇಕೆಂಬುದೊಂದು ನಂಬಿಕೆ ಹಾಗೆಯ ಒಂದುದಿನ ಕೌಶಿಕನು ಯಮಲೋಕದಲ್ಲಿ ಇಬ್ಬರು ದಂಪತಿಗಳು ವೇದನೆ ಪಡುತ್ತಿರುವುದನ್ನು ನೋಡಿದನು. ಈ ಸ್ಥಿತಿಗೆ ಉದ್ದಾಲಿಕನು ಬ್ರಹ್ಮಚಾರಿಯಾದುದೇ ಕಾರಣವೆಂದು ತಿಳಿಯಿತು. ಆಗ ಕೌಶಿಕನು ನೇರವಾಗಿ ಉದ್ದಾಲಿಕನ ಬಳಿ ಬಂದು ವಾಸ್ತವಿಕತೆಯ ತಿಳಿಸಿಹೋಗುವನು. ವಿಧಿಲಿಖಿತದಂತೆ ಉದ್ದಾಲಿಕನು ಚಂದ್ರವತಿಯಿಂದ ಮಗುವನ್ನು ಪಡೆಯುತ್ತಾನೆ. ಚಂದ್ರವತಿ ನಿಂದನೆಗೊಳಗಾಗುತ್ತಾಳೆ, ಏಳು ವರ್ಷದ ನಂತರ ಉದ್ದಾಲಿಕನು ಮಗನನ್ನು ನೋಡುತ್ತಾನೆ. ಐದುನೂರು ನುಡಿಗಳಲ್ಲಿ ಹೆಣೆದುಕೊಂಡಿರುವ ಈ ಕಥೆಯು ಸುಖಾಂತವಾಗುತ್ತದೆ.

ಕೃಷ್ಣನ ಪರಮಭಕ್ತನಾದ ಚಂದ್ರಹಾಸನ ಜೀವನ ವಿವಿಧ ಪ್ರಾಣಾಪಾಯಗಳಿಂದ ಪಾರಾಗಿ ಮತ್ತೆ ತನ್ನ ರಾಜ್ಯವನ್ನು ಪಡೆದುಕೊಂಡುದು 'ಚಂದ್ರಹಾಸನ ಕಥೆಯ' ಹಾಡಿನಲ್ಲಿದೆ. ಜನಕನ ಮನೆಗೆ ರಾಮ ಮೊದಲಾದವರು ಹೋಗುವುದು, ಎಣ್ಣೆ ಅರಿಶಿಣಕ್ಕೆ ಹೋಗುವುದು, ವಿವಾಹದ ವರ್ಣನೆ, ಉರುಟಣೆಯ

ಸನ್ನಿವೇಷ, ದಶಾವತಾರ ವರ್ಣನೆಯನ್ನು 'ಸೀತಾ ಕಲ್ಯಾಣ' ಹೊಂದಿದೆ. ಕಾಮನ ಗರ್ವಭಂಗ ಮಾಡಿದ ಕಥೆಯನ್ನು 'ಶಂಕರಗಂಡನ ಹಾಡು' ಒಳಗೊಂಡಿದೆ.

ಹೀಗೆ ಹೆಳವನಕಟ್ಟೆಯ ಗಿರಿಯಮ್ಮ ದಾಸಸಾಹಿತ್ಯ ಮಹಿಳಾ ಪರಂಪರೆಯಲ್ಲಿ ವಿಶಿಷ್ಟ ರಚನೆಗಳ ಮೂಲಕ ಉನ್ನತ ಸ್ಥಾನವನ್ನು ಪಡೆದುಕೊಂಡಿದ್ದಾಳೆ.

**ಹರಪನಹಳ್ಳಿ ಭೀಮವ್ವ :- (ಕ್ರಿ.ಶ.೧೮೨೩-೧೯೦೨)**

ಹೆಳವನಕಟ್ಟೆಯ ಗಿರಿಯಮ್ಮನಂತೆ ದಾಸಸಾಹಿತ್ಯ ಪರಂಪರೆಯಲ್ಲಿ ವಿಶೇಷ ಸ್ಥಾನವನ್ನು ಪಡೆದವಳು ಹರಪನಹಳ್ಳಿಯ ಭೀಮವ್ವ. ಬಳ್ಳಾರಿ ಜಿಲ್ಲೆಯ ಹೊಸಪೇಟ ತಾಲೂಕಿನ ನಾರಾಯಣ ದೇವರ ಕೆರೆಯಲ್ಲಿ ಕ್ರಿ.ಶ. ೧೮೨೩ನೇ ಜುಲೈ ೬ ರಂದು ಭೀಮವ್ವ ಜನಿಸಿದಳು. ತಂದೆ ನರೇಭಟ್ಟರ ವಂಶದ ರಘುನಾಥಾಚಾರ್ಯರು, ತಾಯಿ ರಾಘಮ್ಮ ಈ ದಂಪತಿಗಳಿಗೆ ಮೊದಲ ಮಗಳಾಗಿ ಜನಿಸಿದಳು. ಮೊದಲ ಹೆಸರು ಕಮಲಾಕ್ಷಿ, ಬಾಲ್ಯದಲ್ಲಿ ಇವಳು ಹರಿನಾಮಗಳನ್ನು ಹಾಡಿ ತೊಟ್ಟಿಲು ತೂಗಿದರೆ ಮಾತ್ರ ಮಲಗುತ್ತಿದ್ದಳು. ಒಂಬತ್ತು ತಿಂಗಳಲ್ಲಿ ಮಗು ನಡೆಯಲು ಕಲಿಯಿತು. ಒಂದು ವರ್ಷದ ಮಗುವಾಗಿದ್ದಾಗ ಏಕಾದಶಿಯಂದು ಮಲಗಿದಾಗ ಕೃಷ್ಣಸರ್ಪವು ಮಗುವಿನ ಮೇಲೆ ಮಲಗಿತ್ತಂತೆ. ತಂದೆಯು ಭಯದಿಂದ ಚೀರಿದಾಗ ಆ ಸರ್ಪವು ಮಾಯವಾಯಿತಂತೆ.

ಬಾಲ್ಯದಲ್ಲಿಯ ಕೆಲವು ಘಟನೆಗಳು ಮುಂದೆ ದೊಡ್ಡವಳಾದ ಮೇಲೆಯೂ ಭೀಮವ್ವಳಿಗೆ ಜ್ಞಾಪಕದಲ್ಲಿದ್ದವು. ಮೇಲೆ ಹಾವು ಮಲಗಿದ್ದುದು. ಭರಣಿಯಲ್ಲಿ ಅತ್ತಿಹಣ್ಣು ಇಟ್ಟಿದ್ದು ಮುಂತಾದವುಗಳು. ಭೀಮವ್ವಳ ಎರಡನೆಯ ವರ್ಷದ ಜನ್ಮದಿನಕ್ಕೆ ಬಂಗಾರದ ಹೂವನ್ನು ಮಾಡಿಸಿ ತೊಡಿಸಿ ಅಲಂಕರಿಸಿದರು. ರಾತ್ರಿ ಮಲಗಿಕೊಂಡಾಗ ಇದ್ದಕ್ಕಿದ್ದಹಾಗೆ 'ಚೇಳು ಚೇಳು' ಎಂದು ಮಗು ಚೀರಲು ಎಲ್ಲರೂ ಗಾಭರಿಯಿಂದ ಎಲ್ಲಕಡೆಗೆ ಹುಡುಕಿದರು. ಎಲ್ಲಿಯೂ ಚೇಳು ಕಾಣಲಿಲ್ಲ, ಕೊನೆಗೆ ಮುಂದಲೆಯ ಬಂಗಾರದ ಹೂವನ್ನು ತೆಗೆಯಲು ಭೀಮವ್ವ ಸುಮ್ಮನಾದಳು. ಆ ಹೂವಿನ ತಗ್ಗಿನಲ್ಲಿ ಚೇಳು ಅಡಗಿ ಕುಳಿತಿತ್ತು. ಇದು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ನಾಲ್ಕು ವರ್ಷದವಳಿರುವಾಗ ಹರಪನಹಳ್ಳಿಗೆ ಸೈನಿಕರ ಪಡೆ ಬಂದಿತ್ತು. ಅದರಲ್ಲಿ ಒಬ್ಬ ಸಿಪಾಯಿಯು ಭೀಮವ್ವನ ಮೇಲಿನ ಆಭರಣಗಳನ್ನು ಕಳುವು ಮಾಡಬೇಕೆಂದು ಊರಿನಿಂದ ಒಂದು ಫರ್ಲಾಂಗು ದೂರ ಆ ಮಗುವನ್ನು ಎತ್ತಿಕೊಂಡು ಹೋಗುವುದರೊಳಗೆ ಆತನ ಕಣ್ಣು ಕುರುಡಾದವು. ನಂತರ ಹತ್ತಿರದವರ ನೆರವಿನಿಂದ ಆ ಮಗುವನ್ನು ಅವರ ಮನೆಗೆ ತಲುಪಿಸಲು ಪುನ: ಕಣ್ಣು ಕಾಣಲಾರಂಬಿಸಿದವು. ಹೀಗೆ ಬಾಲ್ಯದಲ್ಲಿ ಹಲವಾರು ಪವಾಡಗಳು ಭೀಮವ್ವನಿಂದ ನಡೆದಿರುವುದು ತಿಳಿದುಬರುತ್ತದೆ.

ಹನ್ನೊಂದು ವರ್ಷದವಳಿರುವಾಗ ರಾಮದುರ್ಗ ತಾಲೂಕಿನ ಹರೇಸಮುದ್ರ ಗ್ರಾಮದ ಮುನಿಯಪ್ಪನೊಡನೆ ಭೀಮವ್ವ ದಾಂಪತ್ಯ ಜೀವನಕ್ಕೆ ಕಾಲಿಟ್ಟಳು. ಬರಗಾಲದ ನಿಮಿತ್ಯ ಅವರು ಹರಪನಹಳ್ಳಿಗೆ ಬಂದರು. ಮುನಿಯಪ್ಪನು ಮೈಸೂರಿನ ಇಲಾಖೆಯಲ್ಲಿ ಸುಭೇದಾರ ಕೆಲಸ ಮಾಡುತ್ತಿದ್ದನು. ಈತನಿಗೆ ಮೂರನೆಯ ಹೆಂಡತಿಯಾಗಿ ಭೀಮವ್ವ ಅವರ ಮನೆ ಸೇರಿದಳು. ತವರುಮನೆಯಲ್ಲಿ ಭೀಮವ್ವ ಎಂದು ಗುರುತಿಸುತ್ತಿದ್ದವಳು ಗಂಡನ ಮನೆಯಲ್ಲಿ ಕೃಷ್ಣಾಬಾಯಿಯೆಂದು ಕರೆಯಲ್ಪಟ್ಟಳು. ಇವರು ಮದುವೆಯಾದಾಗ ಮುನಿಯಪ್ಪನ ವಯಸ್ಸು ನಲ್ವತ್ತೈದು. ಮದುವೆಯಾದ ಹದಿನಾಲ್ಕು ವರ್ಷದ ಮೇಲೆ ಹಾಜೂರು ಸೋಮರಾಯ ಎಂಬ ಮಗ ಹುಟ್ಟಿದ. ಇದೇ ವೇಳೆಗೆ ಭೀಮವ್ವನ ತಾಯಿ ತೀರಿಕೊಂಡಿದ್ದಳು. ನಾಲ್ಕು ವರ್ಷದ ನಂತರ ಸುಬ್ಬಾಬಾಯಿ ಎಂಬ ಮಗಳು ಹುಟ್ಟಿದಳು. ಅಂದಿನಿಂದ ಭೀಮವ್ವಳಿಗೆ ಕನಸಿನಲ್ಲಿ ಕಂಡ ಘಟನೆಗಳು ನಿಜವಾಗಲು ಆರಂಭಗೊಂಡವು. ಒಂದು ದಿನ ಕನಸಿನಲ್ಲಿ ಬಂದ ಲಕ್ಷ್ಮಿಯು "ನೀನು ನನ್ನ ಅಲಕ್ಷ ಮಾಡುತ್ತಿರುವಿ ನಾನು ಹೋಗುತ್ತೇನೆ" ಎಂದಳಂತೆ. ಇದಾದ ಒಂದು ವಾರದಲ್ಲಿ ಕಳ್ಳರು ಮನೆಯಲ್ಲಿಯ ಎಲ್ಲ ಸಂಪತ್ತನ್ನು ಕದ್ದುಕೊಂಡು ಹೋದರು. ಭೀಮವ್ವಳಿಗೆ ಮುವತ್ತೈದು ವರ್ಷ ವಯಸ್ಸಿರುವಾಗ ಅವಳ ಗಂಡ ಸ್ವರ್ಗಸ್ಥನಾದನು. ಅಂದಿನಿಂದ ಮಕ್ಕಳ ಆರೈಕೆಯೊಂದಿಗೆ ಬ್ರಹ್ಮಚರ್ಯ ವೃತದಲ್ಲಿದ್ದು ಬ್ರಾಹ್ಮಣ ಸೇವೆಯಲ್ಲಿ ಜೀವನ ಸಾಗಿಸಿದಳು.

ಒಂದು ದಿನ ಮನೆಯಲ್ಲಿ ಮಲಗಿರುವಾಗ 'ಒಂದು ಮಹಾರಣ್ಯದಲ್ಲಿ ಒಂದು ಗಿಡದ ಕೆಳಗೆ ಮಲಗಿದ್ದಾಗ ಒಬ್ಬ ತಂಬೂರಿ ಹಿಡಿದುಕೊಂಡ ಬ್ರಾಹ್ಮಣನು ಕೃಷ್ಣಸರ್ಪದ ಜೊತೆಗೆ ಬಂದು ಈಕೆಯ ನಾಲಗೆಯ ಮೇಲೆ ಮೂರು ಅಕ್ಷರ ಬರಿ ಎಂದು ಸರ್ಪಕ್ಕೆ ಹೇಳಲು ಸರ್ಪ ಬರೆಯಿತಂತೆ' ಇದರಿಂದ 'ರಕ್ಷಿಸಬೇಕೆನ್ನ ಲಕ್ಷ್ಮೀನರಸಿಂಹನ ಭಕ್ತನೆ' ಎಂಬ ಮೊದಲ ಹಾಡು ಬರೆದಳು. ಹಾಡು ಬರೆದರೂ ಇದಕ್ಕೆ ಮುದ್ರಿಕೆ ಇಲ್ಲವೆಂಬ ಕೊರಗು ಭೀಮವ್ವಳನ್ನು ಕಾಡುತ್ತಿತ್ತು. ಒಬ್ಬ ಬ್ರಾಹ್ಮಣ ಇವಳ ಮೈದುನನ ಜೊತೆ ಮಾತಾಡಿ ಇವಳ ಹೆಸರು ತಿಳಿದುಕೊಂಡು 'ಭೀಮೇಶ ಕೃಷ್ಣ' ಎಂಬ ಅಂಕಿತ ನೀಡಿದನು.

ಭೀಮವ್ವಳು 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅತಿ ಹೆಚ್ಚು ಕೃತಿಗಳನ್ನು ರಚಿಸಿದಳು. ಕೀರ್ತನೆ, ಸುಳಾದಿ ಮತ್ತು ಉಗಾಭೋಗ ಎಂಬ ಮೂರು ಪ್ರಕಾರಗಳಲ್ಲಿ ಕೃತಿ ರಚಿಸಿದ್ದಾಳೆ.

ಮಹಾಭಾರತದಲ್ಲಿ ಬರುವ ನಳೋಪಾಖ್ಯಾನದ ಕೃತಿಯನ್ನು ಆಧರಿಸಿ ೧೦೫ ದ್ವನಿಗಳಲ್ಲಿ ಭೀಮವ್ವಳು ನಳ ಚರಿತ್ರೆ ರಚಿಸಿದ್ದಾಳೆ. ನಳನ ಪರಿಚಯ, ದಮಯಂತಿಯ ಜನನ, ಸ್ವಯಂವರದಲ್ಲಿ ದಮಯಂತಿ ನಳನನ್ನು ವರಿಸಿದ್ದು, ಕಲಿಯಿಂದ ನಳದಮಯಂತಿಯರ ಅಗಲಿಕೆ, ಪುನರ್ಮಿಲನ ಮುಂತಾದ ಅಂಶಗಳನ್ನು ಒಳಗೊಂಡುದು ನಳ ಚರಿತ್ರೆ. ಪರಸ್ಪರ ಒಬ್ಬರಿಗೊಬ್ಬರು ಮುಯ್ಯ ಕೊಡುವ ಹಾಡುಗಳಲ್ಲಿ ಕೃಷ್ಣನ ಹೆಂಡತಿಯರು ಕುಂತಿಯ ಸೊಸೆಯರಿಗೆ ಮುಯ್ಯ ನೀಡುವ ವಿಷಯವಿದೆ, ಮೂದಲಿಕೆ, ಛೇಡಿಸುವಿಕೆ,

ಪರಸ್ಪರ ಕ್ಷಮೆಯಾಚನೆ, ಉಡುಗೊರೆಗಳ ವಿನಿಮಯ ಉತ್ತರ ಕರ್ನಾಟಕದಲ್ಲಿ ಮದುವೆಯ ಕಾರ್ಯಕ್ರಮದಲ್ಲಿ ಉಡುಗೊರೆ ಕೊಡವ ಸಾಮಾನ್ಯ ಪದ್ಧತಿಯು ಇದರ ವಸ್ತು. ಸತ್ತಭಾಮೆ ಕೃಷ್ಣನನ್ನು ತನ್ನೆಡೆಗೆ ಸೆಳೆದುಕೊಳ್ಳುವ ಸಲುವಾಗಿ ನಾರದನಿಗೆ ದಾನ ನೀಡುವುದು. ಒಂದು ತುಳಸಿ ದಳ ನೀಡಿ ರುಕ್ಮಿಣಿ ಕೃಷ್ಣನನ್ನು ಹಿಂತಿರುಗಿ ಪಡೆಯುವುದು. ಸತ್ಯಭಾಮೆಗೆ ಕೃಷ್ಣನಲ್ಲಿರುವ ಒಲವು, ಕೃಷ್ಣನಿಗೆ ತುಳಸಿಯಲ್ಲಿರುವ ಅಪಾರವಾದ ಪ್ರೀತಿ ಪತಿದಾನ ಕೊಟ್ಟ ಹಾಡಿನಲ್ಲಿ ರೂಪಿತಗೊಂಡಿದೆ.

ಮಹಾಭಾರತದ ವ್ಯಾಖ್ಯಾನದ ಜೊತೆಗೆ ಭೀಮವ್ವಳು ಕಾಳಿದಾಸನ ಶಾಕುಂತಲಾ ನಾಟಕವನ್ನು ನೋಡಿ ಶಕುಂತಲೆ–ದುಷ್ಯಂತ ಮಹಾರಾಜನ ಹಾಡು ರಚಿಸಿದ್ದಾಳೆ. ಮೇನಕೆಯಿಂದ ಜನಿಸಿದ ಹೆಣ್ಣಮಗು, ಆಶ್ರಮದಲ್ಲಿ ಬೆಳೆಯುವಿಕೆ, ದುಷ್ಯಂತ ಬೇಟೆಗೆ ಬಂದುದು, ಶಕುಂತಲೆಯ ಮೇಲೆ ಮೋಹ. ಗಂಧರ್ವ ವಿವಾಹ, ಉಂಗುರು ಕಾಣಿಕೆ, ಭರತನ ಜನನ, ದುಷ್ಯಂತನು ಶಕುಂತಲೆ ಮತ್ತು ಭರತನನ್ನು ನಿರಾಕರಿಸಿದ್ದು, ಜಲಗಾರನಿಂದ ಉಂಗುರು ಸಿಕ್ಕಿದ್ದು, ದುಷ್ಯಂತನಿಗೆ ಪುನರ್‌ಸ್ಮರಣೆ, ಹೆಂಡತಿ ಮಗನ ಸ್ವೀಕಾರ, ಭರತನಿಗೆ ಪಟ್ಟ ಈ ರೀತಿಯಾಗಿ ಕಥೆ ಬಿಚ್ಚಿಕೊಳ್ಳುತ್ತದೆ.

ಮನ್ಮಥನ ಮದುವೆಯ ವಿಷಯವನ್ನು ಒಳಗೊಂಡ ಕೃತಿ ರತಿಕಲ್ಯಾಣ. ಇದು ೬೧ ಧ್ವನಿಗಳಲ್ಲಿ ತೆರೆದುಕೊಳ್ಳುತ್ತದೆ, ದ್ರೌಪದಿಯ ಮಹಿಮೆಯನ್ನು ಜೊತೆಗೆ ವಿವರಿಸಿದ್ದಾರೆ. ರತಿಯ ಅಗ್ನಿ ಪ್ರವೇಶ, ಪುನರ್ ಜನ್ಮ, ಮನ್ಮಥನ ವಿರಹವೇದನೆ, ರುಕ್ಮಿಣಿ ಕನ್ಯೆಯನ್ನು ಹುಡುಕುವುದು, ನಾರದನಿಂದ ಕಲಾವತಿಯ ರಾಜನ ಮಗಳ ಸೂಚನೆ, ದ್ರೌಪದಿ ಅವಮಾನಿತಳಾಗಿ ಬರುವುದು, ರತಿಯ ಸಂಕಲ್ಪ, ಕೌಂಡ್ರಿಕನಿಂದ ರತಿಯ ಅಪಹರಣ, ದ್ರೌಪದಿಯಿಂದ ಕೌಂಡ್ರಿಕನ ಸಂಹಾರ, ರತಿಯ ರಕ್ಷಣೆ, ರತಿಮನ್ಮಥರ ವಿವಾಹ, ಆರತಿ, ಓಕುಳಿ, ಕೇಕೆ ಮುಂತಾದ ವಿಷಯಗಳಿಂದ ಓದುಗರನ್ನು ಆನಂದಿಸುತ್ತದೆ. ಅರ್ಜುನ ತೀರ್ಥಯಾತ್ರೆಗೆ ಹೋಗುವುದು, ಉಲೂಪಿ ಮತ್ತು ಚಿತ್ರಾಂಗದೆಯರ ವಿವಾಹ, ಬಲರಾಮ ಸುಭದ್ರೆಯನ್ನು ದುರ್ಯೋಧನನಿಗೆ ಕೊಡುವ ವಿಷಯ, ಸನ್ಯಾಸಿ ವೇಷದಲ್ಲಿ ಅರ್ಜುನ, ಸನ್ಯಾಸಿಯ ಸೇವೆಗೆ ಸುಭದ್ರೆಯ ನೇಮಕ, ಕೃಷ್ಣನ ಸಹಾಯದಿಂದ ಅರ್ಜುನ ಸುಭದ್ರೆಯನ್ನು ಮದುವೆಯಾಗಿ ಇಂದ್ರಪ್ರಸ್ಥಕ್ಕೆ ಮರಳಿದುದು, ಸುಭದ್ರಾ ಕಲ್ಯಾಣದಲ್ಲಿದೆ.

ಇಂದಿಗೂ ಹರಪನಹಳ್ಳಿ ಭೀಮವ್ವನವರ ರಚನೆಗಳನ್ನು ಮೂಲಧಾಟಿಗಳಲ್ಲಿ ಹಾಡುವ ಪರಂಪರೆ ಉಳಿದುಕೊಂಡುಬಂದಿದೆ. ದಾಸಸಾಹಿತ್ಯ ಮಹಿಳಾ ಪರಂಪರೆಯ ಒಂದು ದಿವ್ಯ ಶಕ್ತಿ ಭೀಮವ್ವನವರು ಕ್ರಿ.ಶ.೧೯೦೩ರ ಜನೆವರಿ ೧೧ ರಂದು ಇಹಲೋಕ ಯಾತ್ರೆಗೆ ಮಂಗಳ ಹಾಡಿದರು. ಜಮದಗ್ನಿ ಕ್ಷೇತ್ರದ ಹೊಸೂರು ಗ್ರಾಮದ ತುಂಗಭದ್ರಾ ತೀರದಲ್ಲಿ ಉತ್ತರ ಕ್ರಿಯೆಗಳು ಜರುಗಿದವು.

**ಚಿ.ರಾ.ಚೆಲ್ಲಮ್ಮ :- (ಕ್ರಿ.ಶ.೧೮೫೦)**

ಇವಳು ಮೈಸೂರಿನ ಮಹಾರಾಣಿ ಪ್ರೌಢ ಶಾಲೆಯಲ್ಲಿ (ಬಾಲಕಿಯರ) ಅಧ್ಯಾಪಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಚೆರುಕಮಲ್ಲ ರಾಮರಾಯರ ಮಗಳು. ಕ್ರಿ.ಶ.೧೯೧೦ರ ವರೆಗೆ ಬದುಕಿದ್ದಳು. ಇವರ ತಾಯಿ, ಸೀತಮಾಂಬೆ ಗೀತಿಕಾ ಲಹರಿ, ರುಕ್ಮಿಣಿ ಪರಿಣಯ, ಪಾರಿಜಾತಪಹರಣ, ರಾಜಕಳಾನಿಧಿ ಎಂಬ ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.

**ಗಣಪಕ್ಕ (ಸಣ್ಣ ಭಡತೆ):- (ಕ್ರಿ.ಶ.೧೮೭೦)**

ಇವಳು ಉ.ಕ.ಜಿಲ್ಲೆಯ ಗೋಕರ್ಣದವಳು ತಂದೆ ಗಣಪಭಟ್ಟ, ತಾಯಿ ಪಾರ್ವತಿ, ೧೨ನೇ ವಯಸ್ಸಿನಲ್ಲಿಯೇ ನಾಗಪ್ಪ ಸಣ್ಣಭಡತೆಯೊಂದಿಗೆ ವಿವಾಹವಾಯಿತು. ಒಂಬತ್ತು ಜನ ಮಕ್ಕಳಿದ್ದರು. ಗೋಕರ್ಣ ಮಹಾತ್ಮೆ, ರುಕ್ಮಿಣಿ ಪರಿಣಯ, ಕೃಷ್ಣನ ಅವತಾರ, ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬಂದಿದೆ.

**ಸುಂದರಾಬಾಯಿ (ತುಳಸಾಬಾಯಿ) :- (ಕ್ರಿ.ಶ.೧೮೭೫)**

ಇವಳು ಧಾರವಾಡ ತಾಲೂಕಿನ ಹೆಬ್ಬಳ್ಳಿಯವಳು. ಬಾಲವಿಧವೆ ಶ್ರೀ ವೆಂಕಟೇಶ ಮತ್ತು ಬೆಟ್ಟದೊಡೆಯ ಶ್ರೀ ವೆಂಕಟೇಶ ಎಂಬ ಕಾವ್ಯ ಮುದ್ರಿಕೆಯಿಂದ ಕೃತಿ ರಚಿಸಿದ್ದಾಳೆ. ರುಕ್ಮಾಂಗದ ಚರಿತೆ, ಕೃಷ್ಣನ ಹುಟ್ಟು, ಸುಭದ್ರಾ ಮುಯ್ಯ, ರುಕ್ಮಿಣಿ ಪರಿಣಯ, ಸುಭದ್ರಾ ಕಲ್ಯಾಣ, ಶುಕ್ರವಾರ-ಶನಿವಾರ ಗೌರಿಯ ಹಾಡುಗಳನ್ನು ರಚಿಸಿದ್ದಾಳೆ. ಇವಳು ೬೦ ವರ್ಷ ಬದುಕಿದ್ದಳು.

**ಪನ್ನಿ ಲಕ್ಷ್ಮೀಬಾಯಿ:- (ಕ್ರಿ.ಶ.೧೮೮೦)**

ಇವಳು ಉ.ಕ.ಜಿಲ್ಲೆಯ ಗೋಕರ್ಣದವಳು ತಂದೆ ರಾಮಭಟ್ಟ, ದೇವರನಾಮಗಳನ್ನು ರಚಿಸಿದ್ದಾಳೆ. ೪೨ ವರ್ಷಗಳ ಕಾಲ ಬದುಕಿದ್ದಳು.

**ಶಾಂತಿಬಾಯಿ- (ಕ್ರಿ.ಶ.೧೮೬೦)**

ಇವಳು ಶಿವಮೊಗ್ಗಾ ಜಿಲ್ಲೆಯ ಸಾಗರದ ಕೊಪ್ಪಿ ವೆಂಕಟೇಶಯ್ಯನ ಮಗಳು. ಭಟಕಳದ ನಾಡಘರ ಮನೆತನದ ಕೃಷ್ಣರಾಯ ಈಕೆಯ ಗಂಡ. 'ಶಾಂತಿಪಾಲಿ ಗುರು' ಎಂಬ ಅಂಕಿತದಿಂದ ಕನ್ನಡ ಮತ್ತು ಮರಾಠಿಯಲ್ಲಿ ಪದ ರಚಿಸಿದ್ದಾಳೆ. ದೇವರಲ್ಲಿ ಮೊರೆ ಹೋಗುವ ಪದಗಳು, ಗೋಪಿ ಮತ್ತು ಕೃಷ್ಣನ ಸಂವಾದ, ಆತ್ಮನಿವೇದನೆ, ಗಜರಾಜ ಮತ್ತು ಪುಂಡಲೀಕರನ್ನು ಸ್ತುತಿಸುವ ಸಾದೃಶ್ಯದ ಸನ್ನಿವೇಶಗಳು ಇವೆ.

**ಯದುಗಿರಿಯಮ್ಮನವರು – (ಕ್ರಿ.ಶ.೧೮೨೦–೧೯೦೮)**

ಕನ್ನಡ, ತಮಿಳು, ತೆಲಗು ಭಾಷಾ ಜ್ಞಾನವನ್ನು ಹೊಂದಿದ್ದಳು. ಬಹುಬೇಗನೆ ಪತಿವಿಯೋಗವಾಯಿತು. ಇಬ್ಬರು ಹೆಣ್ಣುಮಕ್ಕಳಿದ್ದರು. ಬೆಂಗಳೂರಿನ ಶ್ರೀ ತುಳಸಿ ತೋಟದ ದೇವಸ್ಥಾನ ಯದುಗಿರಿ ಅಮ್ಮನವರ ಕಾರ್ಯಕ್ಷೇತ್ರ. ಅಂದಿನ ಕಾಲದಲ್ಲಿ ಸಾರಿಗೆ ಸೌಲಭ್ಯವಿಲ್ಲದಿದ್ದರೂ ಶ್ರೀರಂಗ, ಕಂಚಿ, ಉಡುಪಿ, ಮೇಲುಕೋಟೆ, ಶ್ರೀವಿಲ್ಲಿಪುತ್ತೂರು, ಶ್ರೀ ಪೆಂಬುದೂರು ಹಲವಾರು ಕ್ಷೇತ್ರಗಳನ್ನು ದರ್ಶಿಸಿದ್ದಾಳೆ. ಶ್ರೀ ರಾಮಧ್ಯಾನ, ಶ್ರೀ ಪಾರ್ಥಸಾರಥಿ ಮಂಗಳಂ, ಶ್ರೀರಂಗ ಮಹಾತ್ಮೆ, ಬಿಡಿ ಕೀರ್ತನೆಗಳು ಹೀಗೆ ಸುಮಾರು ೭೪ ಕೀರ್ತನೆಗಳನ್ನು ರಚಿಸಿದ್ದಾಳೆ. ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳು ಆಗಬೇಕಾದ ಅಗತ್ಯತೆ ಇದೆ.

**ಓರಬಾಯಿ ಲಕ್ಷ್ಮೀದೇವಮ್ಮನವರು (ಕ್ರಿ.ಶ. ೧೮೬೫)**

ಇವರು ಕ್ರಿ.ಶ.೧೮೬೫ ರಲ್ಲಿ ಜನಿಸಿದರು. ಸೊಂಡೂರಿನ ದಿವಾನರಾಗಿದ್ದ ಲಕ್ಷ್ಮಣರಾಯರು ತಂದೆ, ಗೋದಾಬಾಯಿಯವರು ಇವರ ತಾಯಿ. ಮಗುವಿನ ಐದನೆಯ ವರ್ಷದಲ್ಲಿ ಸೋದರ ಮಾವನಾದ ಓರಬಾಯಿ ಮಧ್ವರಾಯನೊಂದಿಗೆ ವಿವಾಹವಾಯಿತು.

ಮನೆಯಲ್ಲಿಯೇ ತಂದೆಯಿಂದ ಕನ್ನಡ ಮತ್ತು ಸಂಸ್ಕೃತ ಜ್ಞಾನವನ್ನು ಪಡೆದುಕೊಂಡಳು. ತಾಯಿ ಹಾಡುವ ಸಂಪ್ರದಾಯದ ಹಾಡುಗಳು, ಹಸೆಯ ಹಾಡುಗಳು ಮಗಳಿಗೆ ಕಲಿಸಲ್ಪಟ್ಟವು. ಲಕ್ಷ್ಮೀದೇವಮ್ಮನವರು ಹರಪನಹಳ್ಳಿಯ ಭೀಮವ್ವಳ ಹಾಡುಗಳನ್ನು ಕಲಿಯುತ್ತಿದ್ದಳು. ಇವರ ಗಂಡನು ವಿದ್ಯಾಭ್ಯಾಸ ಮುಗಿಸಿ ಗುತ್ತಿಯಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ಒಂದು ಗಂಡು ಮಗು ಜನಿಸಿತು, ಆದರೆ ಒಂದು ವರ್ಷದ ನಂತರ ಮಗು ತೀರಿಹೋಯಿತು. ಮಧ್ವರಾಯರು ತಮ್ಮ ತಂಗಿಯ ಮಗಳನ್ನು ದತ್ತು ತೆಗೆದುಕೊಂಡರು.

ಅಲಂಕಾರಿಕ ವಸ್ತುಗಳನ್ನು ತಯಾರಿಸುವುದು, ಜೇಡಿ ಮಣ್ಣಿನ ಬೊಂಬೆಗಳನ್ನು ಮಾಡುವುದು, ಬಳಪದ ಕಲ್ಲಿನ ದೇವತಾ ವಿಗ್ರಹಗಳನ್ನು ತಯಾರಿಸುವುದು, ಮಣ್ಣಿನಿಂದ ಪಾರಿವಾಳಗಳನ್ನು ಮಾಡುವುದು, ರಂಗೋಲಿಗಳನ್ನು ಬಿಡಿಸುವುದು ಮುಂತಾದ ಹವ್ಯಾಸಗಳನ್ನು ಲಕ್ಷ್ಮೀದೇವಿಯವರು ರೂಢಿಸಿಕೊಂಡಿದ್ದರು. ತಿರುಪತಿ, ಮಂಗಳಗಿರಿ, ಸಿಂಹಾಚಲ ಕ್ಷೇತ್ರದ ದೇವತೆಗಳ ಮೇಲೆ ಪದಗಳನ್ನು ರಚಿಸಿದ್ದಾರೆ. ಮಂತ್ರಾಲಯದ ರಾಯರಿಗೆ ಅವ್ವನವರು ಅಂತರಂಗ ಭಕ್ತರಾಗಿದ್ದರು. ಲಕ್ಷ್ಮೀದೇವಮ್ಮನವರ ೫೨ನೇ ವಯಸ್ಸಿನಲ್ಲಿ ಅವರಪತಿ ತೀರಿಕೊಂಡರು. ಹಲವಾರು ಬಿಡಿ ಕೀರ್ತನೆಗಳೊಂದಿಗೆ, ಕೆಲವು ಕಥನ ಕವನಗಳನ್ನು ರಚಿಸಿದ್ದಾಳೆ.

ದ್ರೌಪದಿಯ ವಸ್ತ್ರಾಪಹರಣ, ಸಕ್ಕೂಬಾಯಿ ಕಥೆ, ರಾಮದೇವರ ಹಾಡು, ಸೌಗಂಧಿಕಾ ಪುಷ್ಪ, ಸತ್ಯನಾರಾಯಣ ಕಥಾ, ಮಂಗಳಗೌರಿ ಕಥೆ, ಗೊಲ್ಲತಿ ಹಾಡು, ಶ್ರೀಕೃಷ್ಣ ಬಾಲಲೀಲೆ, ಜಲಕ್ರೀಡೆ ಹಾಡು, ಚೇಳಿನ ಹಾಡು, ಸ್ವರ್ಣಗೌರಿ ಕಥೆಗಳನ್ನು ರಚಿಸಿದ್ದಾರೆ. 'ನರಸಿಂಹ ವಿಠಲ' ಇವಳ ಅಂಕಿತ.

**ಸರಸಾಬಾಯಿಯವರು – (ಕ್ರಿ.ಶ.೧೮೮೨)**

ಇವಳು ಗೌಡಗೆರೆ ತಾಲೂಕಿನ ಬಾಪು ಹನುಮಂತರಾಯ ಮತ್ತು ಕಾವೇರಿಬಾಯಿಯವರ ಗರ್ಭದಲ್ಲಿ ಜನಿಸಿದಳು. ಚಿತ್ರದುರ್ಗದಲ್ಲಿದ್ದ ನ್ಯಾಯಾಧೀಶರಾದ ಎಂ.ಬಿ.ಕೃಷ್ಣರಾಯರು ಸರಸಾಬಾಯಿಯ ಪತಿಯಾಗಿದ್ದರು. ಇವಳು ಕೃಷ್ಣರಾಯರ ಮೂರನೆಯ ಪತ್ನಿ.

೧೯೩೪ರಲ್ಲಿ ಪತಿ ತೀರಿಹೋದರು. ಇದರಿಂದ ಮನಸ್ಸು ಆಧ್ಯಾತ್ಮಿಕತೆಯ ಕಡೆಗೆ ವಾಲಿತು. ಮುದ್ದುಮೋಹನದಾಸರಿಂದ ಅಂಕಿತವನ್ನು ಪಡೆದು ಹಲವು ಕೀರ್ತನೆಗಳನ್ನು ರಚಿಸಿದರು. ಸುಮಾರು ನೂರು ವರ್ಷದವರೆಗೆ ತುಂಬು ಜೀವನ ಸಾಗಿಸಿದರು. ನಲ್ವತ್ತುಸಾರಿ ಭಾಗವತವನ್ನು ಓದಿದ್ದರು. ಗುರುಗೋವಿಂದದಾಸರ ಮನೆಯಲ್ಲಿ ಪಾಂಡುರಂಗನ ಸನ್ನಿದಿಯಲ್ಲಿ ಪೂಜೆ ಮಾಡುತ್ತಿದ್ದಾಗ ಸ್ವಾಮಿಯ ದರ್ಶನವಾಯಿತು. ಇವರ ಪತಿಯೂ ಸಹ 'ಶೇಷಾದ್ರಿವಿಠಲ' ಎಂಬ ಅಂಕಿತದಲ್ಲಿ ಕೀರ್ತನೆ ರಚಿಸಿದ್ದಾರೆ. ಕ್ರಿ.ಶ.೧೯೮೩ ರಲ್ಲಿ ಸರಸಾಬಾಯಿಯು ವಿಧಿವಶಳಾದಳು.

'ರಾಮವಲ್ಲಭ' ಅಂಕಿತದಲ್ಲಿ ಸರಳ, ಸುಂದರವಾದ ಕೀರ್ತನೆಗಳನ್ನು ರಚಿಸಿದ್ದಾಳೆ. ಇವಳ ರಚನೆಗಳಲ್ಲಿ ದೇವರನಾಮಗಳು, ಭಕ್ತಿಗೆ ವಿಶೇಷತೆ ಇದೆ. ಗಣಪತಿ, ಲಕ್ಷ್ಮೀ, ಹರಿ ಮುಂತಾದ ದೇವರುಗಳ ನಾಮಗಳು ರಚನೆಗೊಂಡಿವೆ "ಇವರ ಸಂಪರ್ಕ ನಮಗೂ ಇದ್ದುದರಿಂದ ಇವರ ಬರಹಕ್ಕಿಂತ ಆಧ್ಯಾತ್ಮ ಚಿಂತನೆಗೆ ಹೆಚ್ಚು ಒತ್ತು ಕೊಡುತ್ತಿದ್ದುದರಿಂದ ಕೃತಿ ರಚನೆ ಕಮ್ಮಿ. ಭಕ್ತಿಗೆ ಪ್ರಾಧಾನ್ಯತೆ. ಶ್ರೀ ಉರಗಾದ್ರಿವಾಸ ವಿಠ್ಠಲ ಹಾಗೂ ಅನೇಕ ದಾನಕೂಟಸ್ಥರ ಸಂಪರ್ಕ ಇವರಿಗೆ ಇತ್ತು. ಚಿತ್ರದುರ್ಗದಲ್ಲೇ ಬಹಳ ಕಾಲ ಇದ್ದುದರಿಂದ ಹರಿನಾಮ ಸಂಕೀರ್ತನೆ ಹಾಗೂ ಭಜನೆ ನಡೆಸುತ್ತಿದ್ದರು"[೩] ಎಂದು ಒಡನಾಟದಲ್ಲಿದ್ದ ಎಚ್.ಎಸ್.ಪದ್ಮಾಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ.

**ನಂಜನಗೂಡು ತಿರುಮಲಾಂಬಾ – (ಕ್ರಿ.ಶ.೧೮೮೭–೧೯೮೨)**

ಕನ್ನಡ ಲೇಖಕಿ, ಪತ್ರಕರ್ತೆ, ಸಂಪಾದಕಿ, ಪ್ರಕಾಶಕಿ, ಸಮಾಜ ಸೇವೆಯಲ್ಲಿ ಹೀಗೆ ವಿಭಿನ್ನ ದಿಕ್ಕುಗಳಲ್ಲಿ ಕಾರ್ಯ ನಿರ್ವಹಿಸಿದವರು ತಿರುಮಲಾಂಬಾ. ತಂದೆ–ವೆಂಕಟಕೃಷ್ಣ ಅಯ್ಯಂಗಾರ, ತಾಯಿ– ಅಲಮೇಲಮ್ಮ. ಚಿಕ್ಕ ವಯಸ್ಸಿನಲ್ಲಿ ವಿವಾಹ ಬಂಧನ, ೧೪ನೇ ವಯಸ್ಸಿನಲ್ಲಿ ತಿರುಮಲಾಂಬಾಳಿಗೆ ವೈಧವ್ಯ ಪ್ರಾಪ್ತಿಯಾಯಿತು. ಕೇವಲ ಪ್ರಾಥಮಿಕ ಶಿಕ್ಷಣ ಮಾತ್ರ ಪಡೆದರೂ ತಂದೆಯವರಿಂದ ಒಳ್ಳೆಯ ಜ್ಞಾನ ಮತ್ತು ಶಿಕ್ಷಣ ಲಭ್ಯವಾಗಿತ್ತು. ಹತ್ತು ಕೃತಿಗಳನ್ನು ರಚಿಸಿದ್ದಾರೆ. ಶೇಷಗಿರೀಶ, ಶೇಷ ಶೈಲಾವಾಸ, ಶೇಷಗಿರಿವರ, ಶೇಷಾದ್ರಿನಾಥ, ಶೇಷ ಶೈಲಧಾಮ, ಶೇಷಾಚಲನಿಲಯ, ಶೇಷಶಾಯನ ಅಂಕಿತದಿಂದ ಭಕ್ತಿ ಗೀತಾವಳಿ ಎಂಬ ಕಾವ್ಯ ರಚಿಸಿದ್ದಾಳೆ.

ಬದುಕಿನಲ್ಲಿ ನೋವನ್ನುಂಡ ಹೆಣ್ಣು ತನ್ನ ಜೀವನಪೂರ್ತಿ ಭಗವಂತನ ದಿವ್ಯ ರಸಾನುಭವಕ್ಕೆ ಮೀಸಲಾಗಿಟ್ಟ ಸುಂದರವಾದ ಕೀರ್ತನೆಗಳು ಇವೆ. ಭಗವಂತನ ವರ್ಣನೆ ಜೊತೆಗೆ ನಿಂದಾಸ್ತುತಿಗಳು

ಕಂಡುಬರುತ್ತವೆ. ಪರಮಾತ್ಮನ ಮಹತ್ವವನ್ನು ಮೋಹಿನಿ-ಭಸ್ಮಾಸುರ, ಧ್ರುವನ ರಕ್ಷಣೆ, ಪ್ರಹ್ಲಾದನ ಸಂರಕ್ಷಣೆ, ಗಜರಾಜನ ಸಲುಹಿದುದು, ಅರ್ಜುನ ಸಾರಥಿಯಾದುದು, ಹೀಗೆ ಬಣ್ಣಿಸಿದ್ದಾಳೆ. ಹಾಗೆಯೇ ವಾಗ್ದೇವಿ ಸ್ತುತಿ, ಮಹಾಲಕ್ಷ್ಮೀ ಸ್ತುತಿಗಳು ಇವೆ. ಈಕೆಯ ಕೃತಿಗಳಲ್ಲಿ ಸಂಸ್ಕಾರ, ಸಂಸ್ಕೃತಿ, ದೈವನಿಷ್ಠೆ, ಸಮರ್ಪಣಾ ಭಾವ ಪ್ರಕಟಗೊಳ್ಳುತ್ತವೆ. ಒಟ್ಟು ಒಂದುನೂರ ತೊಂಬತ್ತೊಂಬತ್ತು ಕೀರ್ತನೆಗಳನ್ನು ರಚಿಸಿದ್ದಾರೆ. ೬೫ ವರ್ಷದ ತುಂಬು ಜೀವನ ನಡೆಸಿದ ತಿರುಮಲಾಂಬಾ ಅವರು ೧೯೮೨ ರ ಅಗಸ್ಟ ೩೧ರಂದು ಇಹಲೋಕದ ವ್ಯಾಪಾರ ಮುಗಿಸಿದರು.

**ಬಳ್ಳಾರಿ ರಾಧಾಬಾಯಿಯವರು :– (ಕ್ರಿ.ಶ. ೧೮೮೯)**

ರಾಧಾಬಾಯಿಯವರು ಅನಂತರಾಯ ಮತ್ತು ಇಂದಿರಾಬಾಯಿಯವರ ಪುಣ್ಯೋಧರದಲ್ಲಿ ಮದನಪಲ್ಲಿಯಲ್ಲಿ ಜನಿಸಿದರು. ಹದಿನೈದು ವರ್ಷ ವಯಸ್ಸಿರುವಾಗ ಶ್ರೀನಿವಾಸರೊಡನೆ ವಿವಾಹವಾಯಿತು. ಮನೆಯಲ್ಲಿಯೇ ಸಂಗೀತ, ಕನ್ನಡ ಮತ್ತು ಸಂಸ್ಕೃತ ಅಧ್ಯಯನ ಮಾಡಿದ್ದರು. ಬೊಂಬೆಗಳು, ಅಲಂಕಾರ ಸಾಮಗ್ರಿಗಳನ್ನು ಬಹಳ ಕಲಾತ್ಮಕವಾಗಿ ಮಾಡುವ ಹವ್ಯಾಸ ಇವರದು. ಇವರು ದೇವರ ನಾಮಗಳನ್ನು ರಚಿಸಿದ್ದಾರೆ. ಎಂಭತ್ತನೆಯ ವಯಸ್ಸಿನಲ್ಲಿ ವೈಕುಂಠವಾಸಿಗಳಾದರು. ಹರಪನಹಳ್ಳಿಯ ಭೀಮವ್ವ ಮತ್ತು ಓರಬಾಯಿ ಲಕ್ಷ್ಮೀದೇವಮ್ಮನವರ ರೀತಿಯಲ್ಲಿ ದೇವರನಾಮ ರಚಿಸಿದ್ದಾಳೆ. ಶ್ರೀನಿವಾಸ, ಮಹಾಲಕ್ಷ್ಮೀ, ಹನುಮಂತ, ಮಧ್ವರಾಯರ ಮೇಲೆ ಹಾಗೂ ಶ್ರೀ ರಾಘವೇಂದ್ರ ಸ್ವಾಮಿಗಳ ಮೇಲೆ ಹಾಡುಗಳನ್ನು ರಚಿಸಿದ್ದಾರೆ. ವೆಂಕಟವಿಠಲ, ಶ್ರೀ ರಾಘವೇಂದ್ರ ಎಂಬ ಅಂಕಿತದಿಂದ ಕೃತಿ ರಚಿಸಿದ್ದಾರೆ.

**ಕಳಸದ ಸುಂದರಮ್ಮ**

ಇವಳು 'ಕಾಳಿಮರ್ಧನ ಕೃಷ್ಣ' ಎಂಬ ಅಂಕಿತದಿಂದ ಕೃಷ್ಣನ ಕೃತಿ ಬರೆದಿದ್ದಾಳೆ. ಉಡುಪಿಯ ಅಷ್ಟಮಠಗಳ ಯತಿಗಳ ಬಗ್ಗೆ ಕೃತಿ ರಚಿಸಿದ್ದಾಳೆ. ಇವಳನ್ನು ಕುರಿತು ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ.

**ಶ್ರೀಮತಿ ಗುಂಡಮ್ಮ :– (ಕ್ರಿ.ಶ.೧೯ನೇ ಶತಮಾನ)**

ಮುದ್ದುಮೋಹನ ವಿಠ್ಠಲ ದಾಸರಿಂದ 'ರುಕ್ಮಿಣಿ ವಿಠಲ' ಅಂಕಿತ ಪಡೆದ ಗುಂಡಮ್ಮ ಅವರು ಹಲವು ದೇವರ ನಾಮಗಳನ್ನು ಬರೆದಿದ್ದಾರೆ. ಪೆನುಗೊಂಡೆ ಪಟ್ಟಾಚಾರ್ಯರ ಜೊತೆಗೆ ವಿವಾಹವಾಗಿತ್ತು. ಸದಾಕಾಲ ದೇವರ ಸ್ಮರಣೆ, ಹರಿಭಜನೆ, ಮಕ್ಕಳಿಗೆ ದೇವರನಾಮ ಹೇಳಿಕೊಡುವುದು, ಆಧ್ಯಾತ್ಮಿಕ ಚಿಂತನೆಯಲ್ಲಿ ತೊಡಗಿಸಿಕೊಳ್ಳುವುದು ಇವರ ಕರ್ಮವಾಗಿತ್ತು. ಹಲವಾರು ದೇವರನಾಮಗಳನ್ನು ರಚಿಸಿದ್ದರೂ ಕೇವಲ ಏಳು ದೇವರ ನಾಮಗಳು ಮಾತ್ರ ಲಭ್ಯವಾಗಿವೆ.

**ಶ್ರೀಮತಿ ಸರಸ್ವತಿಬಾಯಿ :– (ಕ್ರಿ.ಶ.೧೯೦೦–೧೯೮೨)**

ವಾಸುದೇವಾಚಾರ್ಯ ಮತ್ತು ರುಕ್ಮಿಣಿಯವರ ಉದರದಲ್ಲಿ ನೆಲಮಂಗಲದ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದವಳು ಸರಸ್ವತಿ ಬಾಯಿಯವರು. ಬಾಲ್ಯದಲ್ಲಿಯೇ ಪೂಜೆ, ಪ್ರಾರ್ಥನೆ, ಪುರಾಣ, ಭಾಗವತಗಳನ್ನು ಹಾಗೂ ರಾಮಾಯಣ, ಮಹಾಭಾರತವನ್ನು ಅಧ್ಯಯನ ಮಾಡಿದ್ದಳು. ಎಂಟನೆಯ ವಯಸ್ಸಿನಲ್ಲಿ ವ್ಯಾಸಾಚಾರ್ಯರೊಂದಿಗೆ ವಿವಾಹವಾಯಿತು. ೨೫ನೇ ವಯಸ್ಸಿನಲ್ಲಿ ಮಗುವನ್ನು ಕಳೆದುಕೊಂಡ ಬಾಣಂತಿಯ ದು:ಖ ಪರಮಾತ್ಮನ ಕಡೆಗೆ ಹರಿಯಿತು. ಆರಂಭದಲ್ಲಿ ಅಂಕಿತವಿಲ್ಲದೆ ಹಾಡು ರಚಿಸಿದರು. ೪೫ನೇ ವಯಸ್ಸಿನಲ್ಲಿ ಸಾಗರಕಟ್ಟೆ ಪೀಠಾಧೀಶರಾದ ಶ್ರೀ ಪ್ರದ್ಯುಮ್ನ ತೀರ್ಥರು ಇವರನ್ನು ಹರಸಿ ತಿರುಪತಿಯ ವೆಂಕಟೇಶನ ನಾಮದಲ್ಲಿ 'ಶ್ರೀ ಶ್ರೀನಿವಾಸ' ಎಂಬ ಅಂಕಿತ ದಯಪಾಲಿಸಿದರು. ಕೇಶವಾದಿಯ ೨೪ ಕೀರ್ತನೆಗಳನ್ನು ರಚಿಸಿದ್ದಾರೆ. ಬಾಲಕೃಷ್ಣನ ಲೀಲೆಯನ್ನು ಕುರಿತು ಸುಂದರ ಹಾಡುಗಳು, ಉಡುಪಿಯ ಕೃಷ್ಣನ ವರ್ಣನೆ ಹಾಡು, ಅಳಗಿರಿಯರಂಗ, ಮಳೂರಿನ ಅಪ್ರಮೇಯ ವ್ಯಕ್ತವಾಗಿವೆ. ಶ್ರೀನಿವಾಸ ಕಲ್ಯಾಣ, ಕೃಷ್ಣಲೀಲೆ ಪ್ರಹ್ಲಾದ ಚರಿತೆ, ಪ್ರಮೀಳಕಾಳಗ, ಮಕ್ಕಳಿಗೆ ಶ್ರೀ ಕೃಷ್ಣನ ಮೇಲೆ ಭಕ್ತಿ ಹುಟ್ಟುವ ಕಥೆ ಇವು ಸರಸ್ವತಿಬಾಯಿಯ ದೀರ್ಘ ಕೃತಿಗಳು. ಇವುಗಳಲ್ಲಿ ಶ್ರೀನಿವಾಸ–ಪದ್ಮಾವತಿಯರ ಕಲ್ಯಾಣದ ಕತೆ, ಕೃಷ್ಣನ ಜನನ ಬಾಲ್ಯ–ಬಾಲ್ಯ ಲೀಲೆಗಳನ್ನು ಲಾವಣಿಯಲ್ಲಿ ಹೇಳಿದ್ದಾರೆ. ಕೃಷ್ಣನ ಕತೆ ಆಡು ಮಾತಿನ ಗದ್ಯದ ಲಯದಲ್ಲಿದೆ. ಒಟ್ಟು ೧೫೦ ಹಾಡುಗಳು ೫ ದೀರ್ಘ ಕೃತಿಗಳು ಈಗ ಲಭ್ಯವಿವೆ. ಸರಸ್ವತಿಯವರು ಜುಲೈ ೫, ೧೯೮೨ ರಂದು ಪರಲೋಕಕ್ಕೆ ತೆರಳಿದರು.

**ನಿಡಗುರುಕಿ ಜೀವೂಬಾಯಿ:– (ಕ್ರಿ.ಶ.೧೮೯೭–೧೯೮೩)**

ಹರಿದಾಸ ಸಾಹಿತ್ಯದ ಮಹಿಳಾ ಪರಂಪರೆಯಲ್ಲಿ ಇತ್ತೀಚೆಗೆ ಬಾಳಿ ಬದುಕಿದ ಕೀರ್ತನಕಾರ್ತಿ ನಿಡಗುರುಕಿ ಜೀವೂಬಾಯಿ ಪ್ರಮುಖಳು. ಕೋಲಾರ (ಇಂದಿನ ಚಿಕ್ಕಬಳ್ಳಾಪುರ) ಜಿಲ್ಲೆಯ ಚಿಂತಾಮಣಿ ತಾಲೂಕಿನ ನಿಡಗುರುಕಿ ಎಂಬ ಚಿಕ್ಕ ಹಳ್ಳಿಯಲ್ಲಿ ೧೮–೧೧–೧೮೯೭ ರಂದು ಜನಿಸಿದಳು. ಶಾನಭೋಗರಾಗಿದ್ದ ರಾಮಚಂದ್ರರಾಯರು ಇವರ ತಂದೆ, ರಮಾಬಾಯಿ–ತಾಯಿ ಇವರಿಗೆ ನಾಲ್ಕನೆಯ ಮಗಳು ಜೀವೂಬಾಯಿ.

ಸುತ್ತಲಿನ ಊರಿನ ಪರಿಸರ ನದಿ, ಬೆಟ್ಟ, ಗುಡ್ಡ, ಮರ–ಗಿಡ, ಪ್ರಾಣಿ ಪಕ್ಷಿಗಳು ವಿಶೇಷ ಆಶ್ಚರ್ಯವುಂಟು ಮಾಡಿದವು. ತಂದೆಯವರಿಂದಲೇ ವಿದ್ಯಾಭ್ಯಾಸ ಮಾಡಿದಳು. ಮನೆಯಲ್ಲಿ ನಡೆಯುತ್ತಿದ್ದ ಪೂಜೆ, ಆಚರಣೆಗಳಿಂದ ಜೀವೂಬಾಯಿ ಪ್ರೇರಿತಳಾದಳು. ಪ್ರಾಪ್ತ ವಯಸ್ಸಿಗೆ ಬರುವ ಮುಂಚೆ ಸೋದರ ಮಾವನೊಂದಿಗೆ ಮದುವೆಯಾಯಿತು. ಮದುವೆಯಾದ ಕೆಲವೇ ದಿನಗಳಲ್ಲಿ (೧೧ನೇ ವಯಸ್ಸಿನಲ್ಲಿ)

ಜೀವಮ್ಮಳಿಗೆ ವೈಧವ್ಯ ಪ್ರಾಪ್ತಿಯಾಯಿತು. ಕ್ರಮೇಣ ಮನೆಗೆಲಸದೊಂದಿಗೆ ರಾಮಾಯಣ, ಮಹಾಭಾರತ ಓದಲು ಆರಂಭಿಸಿದಳು. ತಂದೆತಾಯಿಯರ ಮರಣಾನಂತರದಲ್ಲಿ ತೀರ್ಥಯಾತ್ರೆ ಕೈಗೊಂಡಳು.

ಒಂದು ದಿನ ದೇವರ ಅನುಗ್ರಹ ತಾನಾಗಿ ಒದಗಿಬಂದಂತೆ ತುಮಕೂರು ಸಮೀಪ ದೇವರಾಯನ ದುರ್ಗದಲ್ಲಿದ್ದ ಶ್ರೀ ಮುದ್ದುಮೋಹನ ವಿಠ್ಠಲದಾಸರ ಶಿಷ್ಯರಾದ ಶ್ರೀ ಉರಗಾದ್ರಿ ವಿಠ್ಠಲದಾಸರು ತಮ್ಮ ಶಿಷ್ಯರೊಂದಿಗೆ ಹಾಸನಕ್ಕೆ ಬಂದರು. ಆ ಸಪ್ತಾಹದಲ್ಲಿ ಜೀವಮ್ಮ ತೋರಿದ ಉತ್ಸಾಹವನ್ನು ಕಂಡು 'ಶ್ರೀ ಕಮಲನಾಭ ವಿಠ್ಠಲ' ಎಂಬ ಅಂಕಿತ ನೀಡಿದರು. ಅಂದಿನಿಂದ ಕೀರ್ತನೆ ರಚನೆಯಲ್ಲಿ ತೊಡಗಿದರು. ಭಗವಂತನ ಸಂಕೀರ್ತನೆ, ಮಹಾಲಕ್ಷ್ಮಿ ಕುರಿತು, ಹನುಮ-ಭೀಮ-ಮಧ್ವ, ಭಾರತಿ, ರುದ್ರ, ಪಾರ್ವತಿ, ರಾಘವೇಂದ್ರ, ಗುರು ಸ್ತುತಿ ಗೀತೆಗಳನ್ನು ಬರೆದಿದ್ದಾಳೆ. ಇವಳ ಕೀರ್ತನೆಗಳಲ್ಲಿ ಆತ್ಮ ನಿವೇದನೆ, ಲೋಕನೀತಿ ಎದ್ದು ಕಾಣುತ್ತವೆ. ಸಂಪ್ರದಾಯ ಕೀರ್ತನೆಗಳು ಸಂಸ್ಕೃತಿಯನ್ನು ಬಿಂಬಿಸುತ್ತವೆ. ಯುಗಾದಿಯಂದು ರಚಿತವಾದ ಕೀರ್ತನೆಗಳು ಸಹ ಲಭ್ಯವಿವೆ. ಶ್ರೀ ಹರಿ ಲೀಲಾ, ಶ್ರೀರಾಮ ಜನನ ಸೀತಾ ಕಲ್ಯಾಣ, ಶ್ರೀಕೃಷ್ಣ ಲೀಲಾ, ಸಮುದ್ರ ಮಥನ, ಶ್ರೀ ಪುರಂದರ ವಿಠ್ಠಲ ದಾಸರ ಚರಿತ್ರೆ, ಶ್ರೀ ಹರಿ ಮಾನಸ ಪೂಜಾ, ಗಾಲವ ಚರಿತ್ರೆ, ಶ್ರೀ ವರಮಹಾಲಕ್ಷ್ಮಿ ಕಥೆ, ಶ್ರೀ ಪಾಂಡುರಂಗ ಚರಿತ್ರೆ ಮತ್ತು ರಾಧಾ ಮಾಧವ ವಿಲಾಸವೆಂಬ ಹತ್ತು ಖಂಡ ಕಾವ್ಯಗಳನ್ನು ರಚಿಸಿದ್ದಾರೆ.

ಜೀವೂಬಾಯಿಯು ಬರೆದುದನ್ನು ಎಂದೂ ತಿದ್ದುತ್ತಿರಲಿಲ್ಲ, ವಯಸ್ಸಾದ ಹಾಗೆ ಕಣ್ಣಿನ ದೃಷ್ಟಿ ಕಡಿಮೆಯಾದಾಗ ಆನಂದನಾಮ ಸಂವತ್ಸರದಂದು ಬಹಳ ಕಷ್ಟಪಟ್ಟು ಬರೆದರಂತೆ, 'ಸ್ಮರಿಸಿ ಬದುಕಿರೋ ಗುರುವರ ನರಹರಿ ಸ್ಮರಣೆ ಮರೆಯದೆ ಕೀರ್ತಿಸಿ ನಲಿದವರ' ಎಂಬುದು ಜೀವಮ್ಮಳ ಕೊನೆಯ ಕೀರ್ತನೆ. ಜೀವಮ್ಮಳ ವಿಶೇಷತೆ ಎಂದರೆ ಪ್ರತಿ ಕೀರ್ತನೆಯನ್ನು ರಚಿಸಿದ ದಿನಾಂಕ ನಮೂದಿಸಿರುವುದು. ೧೭೦ ಕೀರ್ತನೆಗಳನ್ನು ಮತ್ತು ೧೦ ಖಂಡ ಕಾವ್ಯಗಳನ್ನು ರಚಿಸಿದ ಜೀವಮ್ಮಳು, ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ ಮತ್ತು ಹರಪನಹಳ್ಳಿ ಭೀಮವ್ವರ ಸಾಲಿನಲ್ಲಿ ನಿಲ್ಲುವಂತವಳು. ೧೯೮೩ರ ಜೂನ ೯ ರಂದು ಈ ಲೋಕದ ವ್ಯಾಪಾರವನ್ನು ಮುಗಿಸಿದಳು.

ಹೀಗೆ ಗಲಗಲಿ ಅವ್ವನವರಿಂದ ಆರಂಭಗೊಂಡ ಮಹಿಳಾ ದಾಸ ಸಾಹಿತ್ಯ ಪರಂಪರೆ ತನ್ನ ಜೀವಂತಿಕೆಯನ್ನು ಉಳಿಸಿಕೊಂಡಿದೆ. ಈ ಪರಂಪರೆಯಲ್ಲಿ ಎದ್ದು ಕಾಣುವ ಹೆಸರುಗಳೆಂದರೆ ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮತ್ತು ನಿಡಗುರಕಿಯ ಜೀವೂಬಾಯಿ ಉಳಿದವರ ಬಗ್ಗೆ ಮಾಹಿತಿಗಳ ಕೊರತೆ ಎದ್ದು ಕಾಣುತ್ತದೆ. ತೀರ ಇತ್ತೀಚಿನವರೆಗೂ ಈ ಪರಂಪರೆಯು ಮುಂದುವರೆದುಕೊಂಡು ಬಂದಿರುವುದು ನಮಗೆ ಕಂಡುಬರುತ್ತದೆ. ಈ ಪರಂಪರೆಯಲ್ಲಿ ಬರುವ ನಿಡಗುರಕಿಯ ಜೀವೂಬಾಯಿಯವರ ಜೀವನ ಸಾಧನೆಯನ್ನು, ಸಾಹಿತ್ಯದ ಸಮಗ್ರ ಪರಿಚಯವನ್ನು ಮುಂದೆ ಕ್ರಮಾನುಗತವಾಗಿ ಮಾಡಿಕೊಡಲಾಗಿದೆ.

## ಅಡಿ ಟಿಪ್ಪಣಿಗಳು

೧. ಕರ್ನಾಟಕದ ಹರಿದಾಸ ಸಾಹಿತ್ಯ ಸಂಚಯ ಮತ್ತು ಸಾಹಿತ್ಯ ಚಿಂತನ. ಪು.೧ – ಡಾ.ಅರಳುಮಲ್ಲಿಗೆ ಪಾರ್ಥಸಾರಥಿ.

೨. ಹರಿದಾಸ ಭಕ್ತಿ ಸ್ವರೂಪ. ಪು.೧೩ – ಟಿ.ಎನ್.ನಾಗರತ್ನ.

೩. ಸಮಗ್ರ ದಾಸ ಸಾಹಿತ್ಯ ಸಂಪುಟ ೧೮, ಭಾಗ ೪, ಪು. ೭೪ ಸಂ. ಡಾ.ರುಕ್ಮಿಣಿ ಮತ್ತು ಇತರರು

ಅಧ್ಯಾಯ ೩

## ನಿಡಗುರಕಿ ಜೀವೂಬಾಯಿಯ ಜೀವನ ವಿಚಾರ

ಕರ್ನಾಟಕವು ಹಲವಾರು ಶಿವಶರಣರನ್ನು, ಹರಿದಾಸರನ್ನು ಕವಿಪುಂಗವರನ್ನು, ದಾರ್ಶನಿಕರನ್ನು, ಕಲಾವಿದರನ್ನು, ಸಂಗೀತಗಾರರನ್ನು, ತಂತ್ರಜ್ಞರನ್ನು ದೇಶಕ್ಕೆ ಮತ್ತು ಜಗತ್ತಿಗೆ ನೀಡಿದೆ. ವಿಶಾಲ ಕರ್ನಾಟಕವು ಇಂದು ೨೯ ಜಿಲ್ಲೆಗಳನ್ನು ಒಳಗೊಂಡಿದೆ. ಒಂದು ಕಾಲಕ್ಕೆ ಕನ್ನಡದ ನೆಲವು ಹಲವಾರು ಭಾಗಗಳಲ್ಲಿ ಹರಿದು ಹಂಚಿಹೋಗಿತ್ತು. ಹಳೆ ಮೈಸೂರು ಪ್ರಾಂತ, ಮುಂಬೈ ಕರ್ನಾಟಕ, ಹೈದ್ರಾಬಾದ ಕರ್ನಾಟಕ ಮತ್ತು ಸ್ಥಳೀಯ ಚಿಕ್ಕಪುಟ್ಟ ಸಂಸ್ಥಾನಗಳನ್ನು ಒಳಗೊಂಡಿತ್ತು. ೧೯೫೬ರಲ್ಲಿ ಕನ್ನಡದ ಎಲ್ಲ ಭಾಗಗಳು ಒಂದಾಗಿ ಮೈಸೂರು ರಾಜ್ಯವಾಗಿ ರೂಪಗೊಂಡಿತು. ಮುಂದೆ ೧೯೭೧ರಲ್ಲಿ ಮೈಸೂರ ರಾಜ್ಯಕ್ಕೆ ಕರ್ನಾಟಕವೆಂದು ನಾಮಕರಣ ಮಾಡಲಾಯಿತು. ಈ ಹೆಸರಿನೊಳಗೆ ಕನ್ನಡದ ನೆಲ-ಜಲ-ಧರ್ಮ, ಕಲೆ-ಸಾಹಿತ್ಯ-ಸಂಸ್ಕೃತಿ, ಸಂಗೀತ-ಲಲಿತಕಲೆ-ವಾಸ್ತುಶಿಲ್ಪ ಮೊದಲಾದವುಗಳು ಒಳಗೊಂಡಿವೆ.

ಕರ್ನಾಟಕದ ಪ್ರತಿಯೊಂದು ಜಿಲ್ಲೆಯು ವಿಶಿಷ್ಟ ಸಾಂಸ್ಕೃತಿಕ ಆಚರಣೆಗಳಿಂದ ಕಂಗೊಳಿಸುತ್ತಿದೆ. ಇಂಥ ವಿಶಿಷ್ಟತೆಯನ್ನು ಹೊಂದಿದ ಜಿಲ್ಲೆಗಳಲ್ಲಿ ಚಿನ್ನದ ಉತ್ಪಾದನೆಯಲ್ಲಿ ಬಹು ಪ್ರಖ್ಯಾತಿ ಹೊಂದಿದ ಜಿಲ್ಲೆ ಕೋಲಾರ. ಈ ಜಿಲ್ಲೆಯು ೧೨,೩೩೩ ಚ.ಕೀ.ಮೀ. ವಿಸ್ತೀರ್ಣವನ್ನು ಹೊಂದಿತ್ತು. ಇದರ ವ್ಯಾಪ್ತಿಗೆ ೧೧ ತಾಲೂಕುಗಳು ಬರುತ್ತಿದ್ದವು.

ಕೋಲಾರವನ್ನು ಮೊದಲು ಕೋಲಾಹಲಪುರ, ಕುವಲಾಲ, ಕೋಳಾಲ, ಕೋಲಾಲ ಮುಂತಾದ ವಿವಿಧ ಹೆಸರುಗಳಿಂದ ಕರೆಯುತ್ತಿದ್ದರು. ಚಿನ್ನದ ಉತ್ಪಾದನೆಯಲ್ಲಿ ವಿಶ್ವವಿಖ್ಯಾತಿಯನ್ನು ಪಡೆದ ಕೋಲಾರವು ದೇಶದ ಚಿನ್ನದ ಉತ್ಪಾದನೆಯಲ್ಲಿ ಪ್ರತಿಶತ ೯೯ರಷ್ಟು ಪಾಲು ಪಡೆದಿದೆ. ಇದರೊಂದಿಗೆ ಗ್ರಾನೈಟ್, ಮ್ಯಾಂಗನೀಸ್, ಜೇಡಿಮಣ್ಣು, ಕಲ್ನಾರು ಈ ಜಿಲ್ಲೆಯ ಪ್ರಮುಖವಾದ ಖನಿಜಗಳು. ಕೋಲಾರ ಗಂಗ ಅರಸರ ರಾಜಧಾನಿಯಾಗಿತ್ತು, ಇವರ ಆಡಳಿತಾವಧಿಯಲ್ಲಿ ನಿರ್ಮಿಸಿದ ಕೋಲಾರಮ್ಮನ ದೇವಸ್ಥಾನ ಬಹು ಪ್ರಸಿದ್ಧಿಯನ್ನು ಪಡಿದಿದೆ. ಎತ್ತರವಾದ ಬೆಟ್ಟಗಳು, ನದಿಕಣಿವೆಗಳು, ತಪ್ಪಲು ಪ್ರದೇಶಗಳು ಹರಡಿಕೊಂಡಿವೆ. ಮುರಗಾಮಲೆ, ಅಂಬಾಜಿದುರ್ಗ ಮತ್ತು ರಹಮಾನ್ ದುರ್ಗಗಳು ಇಲ್ಲಿನ ಮುಖ್ಯ ಶಿಖರಗಳು. ಗ್ರಾನೈಡನ ವಿವಿಧ ಗಾತ್ರದ ಹಾಗೂ ಆಕಾರಗಳ ಬಂಡೆಗಳ ರಾಶಿ ಅದ್ಭುತ ಶಿಲ್ಪಗಳಾಗಿ ನಿಂತಿರುವುದು ಈ ಜಿಲ್ಲೆಯ ವಿಶೇಷತೆ. ಉತ್ತರದ ಚೆನ್ನಕೇಶವ ಬೆಟ್ಟದಲ್ಲಿ ಹುಟ್ಟಿ ವಾಯವ್ಯ ದಿಕ್ಕಿಗೆ ಹರಿಯುವ ಪಿನಾಕಿನ ಈ ಜಿಲ್ಲೆಯ

ಮುಖ್ಯ ನದಿ. ಇದು ೫೪ ಕೀ.ಮೀ. ಉದ್ದ ಹರಿದಿದೆ. ಇದರ ತೀರದಲ್ಲಿ 'ವಿದುರಾಶ್ವತ್ಥ' ಎಂಬ ಸುಪ್ರಸಿದ್ಧವಾದ ತೀರ್ಥಕ್ಷೇತ್ರವಿದೆ. ಪಾಲಾರ್ ನದಿ ಕೂಡ ಈ ಜಿಲ್ಲೆಯ ಮತ್ತೊಂದು ನದಿಯಾಗಿದೆ.

ಶ್ರೀನಿವಾಸಪುರದ ಸಮೀಪದ ಹೆಬ್ಬೆಟ್ಟ ಕುಂಡುಮಲೆಯ ಬೆಟ್ಟದ ಮೇಲಿನ ರಾಮತೀರ್ಥ ಮತ್ತು ಲಕ್ಷ್ಮಣ ತೀರ್ಥಗಳೆಂಬ ಕೊಳಗಳು, ಶ್ರೀಪಾದರಾಯರ ಬೃಂದಾವನ, ಆಂಜನೆಯ ಸ್ವಾಮಿಯ ದೇವಾಲಯ, ಸೋಮೇಶ್ವರ ದೇವಸ್ಥಾನಗಳು ಪ್ರೇಕ್ಷಣೀಯ ಪವಿತ್ರ ಸ್ಥಳಗಳಾಗಿವೆ. ಮಾಲೂರಿನಲ್ಲಿ ಪ್ರತಿವರ್ಷ ಚೈತ್ರಮಾಸದಂದು ನಡೆಯುವ ಧರ್ಮರಾಯಸ್ವಾಮಿ ಕರಗೋತ್ಸವ ಪ್ರಸಿದ್ಧಿಯನ್ನು ಪಡಿದುಕೊಂಡಿದೆ. ಇದೇ ತಾಲೂಕಿನಲ್ಲಿ ಚಿಕ್ಕ ತಿರುಪತಿಯೂ ಇದೆ. ಮಡಿವಾಳ ಗ್ರಾಮದಲ್ಲಿ ಚೋಳರ ಕಾಲದ ಗಂಗಾಧರೇಶ್ವರ ದೇವಾಲಯವಿದೆ. ವಿರುಪಾಕ್ಷಪುರದಲ್ಲಿ ವಿಜಯನಗರ ಕಾಲದ ವಿರುಪಾಕ್ಷ ದೇವಾಲಯವೂ ಇದೆ.

ಬೌರಿಂಗ್ ಪೇಟ್ ಎಂಬ ಹೆಸರು ಹೊಂದಿರುವ ಬಂಗಾರಪೇಟೆ ಈ ಜಿಲ್ಲೆಯ ಮತ್ತೊಂದು ತಾಲೂಕು. ಇಲ್ಲಿಯ ಮುಖ್ಯ ನದಿ ಪಾಲಾರ್. ಚಿಂತಾಮಂಗಲ, ಬೂದಿಕೋಟೆ, ಹುನಕುಂದ ಇವು ಐತಿಹಾಸಿಕ ಮತ್ತು ಪುರಾತನ ಸ್ಥಳಗಳು. ಉರಿಗಾರ ಚಿನ್ನದ ಗಣಿಯನ್ನು ಹೊಂದಿರುವ ಪ್ರದೇಶ. ೧೮೭೫ರಲ್ಲಿ ಪ್ರಥಮವಾಗಿ ಚಿನ್ನದ ಅದಿರು ತೆಗೆಯಲು ಸುರಂಗ ಮಾರ್ಗವನ್ನು ಕೊರೆಯಲಾಗಿದೆ.

ಚಿಕ್ಕಬಳ್ಳಾಪುರ ತಾಲೂಕು ದೊಡ್ಡ ದೊಡ್ಡ ಬೆಟ್ಟಗುಡ್ಡಗಳನ್ನು ಹೊಂದಿರುವ ಪ್ರದೇಶ. ಹರಿಹರೇಶ್ವರ, ಸ್ಕಂದಗಿರಿ, ಚೆನ್ನಕೇಶವ ಬೆಟ್ಟ, ಬ್ರಹ್ಮಗಿರಿ, ನಂದಿದುರ್ಗ ಪ್ರಮುಖ ಬೆಟ್ಟಗಳು. ನಂದಿ ಬೆಟ್ಟವು ವಿಶ್ರಾಮಧಾಮವೂ ಆಗಿದೆ. ಈ ಬೆಟ್ಟಶ್ರೇಣಿಗಳಲ್ಲಿ ಅರ್ಕಾವತಿ ಮತ್ತು ಉತ್ತರ ಪಿನಾಕಿನಿ ನದಿಗಳು ಹುಟ್ಟುತ್ತವೆ. ನಂದಿದುರ್ಗ ಈ ತಾಲೂಕಿನ ಪ್ರಮುಖ ಪ್ರೇಕ್ಷಣೀಯ ಸ್ಥಳ. ನಂದಿಯ ಭೋಗ ನಂದೀಶ್ವರ ಸ್ವಾಮಿ ಜಾತ್ರೆ, ಸುಬ್ರಮಣ್ಯಸ್ವಾಮಿ ಜಾತ್ರೆಗಳು ಮುಖ್ಯ ಉತ್ಸವಗಳು. ಭಾರತ ರತ್ನ ಸರ್. ಎಂ.ವಿಶ್ವೇಶ್ವರಯ್ಯನವರನ್ನು ನೀಡಿದ ಮುದ್ದೇನಹಳ್ಳಿ ಈ ತಾಲೂಕಿನಲ್ಲಿದೆ.

ಕಣದೆಲೆಯ ಬೆಟ್ಟಗಳಿಂದ ಕೂಡಿದ ಪ್ರದೇಶ ಗುಡಿಬಂಡೆ. ಇಲ್ಲಿ ಓಬಲ ನರಸಿಂಹಸ್ವಾಮಿಯ ಗುಡಿ ಇದ್ದು, ಇದೊಂದು ನೈಸರ್ಗಿಕ ಗುಹೆಯಾಗಿದೆ. ಎರಡು ಜಿನಾಲಯಗಳೂ ಇಲ್ಲಿವೆ.

೧೩೧೧ ಮೀ. ಎತ್ತರವಿರುವ ಅಂಬಾಜಿದುರ್ಗ ಚಿಂತಾಮಣಿ ತಾಲೂಕಿನಲ್ಲಿದೆ. ಈ ತಾಲೂಕು ಪಿಂಗಾಣಿ ಉಪಕರಣಗಳ ತಯಾರಿಕೆಗೆ ಬಲು ಪ್ರಖ್ಯಾತಿ ಪಡೆದಿದೆ. ಮಹಾಯೋಗಿ ತಾತಯ್ಯನಿಂದ ಕೈವಾರದ ಜನಪ್ರೀಯತೆ ಹೆಚ್ಚಿದೆ. ಸಕಲಭಕ್ತರಿಗೆ ಶ್ರದ್ಧಾ ಕೇಂದ್ರವಾದ ಕೈವಾರ ಈ ತಾಲೂಕಿನ ಮುಖ್ಯ ಧಾರ್ಮಿಕಸ್ಥಳ. ರೇಷ್ಮೆ, ಸುಗಂಧ ದ್ರವ್ಯ, ಅಗರಬತ್ತಿಗಳನ್ನು ಇಲ್ಲಿ ತಯಾರಿಸುವರು. ಗೌರಿಬಿದನೂರಿನಲ್ಲಿ ಬಾಬಾ ಪರಮಾಣುಶಕ್ತಿ ಸಂಶೋಧನಾ ಸಂಸ್ಥೆಗೆ ಸೇರಿದ ಭೂಕಂಪನ ಕೇಂದ್ರವಿದೆ. ಮೇಲೂರಿನಲ್ಲಿ ರೇಷ್ಮೆ ನೂಲು ತೆಗೆಯುವ ಉದ್ಯಮವಿದೆ.

ಕೋಲಾರ ಜಿಲ್ಲೆಯು ಈ ಮೊದಲು ವಿಶಾಲವಾಗಿತ್ತು. ಶ್ರೀನಿವಾಸಪುರ, ಕೋಲಾರ, ಮುಳಬಾಗಿಲು, ಬಂಗಾರಪೇಟೆ, ಚಿಕ್ಕಬಳ್ಳಾಪುರ, ಗುಡಿಬಂಡೆ, ಚಿಂತಾಮಣಿ, ಗೌರಿಬಿದನೂರು, ಶಿಡ್ಲಘಟ್ಟ, ಬಾಗೇಪಲ್ಲಿ ಹೀಗೆ ಒಟ್ಟು ೧೧ ತಾಲೂಕುಗಳನ್ನು ತನ್ನಾಡಳಿತದ ವ್ಯಾಪ್ತಿಗೆ ಸೇರಿಸಿಕೊಂಡಿತ್ತು. ೨೩ನೇ ಅಗಸ್ಟ ೨೦೦೭ರಂದು ಕೋಲಾರ ಜಿಲ್ಲೆಯು ವಿಭಜನೆಗೊಂಡು ಕೋಲಾರ ಮತ್ತು ಚಿಕ್ಕಬಳ್ಳಾಪುರ ಎಂಬ ಎರಡು ಜಿಲ್ಲೆಗಳು ನಿರ್ಮಾಣಗೊಂಡವು. ಪ್ರಸ್ತುತ ಕೋಲಾರ ಜಿಲ್ಲೆಯು ೫ ತಾಲೂಕುಗಳನ್ನು ಹೊಂದಿದ್ದು ೮,೨೩೩ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಚಿಕ್ಕಬಳ್ಳಾಪುರ ಜಿಲ್ಲೆಯು ೬ ತಾಲೂಕುಗಳನ್ನು ಹೊಂದಿದ್ದು ೪೧೦೦ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ.

ಇಂಥ ವೈವಿಧ್ಯಮಯವಾದ, ವಿಶಿಷ್ಟವಾದ ನೈಸರ್ಗಿಕ ಮತ್ತು ಸಾಂಸ್ಕೃತಿಕ ಪರಿಸರವನ್ನು ಹೊಂದಿರುವ ಅವಿಭಜಿತ ಕೋಲಾರ ಜಿಲ್ಲೆಯ (ಚಿಕ್ಕಬಳ್ಳಾಪುರ ಜಿಲ್ಲೆ) ತಾಲೂಕುಗಳಲ್ಲಿ ಚಿಂತಾಮಣಿ ತಾಲೂಕು ಒಂದಾಗಿದೆ. ಇದು ಆಂದ್ರಪ್ರದೇಶದಗಡಿಗೆ ಹೊಂದಿಕೊಂಡಿದೆ. ಬೆಂಗಳೂರಿನಿಂದ ಚಿಂತಾಮಣಿಯ ಮಾರ್ಗದಲ್ಲಿ ಒಂದು ಕವಲು ಚಿಂತಾಮಣಿಗಿಂತ ಮೊದಲಿದೆ. ಈ ಕವಲಿನಿಂದ ೬ ಕೀ.ಮೀ. ದಕ್ಷಿಣಾಭಿಮುಖವಾಗಿ ಹೋದರೆ ಅತ್ಯಂತ ಚಿಕ್ಕದಾದ ಒಂದು ಹಳ್ಳಿ ಕಾಣುತ್ತದೆ. ಬೆಟ್ಟಗುಡ್ಡಗಳಿಗೆ ಸಮೀಪವಿರುವ ಈ ಗ್ರಾಮವೇ ನಿಡುಗುರಕಿ. ಸುಮಾರು ೨೦೦೦ ಜನಸಂಖ್ಯೆಯನ್ನು ಹೊಂದಿದೆ. ಹಿರೇಕಟಗಿಹಳ್ಳಿ ಪಂಚಾಯತಿ ವ್ಯಾಪ್ತಿಗೆ ಬರುತ್ತದೆ. ಒಂದರಿಂದ ಐದನೆಯ ತರಗತಿಯವರೆಗೆ ಸರಕಾರಿ ಶಾಲೆ ಇದೆ. ಒಕ್ಕಲಿಗರು, ಗೊಲ್ಲರು, ಗಾಣಿಗರು, ಪರಿಶಿಷ್ಟ ಜಾತಿಯ ಜನರು ವಾಸವಾಗಿದ್ದಾರೆ.

ಊರಿನ ಹೊರಗೆ ಪಶ್ಚಿಮಕ್ಕೆ ವೆಂಕಟರಮಣಸ್ವಾಮಿಯ ದೇವಾಲಯವಿದೆ. ಈ ದೇವಾಲಯದ ಅತೀ ಸಮೀಪ ಉತ್ತರಕ್ಕೆ ಒಂದು ಸೇದುಬಾವಿ ಹಾಳು ಬಿದ್ದಿದೆ. ಈ ಬಾವಿಯ ಆವರಣವೇ ಜೀವೂಬಾಯಿಯ ವಂಶಸ್ಥರು ವಾಸವಾಗಿರುವ ಮನೆ. ಈ ಮನೆಯು ಎಲ್ಲ ಹಾಳು ಬಿದ್ದಿದೆ. ಕೇವಲ ತಳಪಾಯದ ಗುರುತುಗಳು ಮಾತ್ರ ಇವೆ. ಈ ಬಾವಿಗೆ ಇಂದಿಗೂ ಜೀವಮ್ಮನ ಭಾವಿ ಎಂದು ಕರೆಯುತ್ತಾರೆ. ಈ ಬಾವಿಯ ಮೇಲಿದ್ದ ಸಮತಟ್ಟಾದ ಕಲ್ಲು ಇದೇ ಊರಿನ ಎನ್.ಎಂ. ವೆಂಕಟಪ್ಪ ಅವರ ಮನೆಯು ಮುಂದೆ ದಾರಿಗಾಗಿ ಬೋರಲಾಗಿ ಹಾಕಿದ್ದಾರೆ. ಇದರ ಕೆಳಗೆ "ತುಳಸಾ ಬಾ ಇ ಧರ್ಮಾ" ದಿ. ೪-೭-೧೯೦೬ ಎಂದು ಕೆತ್ತಲಾಗಿದೆ.

ವೆಂಕಟರಮಣ ಸ್ವಾಮಿಯ ದೇವಾಲಯದಲ್ಲಿ ಮಧ್ಯದಲ್ಲಿ ವೆಂಕಟರಮಣ ಸ್ವಾಮಿಯ ವಿಗ್ರಹ, ಬಲಕ್ಕೆ ಭೂದೇವಿ, ಎಡಕ್ಕೆ ಶ್ರೀದೇವಿಯ ಕಲ್ಲಿನ ವಿಗ್ರಹಗಳಿವೆ. ಇವು ಇಂದಿಗೂ ಊರಿನವರಿಂದ ಪೂಜೆಗೊಳ್ಳುತ್ತವೆ. ಇದು ಜೀವೂಬಾಯಿಯವರ ಮನೆತನದವರು ಆರಾಧಿಸುತ್ತಿದ್ದ ಕುಲದೇವತೆಯಾಗಿತ್ತು. ದೇವಾಲಯ ಮುಂಭಾಗದಲ್ಲಿ ಕಲ್ಲಿನ ಕಂಬಗಳಿವೆ. ಇದರ ಮೇಲೆ ನಾಮ, ಶಂಖ, ಚಕ್ರ, ಆಂಜನೇಯನ ಚಿತ್ರಗಳಿವೆ ಮತ್ತೊಂದು ಕಂಬದ ಮೇಲೆ ನಾಗ, ಹೂವು, ಚಕ್ರ, ಹನುಮನ ಚಿತ್ರಗಳಿವೆ. ಜೀವೂಬಾಯಿಯವರ

ಮನೆಯಿರುವ ಸ್ಥಳದ ಬಲಗಡೆ ಒಂದು ನೆಟ್ಟಕಲ್ಲಿದೆ ಅದು ಆಯತಾಕಾರ ಎತ್ತರವಿದ್ದು (೨ ರಿಂದ ೩ ಫೂಟ) ಮಧ್ಯದಲ್ಲಿ ವೃತ್ತಾಕಾರದ ರಂಧ್ರ ಕೊರೆಯಲಾಗಿದೆ. ಇದನ್ನು ಊರಿನ ಜನರು 'ಸಾಸುಲಮ್ಮ' ಎಂದು ಕರೆಯುವರು. ಅದರ ಪಕ್ಕದಲ್ಲಿ ನಾಗಚಿತ್ರದ ನೆಟ್ಟ ಕಲ್ಲಿದೆ. ಆ ಊರಿನ ಯಾವುದೇ ಸಾರ್ವಜನಿಕ ಆಚರಣೆಗಳು ಮೊದಲು ಈ ಸಾಸುಲಮ್ಮನನ್ನು ಪೂಜಿಸುತ್ತಾರೆ.

ಪುರಾತನವಾದ ದೊಡ್ಡ ಆಲದ ಮರದ ಕೆಳಗೊಂದು ಗಂಗಮ್ಮನ ಗುಡಿಯಿದ್ದು ಇದು ಊರ ಒಳಗಿದೆ. ಈ ಆಲದ ಮರ ಸುಮಾರು ೫೦೦ ವರ್ಷಗಳಷ್ಟು ಪುರಾತನವಾದುದು ಎಂದು ಹೇಳುತ್ತಾರೆ. ಈ ದೇವಾಲಯ ಇಂದು ಜೀರ್ಣೋದ್ಧಾರಗೊಂಡಿದೆ.

ಈ ರೀತಿಯಾದ ಗ್ರಾಮೀಣ ಪರಿಸರದಲ್ಲಿ ಸಂಪ್ರದಾಯಸ್ಥವಾದ ಒಂದು ಶಾನುಭೋಗರ ಮನೆತನವಿತ್ತು. ಆ ಶಾನುಭೋಗರೆ ರಾಮಚಂದ್ರರಾಯರು. ಈ ಹಿಂದೆ ತಿಳಿಸಿದಂತೆ ಇವರ ಮನೆ ಊರಿನ ಪಶ್ಚಿಮಕ್ಕೆ ಇತ್ತು. ಇಂದು ಅಲ್ಲಿ ಅವಶೇಷಗಳು ಕಾಣಸಿಗುತ್ತವೆ. ಈ ಶಾನುಭೋಗರು ದೇಶಮುಖ ವಂಶಸ್ಥರು. ಸುಸಂಸ್ಕೃತರೂ, ಆಚಾರಸಂಪನ್ನರೂ, ಧರ್ಮನಿಷ್ಠರಾಗಿ ಬಾಳಿಬದುಕಿದ ನಿಡುಗುರಕಿಯ ಹಿರಿಯ ಮನೆತನವಿದ್ದು, ಇಂಥ ಸಚ್ಚಾರಿತ್ರ್ಯವಂತರಾದ ರಾಮಚಂದ್ರರಾಯರ ಧರ್ಮಪತ್ನಿ ರಮಾಬಾಯಿಯವರು. ಈ ದಂಪತಿಗಳ ನಾಲ್ಕು ಜನ ಮಕ್ಕಳಲ್ಲಿ ಜೀವೂಬಾಯಿಯು ಕೊನೆಯವಳು. ಇನ್ನುಳಿದವರೆಂದರೆ; ಪದ್ಮಮ್ಮ, ಪೂರ್ಣಮ್ಮ, ನಾಗೇಶರಾಯರು. ಜೀವಮ್ಮಳು ೧೮ನೇ ನವ್ಹಂಬರ ೧೮೯೭ರಂದು (ಶಾಲಿವಾಹನ ಶಕೆ ೧೮೧೯ನೇ ಹೇವಿಳಂಬಿ ನಾಮಸಂವತ್ಸರ ಕಾರ್ತಿಕ ಬಹುಳ ನವಮಿ ಗುರುವಾರ) ಜನಿಸಿದಳು. ಬಾಲ್ಯದಲ್ಲಿ ಮನೆಯೊಳಗೆ ನಡೆಯುತ್ತಿದ್ದ ಪೂಜೆ, ವ್ರತ, ಆಚರಣೆಗಳು ಜೀವಮ್ಮಳ ಮೇಲೆ ಪ್ರಭಾವ ಬೀರಿದವು. ಊರಿನ ಸುತ್ತ ಇರುವ ಬೆಟ್ಟಗಳ ಸುಂದರ ಪರಿಸರ, ಹುಣಸೆ ಮರಗಳನ್ನು ಕಂಡು ಜೀವಮ್ಮ ಆಶ್ಚರ್ಯ ಚಕಿತಳಾದಳು. ಶಾಲೆಗೆ ಹೋಗಬೇಕೆಂದರೆ ಶಾಲೆ ಇರಲಿಲ್ಲ. ಮನೆಯಲ್ಲಿಯೇ ತಂದೆಯ ಸಹಾಯದಿಂದ ಅಕ್ಷರಾಭ್ಯಾಸ ಮಾಡಿದಳು. ಜೊತೆಗೆ ತಾಯಿಯೊಂದಿಗೆ ದೇವರ ನಾಮಗಳನ್ನು, ಹಾಡುಗಳನ್ನು ಹಾಡಲು ಕಲಿತಳು. ತಂದೆ ರಾಮಚಂದ್ರರಾಯರು ಸಂಗೀತಗಾರರಾಗಿದ್ದು ಪಿಟೀಲು ವಾದನದಲ್ಲಿ ವಿದ್ವತ್ತನ್ನು ಸಂಪಾದಿಸಿದ್ದರು. ಇದು ಜೀವಮ್ಮಳ ಮೇಲೆ ಸಂಗೀತದ ಪ್ರಭಾವವನ್ನು ಮೂಡಿಸಲು ಕಾರಣವಾಯಿತು. ಅಂದಿನ ರೂಢಿ ಹೆಣ್ಣುಮಕ್ಕಳು ಮೈನೆರೆಯುವ ಮುಂಚೆಯೆ ಮದುವೆ ಮಾಡುವುದು. ಈ ರೂಢಿಗನುಸರಿಸಿ ರಾಮಚಂದ್ರರಾಯರು ಜೀವಮ್ಮಳಿಗೆ ಹತ್ತು ವರ್ಷ ತುಂಬಲು ಸೋದರಮಾವನಿಗೆ ಕೊಟ್ಟು ಮದುವೆ ಮಾಡಿದರು. ವಿಧಿ ವಿಲಾಸವೇ ಎಂಬಂತೆ ಒಂದು ವರ್ಷದೊಳಗೆ ಜೀವಮ್ಮ ಗಂಡನನ್ನು ಕಳೆದುಕೊಂಡು ವೈಧವ್ಯಕ್ಕೆ ಕಾಲಿಟ್ಟಳು. ಮದುವೆ ಎಂದರೇನು? ಗಂಡ ಎಂದರೇನು? ವಿಧವೆ ಎಂದರೇನು? ತಿಳಿಯುವ ಮೊದಲೆ ಆ ಎಲ್ಲ ಘಟನೆಗಳು ಜೀವಮ್ಮಳ ಬಾಳಿನಲ್ಲಿ ಘಟಿಸಿಹೋದವು. ಧಾರ್ಮಿಕ ಪದ್ಧತಿಯಂತೆ ಮಂಡೆ ಬೋಳಾಗಿಸಿಕೊಂಡು ಕೆಂಪು

ಸೀರೆಯನ್ನುಟ್ಟು, ಮಡಿ ಮಡಿ ಎನ್ನುತ ಮನೆಯಲ್ಲಿಯೇ ಉಳಿದಳು. ಅವಳಿಗೆ ಶಾಶ್ವತವಾಗಿ ತವರು ಮನೆಯ ವಾಸವೇ ಅನಿವಾರ್ಯವಾಯಿತು.

ವರ್ಷದಿಂದ ವರ್ಷಕ್ಕೆ ಬೆಳೆಯುತ್ತಾ ಹೋದಹಾಗೆ ಜೀವಮ್ಮಳಲ್ಲಿ ತಿಳುವಳಿಕೆ ಮೂಡತೊಡಗಿತು. ತನ್ನ ನೋವನ್ನು ಮರೆಯಲು ಮನೆಗೆ ಬಂದವರ ಆದರಾತಿಥ್ಯ, ಅವರ ಉಪಚಾರಗಳನ್ನು ಬಲು ಪ್ರೀತಿಯಿಂದ ಮಾಡುತ್ತಿದ್ದಳು. ನಂದಗೋಕುಲದಂತಿದ್ದ ಇವರ ಮನೆಗೆ ದಿನಾಲು ಸಾಕಷ್ಟು ಜನರು ಬಂದು ಹೋಗುತ್ತಿದ್ದರು. ಅವರ ಸೇವೆಯಲ್ಲಿ ಮೈಮರೆಯುತ್ತಿದ್ದಳು. ಮನೆಯಲ್ಲಿ ಹೆಣ್ಣುಮಕ್ಕಳ ಆರೈಕೆ, ಗರ್ಭಿಣಿಯರ ಯೋಗಕ್ಷೇಮ, ಬಾಣಂತಿಯರ ಸೇವೆಯನ್ನು ಹರಿಸೇವೆಯೆಂದು ಶ್ರದ್ಧೆಯಿಂದ, ಮಮತೆಯಿಂದ ಮಾಡುತ್ತ ಜೀವನ ಸಾಗಿಸುತ್ತಿದ್ದಳು. ಆಕೆಯಲ್ಲಿರುವ ಜೀವನದ ಬಗೆಗಿನ ಪ್ರೀತಿ ಮತ್ತು ಉತ್ಸಾಹವನ್ನು ಕಂಡವರು ಬೆರಗಾಗುತ್ತಿದ್ದರು. ಹಗಲಿರುಳೆನ್ನದೆ ಯಾವುದೇ ರೀತಿಯ ಬೇಸರ ಮಾಡಿಕೊಳ್ಳದೇ ಮನೆಯೊಳಗಿನ ಮತ್ತು ಹೊರಗಿನ ಕೆಲಸಗಳನ್ನು ಮಾಡುತ್ತಿದ್ದಳು. ಸುಮಾರು ೨೦ ಆಕಳಗಳು ಅವರ ಮನೆಯಲ್ಲಿದ್ದವು. ಅವುಗಳ ಮೇವು, ನೀರು ವ್ಯವಸ್ಥೆ ಮತ್ತು ಕೊಟ್ಟಿಗೆಯ ಸ್ವಚ್ಛತೆ ಮಾಡುವದು ಜೀವಮ್ಮಳು ಬಹು ಮೆಚ್ಚಿಕೊಂಡ ಕಾರ್ಯ. ಗೋಸೇವೆಯೆಂದರೆ ಅದು ಹರಿ ಸೇವೆಯೇ ಎಂದು ಪರಿಭಾವಿಸಿದ್ದಳು.

ಊರಲ್ಲಿ ಯಾರೊಂದಿಗೆಯೂ ಒಡನಾಡ ಇಟ್ಟುಕೊಂಡವಳಲ್ಲ. ತಾನಾಯಿತು, ತನ್ನ ಕೆಲಸಾಯಿತು ಯಾವುದರ ಬಗ್ಗೆ ತಲೆ ಕೆಡಿಸಿಕೊಂಡವಳಲ್ಲ. ಸಮಯವನ್ನು ಕಳೆಯಲು, ಆಯಾಸ ಪರಿಹರಿಸಿಕೊಳ್ಳಲು ಕತೆಗಳನ್ನು ಓದುತ್ತಿದ್ದಳು. ಅವುಗಳ ಪ್ರಭಾವಕ್ಕೊಳಗಾಗಿ ಕತೆಯನ್ನು ಬರೆಯಲು ಆರಂಭಿಸಿದ ಜೀವಮ್ಮ ನಿರುಪಮಾ, ತಾರಾಮುಖಿ, ಸುಂದರರಾಜು ಕತೆಗಳನ್ನು ಬರೆದಳು. ಆದರೆ ಇವು ಜೀವಮ್ಮಳಿಗೆ ನೆಮ್ಮದಿಯನ್ನು ನೀಡಲಿಲ್ಲ. ಮನೆಯಲ್ಲಿಯ ರಾಮಾಯಣ, ಮಹಾಭಾರತ, ಭಾಗವತಗಳನ್ನು ಶ್ರದ್ಧೆಯಿಂದ ಓದಲು ಆರಂಭಿಸಿದಳು. ಓದುತ್ತ ಹೋದಂತೆ ಇವುಗಳ ಬಗೆಗೆ ಜೀವಮ್ಮಳಲ್ಲಿ ಆಸಕ್ತಿ ಮತ್ತು ಅಭಿರುಚಿ ದಿನದಿಂದ ದಿನಕ್ಕೆ ಇಮ್ಮಡಿಗೊಳ್ಳತ್ತಾ ಹೋಯಿತು. ದೀರ್ಘ ಹಾಡುಗಳು, ಶ್ರೀನಿವಾಸ ಕಲ್ಯಾಣ, ಹನುಮದ್ವಿಲಾಸ, ದ್ರೌಪದಿ ಸ್ವಯಂವರ ಮುಂತಾದ ಪೌರಾಣಿಕ ಹಾಡುಗಳನ್ನು ಪಿಟೀಲು ವಿದ್ವಾಂಸರಾದ ತಂದೆಯವರ ಸಹಾಯದಿಂದ ಹಾಡಲು ಕಲಿತಳು. ತಾನು ಹಾಡಿದ ಹಾಡುಗಳನ್ನು ಮನೆಗೆ ಬಂದವರ ಎದುರು ಸುಶ್ರಾವ್ಯವಾಗಿ ಹಾಡುತ್ತಿದ್ದಳು. ತಾನು ಹಾಡಿದ ಹಾಡಿನ ಅರ್ಥ ಮತ್ತು ಅದರ ವಿವರಣೆಯನ್ನು ಅತ್ಯಂತ ಸರಳವಾಗಿ ಹೇಳುತ್ತಿದ್ದಳು. ತಾಯಿ ಮತ್ತು ಸೋದರತ್ತೆಯರ ಜೊತೆಗೂಡಿ ಹಲವಾರು ನೇಮ, ವ್ರತ, ಉಪಾಸನೆಗಳನ್ನು ಮಾಡುತ್ತಿದ್ದಳು. ದೇವರ ಆರಾಧನೆ ಮತ್ತು ಸೇವೆಯ ಜೊತೆಗೆ ತಂದೆ–ತಾಯಿಯರ ಮತ್ತು ಹಿರಿಯರ ಸೇವೆಯನ್ನು ಶ್ರದ್ಧಾಭಕ್ತಿಯಿಂದ ಮಾಡುವುದೆಂದರೆ ಜೀವಮ್ಮಳಿಗೆ ಪವಿತ್ರ ಕಾರ್ಯವೇ ಆಗಿತ್ತು; ಅವಳಿಗೆ ಅದೊಂದು ವ್ರತವೂ ಆಗಿತ್ತು.

ತಾಯಿಯವರ ಅಗಲಿಕೆಯಿಂದಾಗಿ ಜೀವಮ್ಮ ಬಹಳಷ್ಟು ನೊಂದುಕೊಂಡಳು. ಮನೆಯನ್ನು ಬಿಟ್ಟು ತಂದೆಯೊಂದಿಗೆ ಮೈಸೂರಿಗೆ ತೆರಳಿದರು. ಜೀವುಬಾಯಿಯವರು ಮತ್ತು ಅವರ ತಂದೆಯವರು ಮನೆ ಬಿಡಲು ಕಾರಣವೇನು ಎಂಬುದಕ್ಕೆ ಅಲ್ಲಿಯ ಗ್ರಾಮಸ್ಥರು ಒಂದು ಘಟನೆಯನ್ನು ಹೀಗೆ ಪ್ರಸ್ತಾಪಿಸುತ್ತಾರೆ "ಜೀವೂಬಾಯಿಯವರ ಮನೆಯಲ್ಲಿ ಒಂದು ಕಾರ್ಯಕ್ರಮವಿತ್ತು. ಆ ದಿನ ಯಾರೋ ಒಬ್ಬರು ಮಾಂಸದ ತುಂಡೊಂದನ್ನು ತಂದು ಅವರ ಮನೆಯ ಕಟ್ಟೆಯೋ ಅಥವಾ ಬಾವಿಯಲ್ಲಿ ಹಾಕಿದರು. ಇದರಿಂದ ಬೇಸರಗೊಂಡ ಅವರು ನಿಡಗುರಕಿಯನ್ನು ಬಿಟ್ಟು ಮೈಸೂರಿಗೆ ತೆರಳಿದರು".

ಕೆಲವು ದಿನ ಮೈಸೂರಿನಲ್ಲಿ ಮತ್ತೆ ಕೆಲದಿನ ಬೆಂಗಳೂರಿನಲ್ಲಿ ಹೀಗೆ ತಂದೆಯಿರುವವರೆಗೆ ಜೀವಮ್ಮ ಸಹೋದರರ ಮನೆಯಲ್ಲಿದ್ದಳು. ತಂದೆಯು ತೀರಿಕೊಂಡ ನಂತರ ಆ ನೋವನ್ನು ಸಹಿಸಿಕೊಳ್ಳಲಾರದೆ ಅದರ ಪರಿಹಾರಕ್ಕಾಗಿ ತೀರ್ಥಯಾತ್ರೆಯನ್ನು ಕೈಗೊಂಡಳು. ಈ ವೇಳೆಯಲ್ಲಿ ಹಲವಾರು ಪುಣ್ಯಕ್ಷೇತ್ರಗಳ ದರ್ಶನದಿಂದ ಮನಸ್ಸಿಗೆ ನೆಮ್ಮದಿಯನ್ನು ತಂದುಕೊಂಡಳು. ತಾನು ಸಂದರ್ಶಿಸಿದ ಕ್ಷೇತ್ರಗಳನ್ನು ತನ್ನ ರಚನೆಗಳಲ್ಲಿ ಜೀವಮ್ಮ ಪ್ರಸ್ತಾಪಿಸಿರುವಳು.

ಅಂದಿನ ಸಂದರ್ಭದಲ್ಲಿ ಹಳೆಮೈಸೂರು ಭಾಗದಲ್ಲಿ ಎಲ್ಲೆಡೆಗೆ ಪುರಾಣ, ಪ್ರವಚನ, ಕೀರ್ತನೆ, ಸಪ್ತಾಹದಂತಹ ಧಾರ್ಮಿಕ ಕಾರ್ಯಕ್ರಮಗಳು ಜರುಗುತ್ತಿದ್ದವು. ಈ ಕಾರ್ಯಕ್ರಮಗಳು ಜೀವೂಬಾಯಿಯವರಿಗೆ ಬಹಳಷ್ಟು ಅಪ್ಯಾಯಮಾನವಾದವು. ಜೀವೂಬಾಯಿಯವರು ಸ್ವತ: ಹರಿದಾಸರ ದೇವನಾಮಗಳನ್ನು ಪುಸ್ತಕಗಳ ಸಹಾಯವಿಲ್ಲದೆ ಸುಲಭವಾಗಿ ಇಂಪಾಗಿ ಹಾಡುತ್ತಿದ್ದಳು. ಇವಳ ಹಾಡುಗಳನ್ನು, ಹಾಡುಗಾರಿಕೆಯ ಲಯವನ್ನು ಮೆಚ್ಚಿ ಸಭಿಕರೆಲ್ಲರೂ ತಲೆದೂಗುತ್ತಿದ್ದರು. ಈ ರೀತಿಯಾಗಿರುವ ಜೀವೂಬಾಯಿಯವರ ಆಸಕ್ತಿ ಮತ್ತು ಪ್ರತಿಭೆಯನ್ನು ಗುರುತಿಸಿದ ಹಲವಾರು ಜನರು ಅವರ ಸ್ನೇಹವನ್ನು ಹೊಂದಿದರು. ಸಮಾನ ಮನಸ್ಕರಾದ ಸ್ನೇಹಿತವಲಯವು ಸೇರಿಕೊಂಡು ಏಕಾದಶಿ, ಗೋಕುಲಾಷ್ಟಮಿ, ಋಷಿಪಂಚಮಿ, ಮಹಾಶಿವರಾತ್ರಿ, ಮುಂತಾದ ಹಬ್ಬಗಳಂದು ಉಪವಾಸ, ಜಾಗರಣೆಗಳನ್ನು ಅಪಾರಭಕ್ತಿ ಮತ್ತು ನಿಷ್ಠೆಯಿಂದ ನಡೆಸುವ ಮೂಲಕ ಭಗವಂತನ ಕೃಪೆಗೆ ಪಾತ್ರರಾಗುತ್ತಿದ್ದರು. ಇಂಥ ಧಾರ್ಮಿಕ ಕಾರ್ಯಗಳಿಂದ ಬದುಕಿನಲ್ಲಿ ನೆಮ್ಮದಿ ಕಂಡುಕೊಳ್ಳುತ್ತಿದ್ದರು.

ಜೀವೂಬಾಯಿಯು ಹರಿ ಸಂಕೀರ್ತನೆಯಲ್ಲಿ ಕಾಲಕಳೆಯುತ್ತಿರಲು 'ಹುಡುಕುವ ಬಳ್ಳಿ ಕಾಲಸುತ್ತಿತೆಂಬಂತೆ' ಬಹು ದಿನದ ಶ್ರಮ ಸಾರ್ಥಕಗೊಳ್ಳುವಂತೆ, ಬಿತ್ತಿದ ಬೀಜ ಫಲಕೊಡುವಂತೆ ಜೀವುಬಾಯಿಯವರ ಮೇಲೆ ದೇವರ ಅನುಗ್ರಹದ ಹಸ್ತ ತಾನಾಗಿಯೇ ಸ್ಪರ್ಶಿಸಲು ಬಂತು ಎಂಬಂತೆ ಘಟನೆಯೊಂದು ನಡೆಯಿತು. ಒಮ್ಮೆ ಅಪರೂಪಜ್ಞಾನಿಗಳು ತುಮಕೂರಿನ ಬಳಿಯ ದೇವರಾಯನ ದುರ್ಗದಲ್ಲಿ ವಾಸವಾಗಿದ್ದ ಶ್ರೀತಂದೆ ಮುದ್ದುಮೋಹನ ವಿಠ್ಠಲದಾಸರ ಶಿಷ್ಯರಾದ ಶ್ರೀ ಉರಗಾದ್ರಿ ವಿಠ್ಠಲದಾಸರು ತಮ್ಮ ಶಿಷ್ಯಬಳಗದೊಡಗೂಡಿ ಹಾಸನಕ್ಕೆ ಬಂದಿದ್ದರು. ಇಲ್ಲಿ ಉರಗಾದ್ರಿ ವಿಠ್ಠಲದಾಸರು

ಒಂದು ದಿನ ಪೂರ್ತಿ ಹಗಲಿರುಳು ಶ್ರೀ ಜಗನ್ನಾಥ ವಿಠ್ಠಲದಾಸರು ಬರೆದ ಶ್ರೀ ಹರಿಕಥಾಮೃತಸಾರದ ಬಗೆಗೆ ಪ್ರವಚನ ಪ್ರಮೇಯ ವಿಮರ್ಷೆಗಳನ್ನು ಮಾಡಿದರು. ಈ ಸಪ್ತಾಹದಲ್ಲಿ ಜೀವೂಬಾಯಿಯವರು ಮೈಸೂರಿನಿಂದ ಬಂದು ಸಕ್ರಿಯವಾಗಿ ಪಾಲ್ಗೊಂಡಿದ್ದರು. ಎಲ್ಲ ಬಗೆಯ ಕಾರ್ಯಗಳನ್ನು ಯಾವುದೇ ಮೀನಾಮೇಷ ತೋರದೆ ಲವಲವಿಕೆಯಿಂದ ಮಾಡಿದರು. ಅವಳ ಕಾರ್ಯತತ್ಪರತೆ ಮತ್ತು ಶ್ರದ್ಧೆ-ಭಕ್ತಿಯನ್ನು ಕಣ್ತುಂಬ ಕಂಡು, ಮನಪೂರ್ತಿ ಮೆಚ್ಚಿಕೊಂಡ ಶ್ರೀ ಉರಗಾದ್ರಿ ವಿಠ್ಠಲದಾಸರು ಶ್ರೀ ಹರಿ ಗುರುಗಳ ಪ್ರೇರಣೆಯಂತೆ ಜೀವಮ್ಮಳಿಗೆ **'ಶ್ರೀ ಕಮಲನಾಭ ವಿಠ್ಠಲ'** ಎಂಬ ಅಂಕಿತವನ್ನು ನೀಡಿ, ಶ್ರೀಮನ್ನಾರಾಯಣನನ್ನು ಈ ರೂಪದಲ್ಲಿ ಸ್ಮರಿಸಿ ಆರಾಧಿಸುವಂತೆ ಬೋಧನೆ ನೀಡಿದರು. ಅಂದಿನಿಂದ ಜೀವಮ್ಮಳಿಗೆ ದೇವರನ್ನು ಕುರಿತು ಹಾಡುವ ಮತ್ತು ಬರೆಯುವ ಬಲ ಬಂದಂತಾಯಿತು.

'ಕರುಣದಿಂದ ಕಾಯೋ ಎನ್ನನು ಉರಗಾದ್ರಿವಿಠ್ಠಲ ದೇವ' ಎಂಬುದು ಜೀವೂಬಾಯಿಯವರು ರಚಿಸಿರುವ ಪ್ರಥಮ ಕೀರ್ತನೆ. ಗುರು ಕಾರುಣ್ಯವನ್ನು ಪಡೆದುಕೊಂಡ ಜೀವೂಬಾಯಿಯು ಮುಂದುವರಿದು ಕೀರ್ತನೆಗಳನ್ನು ಮತ್ತು ಖಂಡ ಕಾವ್ಯಗಳನ್ನು ರಚಿಸಿರುವಳು. ಪ್ರತಿ ವರ್ಷ ಯುಗಾದಿಯಂದು ಒಂದು ಇಲ್ಲವೆ ಎರಡು ಕೀರ್ತನೆಗಳನ್ನು ಬರೆದು ಭಗವಂತನಿಗೆ ಅರ್ಪಿಸುತ್ತಿದ್ದಳು. ಇದನ್ನು ಒಂದು ವ್ರತವೇ ಎಂಬಂತೆ ಕೊನೆ ಕಾಲದವರೆಗೂ ಬಿಡದೆ ನಡೆಸಿಕೊಂಡು ಬಂದಳು. ಜೀವೂಬಾಯಿಯು ತಾನು ಬರೆದ ಹಾಡುಗಳನ್ನು ಎಂದಿಗೂ ಮರಳಿ ತಿದ್ದುತ್ತಿರಲಿಲ್ಲ. 'ಇಟ್ಟ ಪದ ಅಳುಕದೊಂದಗ್ಗಳಿಕೆ' ಎಂಬುದನ್ನು ರೂಢಿಸಿಕೊಂಡಿದ್ದಳು. ತನ್ನ ಮನಸ್ಸಿನಲ್ಲಿ ಬರೆಯಬೇಕೆಂಬ ಭಾವ ಬಂದ ಕೂಡಲೆ ಬರವಣಿಗೆಯನ್ನು ಆರಂಭಿಸುತ್ತಿದ್ದಳು. ಬರೆದಾದ ಮೇಲೆ ಇದನ್ನು ಬರೆಯಿಸಿದವನು ಶ್ರೀಹರಿಯು, ಆತ ಹೇಳಿದಂತೆ ತಾನು ಬರೆದಿರುವುದಾಗಿ ಹೇಳುತ್ತಿದ್ದಳು. ಶ್ರೀಹರಿಯ ಆಜ್ಞಾನುಸಾರವಾಗಿ ಬರೆದುದನ್ನು ತಿದ್ದುವ ಅಧಿಕಾರ ನನಗಿಲ್ಲ, ಇದರೊಡೆಯ ಶ್ರೀಹರಿ ಎಂಬುದನ್ನು ದೃಢವಾಗಿ ನಂಬಿದ್ದಳು. ಹೀಗೆಯೇ ಜೀವಮ್ಮ ಜೀವನಪೂರ್ತಿ ಸಾಹಿತ್ಯ ರಚನೆಯಲ್ಲಿ ಕಾಲ ಕಳೆಯುತ್ತಿರಲು, ವಯೋಮಾನಕ್ಕನುಗುಣವಾಗಿ ಕಣ್ಣು ಮಂದಾಗಲು ದೃಷ್ಟಿ ಕಡಿಮೆಯಾಗತೊಡಗಿತು. ಆನಂದನಾಮ ಸಂವತ್ಸರದಂದು ಬಹಳಷ್ಟು ಕಷ್ಟಪಟ್ಟು ಜೀವೂಬಾಯಿಯವರು ಸೀಮೆಸುಣ್ಣದ ಸಹಾಯದಿಂದ ಮನೆಯ ಬಾಗಿಲಿನ ಹಿಂದೆ ಕೀರ್ತನೆ ಬರೆದಳು, ಆವೊತ್ತಿನಿಂದಲೇ ಪೂರ್ಣವಾಗಿ ದೃಷ್ಟಿಯನ್ನು ಕಳೆದುಕೊಂಡಳು. ಪೂರ್ತಿ ಕಣ್ಣು ಕಳೆದುಕೊಂಡರೂ ಬರೆಯುವ ಬಯಕೆ ಜೀವಮ್ಮನಿಂದ ದೂರಾಗಿರಲಿಲ್ಲ. ಪ್ರೇರಣೆ ಬಂದ ತಕ್ಷಣ ಬೇಗ ಬೇಗನೆ ಓದಿದಂತೆ ಹೇಳುತ್ತಿದ್ದಳು. ಅವರ ಸಹೋದರನು ಅವಳು ಹೇಳಿದುದನ್ನು ಪದಗಳನ್ನಾಗಿ ವಿಂಗಡಿಸಿ ಬರೆಯುತ್ತಿದ್ದರು. ಒಂದು ಬಾರಿ ಜೀವೂಬಾಯಿಯವರು ತಮ್ಮ ರಚನೆಯನ್ನು ಸಾಗರಕಟ್ಟೆಯ ನರಹರಿತೀರ್ಥರ ಎದುರು ಹಾಡಿ ತೋರಿಸಿದರು. ಅವರು ಇದು ಉತ್ತಮ ರಚನೆ ಎಂದು ತಲೆದೂಗಿದರು. ಅಗಸ್ಟ ೩೧-೧೯೮೭ರಂದು ಬರೆದ "ಸ್ಮರಿಸಿ ಬದುಕಿರೋ ಗುರುವರ

ನರಹರಿಸ್ಮರಣೆ ಮರೆಯದಲೆ ಕೀರ್ತಿಸಿ ನಲಿದವರ" ಎಂಬುದು ಜೀವೂಬಾಯಿಯವರ ಕೊನೆಯ ರಚನೆಯಾಯಿತು.

ಹುಟ್ಟಿನಿಂದ ತನ್ನ ಜೀವಿತದ ಕೊನೆಯವರೆಗೂ ಜೀವೂಬಾಯಿಯು ತನ್ನನ್ನು ಮತ್ತೊಬ್ಬರ ಸೇವೆಗಾಗಿ ಮುಡಿಪಾಗಿಟ್ಟುಕೊಂಡವಳು. ಬಾಲ್ಯದಲ್ಲಿ ಮನೆಗೆಲಸ, ವಿಧವೆಯಾದ ಮೇಲೆ ಹೆಣ್ಣುಮಕ್ಕಳ, ಬಾಣಂತಿಯರ, ಗೋವುಗಳ ಆರೈಕೆಯಲ್ಲಿ ತನ್ನ ನೋವನ್ನು ಮರೆತವಳು. ಗುರುಗಳಾದ ಉರಗಾದ್ರಿ ವಿಠ್ಠಲದಾಸರನ್ನು ಕುರಿತು ಬರೆದ (ಕರುಣದಿಂದ ಕಾಯೋ ಎನ್ನನು ಉರಗಾದ್ರಿ ವಿಠ್ಠಲದೇವ) ಹಾಡು ಮೊದಲ ರಚನೆಯಾದರೆ ಉರಗಾದ್ರಿ ವಿಠ್ಠಲದಾಸರ ಶಿಷ್ಯರಾದ ತಂದೆ ವೆಂಕಟವಿಠ್ಠಲದಾಸರ ಬಗೆಗೆ ಬರೆದ (ಸ್ಮರಿಸಿ ಬದುಕಿರೋ ಗುರುವರ ನರಹರಿ ಸ್ಮರಣೆ ಮರೆಯದೆ ಕೀರ್ತಿಸಿ ನಲಿದವರ) ಹಾಡು ಕೊನೆಯದು. ಇಷ್ಟೆಲ್ಲ ಸಾಹಿತ್ಯ ಕೃಷಿ ಮಾಡಿ ಜೂನ ೯, ೧೯೮೩ ರಂದು (ಶಾಲಿವಾಹನ ಶಕೆ ೧೯೦೫ ಶ್ರೀರುಧಿರೋದ್ಗಾರಿ ಸಂವತ್ಸರ ಉತ್ತರಾಯಣ ವೈಶಾಖ ಬಹುಳ ಚತುರ್ದಶಿ ಗುರುವಾರ) ಜೀವೂಬಾಯಿಯು ಇಹ ಲೋಕದ ಬದುಕನ್ನು ತೊರೆದು ಶ್ರೀಹರಿಯ ಸಾನಿಧ್ಯವನ್ನು ಪಡೆದರು.

## ಅಧ್ಯಾಯ ೪

# ಜೀವೂಬಾಯಿಯ ಕೀರ್ತನೆಗಳು : ವಿಶ್ಲೇಷಣೆ

೪.೧. ಸ್ತುತಿ, ಸ್ತೋತ್ರ, ನವವಿಧ ಭಕ್ತಿ

೪.೨. ಭಗವಂತನ ಸಂಕೀರ್ತನೆ

೪.೩. ಆತ್ಮ ನಿವೇದನೆ

೪.೪. ದಶಾವತಾರ

೪.೫. ಲೋಕನೀತಿ

೪.೬. ಸಂಪ್ರದಾಯದ ಹಾಡುಗಳು

೪.೭. ಯುಗಾದಿಯಂದು ರಚಿತವಾದ ಹಾಡುಗಳು

೪.೮. ವಿಶೇಷ ಕೀರ್ತನೆಗಳು

## ಅಧ್ಯಾಯ ೪

# ಜೀವೂಬಾಯಿಯ ಕೀರ್ತನೆಗಳು: ವಿಶ್ಲೇಷಣೆ

ಜೀವೂಬಾಯಿಯವರು ತನ್ನ ಪೂರ್ವದ ಹರಿದಾಸ ಪರಂಪರೆಯನ್ನು ಅನುಸರಿಸಿ ಕೀರ್ತನೆಗಳನ್ನು ರಚಿಸಿರುವರು. 'ಕಮಲನಾಭವಿಠ್ಠಲ' ಎಂಬ ಅಂಕಿತವನ್ನು ಪಡೆದುಕೊಂಡು ೧೭೦ ಕೀರ್ತನೆಗಳನ್ನು ಬರೆದಿರುವಳು. (ಲಭ್ಯವಾದ ಕೀರ್ತನೆಗಳು) ಉಗಾಭೋಗ ಮತ್ತು ಸುಳಾದಿಗಳು ಕಂಡು ಬರುವುದಿಲ್ಲ. ಇವಳು ರಚಿಸಿರುವ ಕೀರ್ತನೆಗಳ ಗಾತ್ರದ ಆಧಾರದಿಂದ ಕೀರ್ತನೆಗಳು ಮತ್ತು ಖಂಡಕಾವ್ಯಗಳು ಎಂದು ವಿಭಾಗಿಸಲಾಗಿದೆ. ಚಿಕ್ಕ ರಚನೆಗಳಲ್ಲಿ "ಪಲ್ಲವಿ ಅನುಪಲ್ಲವಿ ನುಡಿಗಳನ್ನು ನಿರ್ದೇಶಿಸಿಲ್ಲ"[೧] ಎಂದು ಲೀಲಾವತಿ ಎಸ್. ರಾವ್ ಅವರು ತಿಳಿಸಿದ್ದಾರೆ. ಯಾವುದೇ ರೀತಿಯ ಛಂದೋನಿಯಮಗಳನ್ನು ಅನುಸರಿಸದೆ ಸ್ವತಂತ್ರವಾಗಿ ಕೀರ್ತನೆಗಳನ್ನು ರಚಿಸಿದ್ದಾಳೆ. ಪ್ರಾಸವೂ ಸಹ ನಿಯಮಿತವಾಗಿ ಬಂದಿಲ್ಲ. ಕೆಲವು ಕಡೆ ಪ್ರಾಸವು ಕಂಡುಬರುತ್ತದೆ. ಕೀರ್ತನೆಗಳ ನುಡಿಗಳು ಕೆಲವೆಡೆ ಸಮ ಸಂಖ್ಯೆಯಲ್ಲಿದ್ದರೆ, ಕೆಲವೆಡೆ ಬೆಸ ಸಂಖ್ಯೆಯಲ್ಲಿವೆ.

"ಕೀರ್ತನೆಗೆ ಸಂವಾದಿಯಾಗಿ 'ಹಾಡಿಹೊಗಳು' ಎಂಬ ನುಡಿಗಟ್ಟೊಂದು ಕನ್ನಡದಲ್ಲಿ ಉಂಟು. 'ಕೀರ್ತನ' ಈ ಬಗೆಯ ಹಾಡಿಹೊಗಳುವ ವಿಧಾನ. ಭಕ್ತ ಭಗವಂತನನ್ನು ಹೊಗಳಿದ್ದು"[೨] ಕೀರ್ತನೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಹೀಗೆ ಹಾಡಿಹೊಗಳುವ, ಬದುಕಿನ ಬಂಧನದಿಂದ ಬಿಡುಗಡೆಗೆ ಯತ್ನಿಸುವ ಒಂದು ಸ್ಥಿತಿ. ಇಂಥ ಸ್ಥಿತಿಯೇ ಮುಂದೆ ಹಾಡಾಗುತ್ತ 'ಕೀರ್ತನೆ'ಗಳ ರೂಪವನ್ನು ಪಡೆದುಕೊಂಡಿತು.

ಜೀವೂಬಾಯಿಯ ಕೀರ್ತನೆಗಳಲ್ಲಿ ಬಹುಪಾಲು ರಚನೆಗಳು ಭಗವಂತನ ಸಂಕೀರ್ತನೆ, ಆತ್ಮನಿವೇದನೆ, ಸಂಪ್ರದಾಯ ಕೀರ್ತನೆಗಳನ್ನು ಹೊಂದಿವೆ. ವಸ್ತು ವೈವಿಧ್ಯತೆ ಇದ್ದರೂ; ಹರಿಸಂಕೀರ್ತನೆಯನ್ನು ಮೈಮರೆತು ಹಾಡಿರುವುದು ತಿಳಿದು ಬರುತ್ತದೆ. ದೇವ–ದೇವತೆಗಳ ಸ್ತುತಿ, ಗುರುಸ್ತುತಿ ಮಾಡಿದ್ದಾಳೆ. ಗಣಪತಿ, ಕೃಷ್ಣ, ನರಸಿಂಹ, ಶ್ರೀನಿವಾಸ, ಶ್ರೀರಾಮ, ಲಕ್ಷ್ಮೀದೇವಿ, ಹನುಮ, ಭೀಮ, ಮಧ್ವ ಗುರುಗಳನ್ನು ಮನದುಂಬಿ ಭಕ್ತಿಯಿಂದ ಹೊಗಳಿ ಪುಣೀತಳಾಗಿದ್ದಾಳೆ.

ಜೀವಮ್ಮ ಅವಕಾಶ ಸಿಕ್ಕಾಗೆಲ್ಲ ಹರಿಯ ದಶಾವತಾರಗಳನ್ನು ಹಿಂದಿನ ಕೀರ್ತನಕಾರರ ಹಾಗೆ ಬಹು ಶ್ರದ್ಧೆಯಿಂದ ವರ್ಣಿಸಿದ್ದಾಳೆ. ಶ್ರೀಕೃಷ್ಣನ ಬಾಲಲೀಲೆಗಳನ್ನು ಭಾಗವತದ ದಶಮಸ್ಕಂದದಲ್ಲಿ ಬರುವ ಕೃಷ್ಣನ ವಿವಿಧ ಕ್ರೀಡೆಗಳನ್ನು ಹೊಗಳಿದ್ದಾಳೆ.

## ೪.೧ ಸ್ತುತಿ – ಸ್ತೋತ್ರ – ನವವಿಧ ಭಕ್ತಿ:

ಹರಿಸ್ತುತಿಯು ಕೀರ್ತನಕಾರರ ಮುಖ್ಯ ಉದ್ದೇಶ ಮತ್ತು ಆಶಯ. ಆದರೂ ಸಹ ಜೀವಮ್ಮ ದೇವ–ದೇವತೆಗಳೊಂದಿಗೆ ಗುರುಗಳ ಸ್ತುತಿ ಮಾಡಿದ್ದಾಳೆ.

"ವಂದಿಪೆ ನಾನಿನ್ನನು ಸೊಂಡಿಲ ಗಣಪಥ
ಬಂದೆನ್ನ ಸಲಹೊ ನೀನು
. . . . . . . . . . . . . . . . . . . . . .
ಗೌರಿಯ ವರಪುತ್ರನೆ ಪ್ರಾರ್ಥಿಸುವೆ ಶ್ರೀ
ಗೌರಿಯ ಪಾದ ಸ್ಮರಣೆ
ಗೌರವದಿಂ ಮಾಳ್ಪ ಕಾರ್ಯ ಎನಗೆ ಕೊಟ್ಟು
ಮಾರಪಿತನ ಪಾದವ ತೋರಿಸು ತವಕದಿ
ಅಂತರಂಗದ ಶತ್ರುಗಳಿಂದಲಿ ಮನ
ಚಿಂತೆಗೆ ಗುರಿಗೈಸಿತೊ
ಎಂತು ಈ ಭವ ದಾಂಟುವಂಥ ಪಥವಕಾಣೆ
ಕಂತುಪಿತನ ಪಾದ ಚಿಂತನೆ ಕೊಡಿಸಯ್ಯ"[೩]

ಗಣಪತಿಯಲ್ಲಿ ತನ್ನಂತರಂಗದ ಶತ್ರುಗಳಾದ ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರವೆಂಬುವುಗಳಿಂದ ರಕ್ಷಿಸಿ ಈ ಭವವನ್ನು ಗೆಲ್ಲುವ ದಾರಿಯನ್ನು ತೋರಿಸುವಂತೆ ಸ್ತುತಿಸಿರುವಳು. ತಾನು ಹರಿಭಕ್ತೆಯಾಗಿದ್ದರೂ ಶಿವಪುತ್ರನನ್ನು ಸ್ತುತಿಗೈಯ್ದಿರುವುದನ್ನು ನೋಡಿದರೆ ದಾಸರಿಗೆ ಹರಿಹರ ಭೇಧವಿರಲಿಲ್ಲವೆಂಬುದು ತಿಳಿದು ಬರುತ್ತದೆ.

"ಪುರಂದರ ಗಡದೊಳು ಹಿರಿಯನೆಂದೆನಿಸಿದ
ವರದಪ್ಪನಿಗೆ ವರಕುವರನೆಂದೆನಿಸಿದೀ
ಧರೆಯೊಳು ತನಗ್ಯಾರು ಸರಿಯಿಲ್ಲದಂತೆ ಮೆರೆಯೆ
ಸಿರಿಯರಸನು ಶೀಘ್ರದಲಿ ತಾನರಿಯುತ"[೪]

ಹೀಗೆ ದಾಸಶ್ರೇಷ್ಠರೆನಿಸಿದ ಪುರಂದರದಾಸರನ್ನು ಸ್ತುತಿಸಿರುವಳು. 'ದಾಸರ ಭಜಿಸುತ ಕ್ಲೇಷವ ಕಳೆಯಿರೋ ವಾಸುದೇವ ಭಕ್ತರಾದ ಶ್ರೀ ಪುರಂದರ' ದಾಸರನ್ನು ಜೀವಮ್ಮ ಹೊಗಳಿ ಅವರ ಇಡೀ ಬದುಕನ್ನು ಕೊಂಡಾಡಿರುವಳು.

ತನಗೆ ಅಂಕಿತವನ್ನು ದಯಪಾಲಿಸಿದ ಗುರುಗಳಾದ ಉರಗಾದ್ರಿ ವಿಠ್ಠಲ ದಾಸರನ್ನು ಕುರಿತು.

“ಕರುಣದಿ ಕಾಯೋ ಎನ್ನನ್ನು
ಉರಗಾದ್ರಿ ವಿಠ್ಠಲ ದೇವ
. . . . . . . . .  . . . . . .
ತಂದೆ ವೆಂಕಟೇಶ ವಿಠ್ಠಲ
ಬಂದು ಎನ್ನ ಹೃದಯದಲ್ಲಿ
ನಿಂದು ನಾಮ ನುಡಿಸಿ ಪೇಳ್ವ
ಚಂದ ಮನಕೆ ತಂದು ಕೊಡುತ
ವಾಸುದೇವ ನಿನ್ನ ಮಹಿಮೆ
ತೋಷದಿಂದ ಭಜಿಸುವುದಕೆ
ದೋಷಗುಣಗಳನ್ನೆ ಕಳೆದು
ಲ್ಲಾಸ ಮನಕೆ ಒದಗುವಂತೆ
. . . . . . . . . . . . .
. . . . . . . . . . . . .
ಅಂತರಂಗದೊಳಗೆ ನಿನ್ನ
ಚಿಂತೆ ಮರೆಯದಂತೆ ಕೊಟ್ಟು
ಅಂತರಾತ್ಮ ಕಮಲನಾಭ
ವಿಠ್ಠಲ ಸಂತೈಸಿ ಕಾಯೊ”[೫]

ಹೀಗೆ ಗುರುಗಳನ್ನು ಸ್ತುತಿಸಿರುವಳು. ಜೀವಮ್ಮ ಉರಗಾದ್ರಿ ವಿಠ್ಠಲದಾಸರಿಂದ ಅಂಕಿತ ಪಡೆದು ರಚಿಸಿದ ಮೊದಲ ಕೀರ್ತನೆ ಇದು. ಅಂದರೆ ಜೀವಮ್ಮಳ ಕೀರ್ತನೆ ರಚನೆಯು ಗುರುಸ್ತುತಿಯಿಂದಲೇ ಆರಂಭವಾದುದು ತಿಳಿಯುತ್ತದೆ.

ಪ್ರತಿಯೊಬ್ಬರು ಗುರುಗಳನ್ನು ಅತ್ಯಂತ ಶ್ರದ್ಧೆಯಿಂದ ನಂಬಬೇಕು. ನಮ್ಮ ಮನದ ತೊಂದರೆಗಳನ್ನು ಪರಿಹರಿಸುವ ಶಕ್ತಿಯನ್ನು ಹೊಂದಿರುವ ಗುರುವನ್ನು ನಂಬುವುದರಿಂದ ಮನಸ್ಸಿಗೆ ಸಂತೋಷ ದೊರೆಯುತ್ತದೆ.

“ಸರಿಯುಂಟೆ ಧರೆಯೊಳಗೆ ಗುರುಗಳ ಪೋಲ್ವ
ನರರುಂಟೆ ಭುವಿಯೊಳಗೆ
ಸಿರಿ ಉರಗಾದ್ರಿವಾಸ ವಿಠ್ಠಲದಾಸರ ಕೂಡಿ

ವರಗಳ ಕೊಡುವಂಥ ಪರಮ ಸಾತ್ವಿಕರಾದ
ಪರಮ ಮಂಗಳ ಮೂರ್ತಿಯ ರೂಪವ ಹಗ
ಲಿರುಳು ಧ್ಯಾನವ ಮಾಳ್ಪರ
ಪರಮ ಗುರುಗಳ ಪರಮ ಪ್ರೀತಿಯ ಪಡೆದಂಥ
ಉರಗಾದ್ರಿ ವಾಸ ವಿಠ್ಠಲ ದಾಸರೆಂಬಂಥ"[೬]

ಈ ಸ್ತುತಿ ಕೀರ್ತನೆಯಲ್ಲಿ ಜೀವಮ್ಮ ಜಗತ್ತಿನಲ್ಲಿಯೇ 'ಗುರು ಸರ್ವೋತ್ತಮ' ಎಂಬುದನ್ನು ಬೆಂಬಲಿಸಿರುವಳು. ಗುರುವಿಗಿಂತ ಅಧಿಕ ಶಕ್ತಿ ಮತ್ತೊಂದಿಲ್ಲ ಎಂಬ ಸಾರ್ವಕಾಲಿಕ ಸತ್ಯವನ್ನು ಅರುಹಿದ್ದಾಳೆ.

"ದೇಶ ದೇಶವ ತಿರುಗಿ ತನುಮನಗಳ
ಬೇಸರ ಗೊಳಿಸಬೇಕೆ
ಪೋಷಿಪ ಗುರುಗಳ ಪಾದ ನಂಬಿದ ಮೇಲೆ
ವಾಸುದೇವನೆ ನಲಿವ ಮುಂದೊಲಿವ
. . . . . . . . . . . . . . . . . .
ಕತ್ತಲೆ ಮನೆಗಳಲ್ಲಿ ಅಡಗಿಹ ವಸ್ತು
ಲಕ್ಷ ಪರಿಮಿತಿ ಇದ್ದರು
ಹಸ್ತದಿ ಜ್ಯೋತಿಯ ನೆತ್ತಿ ತೋರುವ ಪರಿ
ಭಕ್ತರ ಸಲಹುವರು ಗುರುವರರು"[೭]

ಈ ಜಗತ್ತಿನಲ್ಲಿ ವ್ಯಾಪಿಸಿರುವ ಒಳಹೊರಗಿನ ಕತ್ತಲೆ ಎಷ್ಟೇ ದೊಡ್ಡ ಪ್ರಮಾಣದಲ್ಲಿದ್ದರೂ, ಅದನ್ನು ತೊಡೆದು ಹಾಕಿ ಬೆಳಕನ್ನು ನೀಡುವ ಜ್ಯೋತಿ ಸ್ವರೂಪಿ ಶಕ್ತಿ ಗುರುವಿನದು. ಕತ್ತಲೆಯಿಂದ–ಬೆಳಕಿನೆಡೆಗೆ, ಅಜ್ಞಾನದಿಂದ –ಜ್ಞಾನದೆಡೆಗೆ ಕೊಂಡೊಯ್ಯುವ ಗುರುವಿನ ಶಕ್ತಿ ಎಲ್ಲಕ್ಕೂ ಅಧಿಕ. ಇಂಥ ಶಕ್ತಿಯನ್ನು (ಗುರುಪಾದವನ್ನು) ಭಕುತಿಯಲಿ ಸದಾಕಾಲ ಭಜಿಸುವ ಗುಣ ಜೀವಮ್ಮಳದು. ನಂಬಿದವರ ಕೈ ಬಿಡಲಾರದ

"ಕಮಲನಾಭ ವಿಠ್ಠಲನನು ಪೂಜಿಸಿ
ವಿಮಲ ಸುಕೀರ್ತಿಯ ಪಡೆದವರ
ಶ್ರಮಜೀವಿಗಳಿಗೆ ದಣಿಸದೆ ಮುಂ
ದನ ಘನ ಸನ್ಮಾರ್ಗವ ಬೋಧಿಪರ
ನವನವ ಲೀಲೆಗಳಿಂದೊಪ್ಪುವ

ಹರಿಗುಣಗಳನ್ನು ಕೊಂಡಾಡುವರ
ನಮಿಸಿ ಬೇಡುವೆ ಉರಗಾದ್ರಿವಾಸ ವಿ
ಠ್ಠಲ ದಾಸರು ಎಂದೆನಿಸುವವರ"[೮]

ಎನ್ನುತ್ತ ತನ್ನ ಗುರು ಉರಗಾದ್ರಿವಾಸ ವಿಠ್ಠಲದಾಸರಿಗೆ ಜೀವಮ್ಮ ತಲೆಬಾಗಿ ನಮಿಸುವಳು. ಸದಾಕಾಲವು ಹರಿಯನ್ನು ಸ್ತುತಿಸುವ, ಸನ್ಮಾರ್ಗವ ತೋರಿಸುವವರ ಸಂಗವನ್ನು ದಯಪಾಲಿಸುವಂತೆ ಬೇಡಿಕೊಂಡಿರುವಳು. ಎಂದೆಂದಿಗೂ ತನ್ನ ತಪ್ಪುಗಳನ್ನು ಎಣಿಸದೇ ಕೃಪೆದೋರಬೇಕೆಂದು

"ದೇಹದಿ ಬಾಂಧವರು ಅವರು
ಆರು ಮಂದಿ ಇಹರು
ಮಾಯಾಪಾಶದಿ ಬಂಧಕ ಪಡಿಸುತ
ಹಾಯಲೀಸರೊ ಅಂಘ್ರಿಗಳಲಿ"[೯]

ಆರು ಜನ ಬಂಧುಗಳು ನಿನ್ನ ಕಡೆಗೆ ಬರಲು ನನ್ನನ್ನು ಬಿಡುತ್ತಿಲ್ಲ. ಇವರ ಬಂಧನದಿಂದ ಬಿಡುಗಡೆಗೊಳಿಸಿ ನಿಮ್ಮ ಪಾದವ ಪೂಜಿಸುವಂತೆ ಕೃಪೆದೊರೆಂದು ಸ್ತುತಿಸುವಳು.

"ಹರಿಗುಣ ಕೀರ್ತಿಸಿದವರ ನರ
ಹರಿಯ ಮಹಿಮೆಗಳ ಶಿಷ್ಯರಿಗೊರೆದವರ
ಹರಿಯೆ ಸರ್ವೋತ್ತಮನೆಂದವರ ನಮ್ಮ
ಉರಗಾದ್ರಿ ವಾಸ ವಿಠ್ಠಲನ ನಂಬಿದವರ"[೧೦]

ಗುರುಗಳನ್ನು ಸ್ಮರಿಸಿ ಬದುಕಿರಿ, ಹರಿಸ್ಮರಣೆಯನ್ನು ಮರೆಯದೇ ನಿರಂತರ ಮಾಡುವ ಉರಗಾದ್ರಿ ವಿಠ್ಠಲದಾಸರನ್ನು ಜೀವಮ್ಮ ಬಹುವಾಗಿ ನಂಬಿದ್ದಳು. ಬದುಕಿನ ಕಳವಳವನ್ನು ಕಮಲನಾಭವಿಠ್ಠಲನನ್ನು ಹೊರತುಪಡಿಸಿ ಬೇರೆ ಯಾರಿಂದಲೂ ಕಳೆಯಲು ಸಾಧ್ಯವಿಲ್ಲ ಆದ್ದರಿಂದ ಜೀವೂಬಾಯಿಯು

"ಆಶಾಪಾಶಗಳಿಗೋಳಗಾಗಿಹ ಮನ
ದಾಸೆ ಪೂರೈಸುತ ನೀ ಸಲಹೈ ಗುರು
ವಾಸುದೇವ ವಿಠ್ಠಲ ಹರಿಭಕುತರ
ದಾಸ್ಯವ ಕೊಟ್ಟು ಉಲ್ಲಾಸ ಒದಗಿಸುತ"[೧೧]

ಸಲಹುವಂತೆ ಗುರುವಿನಲ್ಲಿ ಸ್ತುತಿಗೈದು ಪ್ರಾರ್ಥಿಸಿಕೊಂಡಿದ್ದಾಳೆ " ಹರಮುನಿದರೆ ಗುರು ಕಾಯ್ವನು. ಗುರು

ಮುನಿದರೆ ಹರ ಕಾಯನು" ಎಂಬುದನ್ನರಿತಿರುವ ಜೀವಮ್ಮ ತನ್ನ ಗುರುಗಳನ್ನು, ಗುರುಶಕ್ತಿಯನ್ನು, ಗುರು ಪುರಂದರದಾಸರನ್ನು ಬಹು ಭಯ ಭಕ್ತಿಯಿಂದ ಸ್ತುತಿಸಿರುವಳು.

ಜೀವೂಬಾಯಿಯು ಗುರುಸ್ತುತಿಯ ಜೊತೆಗೆ ಭಾರತೀದೇವಿ, ಪಾರ್ವತಿದೇವಿ, ರಾಘವೇಂದ್ರ ಯತಿಗಳನ್ನು ಹಲವುವಿಧದಲ್ಲಿ ಸ್ತುತಿ ಗೈದಿದ್ದಾಳೆ. ಅವಳ ನದಿ ಸ್ತೋತ್ರ ವಿಶಿಷ್ಟವಾಗಿದೆ. ಇದರಲ್ಲಿ ಕೃಷ್ಣಾ, ಗೋದಾವರಿ, ನಂದಿನೀ, ನಳಿನಿ ಹೇಮಾವತಿ, ಹರಿದ್ವತಿ, ಕಾವೇರಿ, ಕಪಿಲಾ, ಸಿಂಧು, ಸರಯು, ನೇತ್ರಾವತಿ, ಕುಮುದ್ವತಿ, ಭಾಗೀರತಿ, ಭೋಗಾವತಿ, ಜಾಹ್ನವಿ, ಅಘನಾಶಿನಿ, ಗಂಗಾ, ಯಮುನಾ, ಪಿನಾಕಿನಿ, ನರ್ಮದಾ, ಸರಸ್ವತಿ, ವರಾಹೀ, ವೈಷ್ಣವಿ, ಶಿವಗಂಗಾ, ಪಂಚಗಂಗೀ, ಬ್ರಹ್ಮಪುತ್ರಾ, ತುಂಗಭದ್ರಾ, ಭೀಮರಥಿ, ಗೋಮತಿ, ಶರಾವತಿ, ಶಾಲ್ಮಲಿ, ಚಂದ್ರಭಾಗ, ಅರ್ಕಾವತಿ, ಮಂದಾಕಿನಿ ಮುಂತಾದ ನದಿಗಳನ್ನು ಹಾಗೂ ಪಾಂಡು ತೀರ್ಥ, ವಿಷ್ಣು ತೀರ್ಥ, ನಾರಾಯಣ ತೀರ್ಥ, ಕಪಿಲ ತೀರ್ಥಗಳನ್ನು ಉಲ್ಲೇಖಿಸಿ ಈ ಸ್ತೋತ್ರವನ್ನು

"ಪ್ರಾತ: ಕಾಲೆ ಪಠೇ ನಿತ್ಯಂ ದು:ಖ ದಾರಿದ್ರ ನಾಶನಂ
ಸ್ಮರಾಮಿ ನಿತ್ಯಂ ಭವದು:ಖ ದೂರಾ"[೧೨]

ಎಂದು ಮಂತ್ರ ಪಠಣದ ಫಲಶ್ರುತಿಯನ್ನು ತಿಳಿಸಿರುವಳು.

"ತಾಳ ತಂಬೂರಿ ಪಿಡಿದು
ಭೋಗಶಯನನನ್ನು ಭಜಿಸಿ
ಕೂಗಿ ಪಾಡುತಿರಲು ನಲಿದು
ಬೇಗ ಪಾಲಿಸುತಲಿ ನಲಿವ

ದೇಶ ದೇಶದವರು ಬಹಳ
ಕ್ಲೇಷ ಪಡುತ ಬರಲು ಅವರ
ಕ್ಲೇಷಗಳನ್ನು ಕಳೆದು ಪರಮ ಉ
ಲ್ಲಾಸ ನೀಡಿ ಪೊರೆಯುವಂಥ"[೧೩]

"ಸೀತಾಪತಿಯ ಪೂಜಿಸುತಲಿ
ಖ್ಯಾತರಾದ ಯತಿಗಳನ್ನು
ಪ್ರೀತಿಯಿಂದ ಸೇವಿಸುವ
ಘಾತಕಗಳ ಪೊರೆವ"[೧೪]

ಶ್ರೀ ರಾಘವೇಂದ್ರ ಯತಿಗಳನ್ನು ಸ್ತುತಿಸಿರುವಳು. ಈ ಕೀರ್ತನೆಯಲ್ಲಿ ಶ್ರೀ ರಾಘವೇಂದ್ರ ಯತಿಗಳ ಆರಾಧನಾ ರೀತಿ, ಭಕ್ತರ ತೊಂದರೆಗಳನ್ನು ಪರಿಹರಿಸಿದ ಬಗೆ, ರಾಮಭಕ್ತರಾಗಿ ಯತಿಗಳು ಗೈಯ್ದ ದಾಸತ್ವದ ಸಿದ್ಧಿ-ಸಾಧನೆಗಳು ವ್ಯಕ್ತಗೊಂಡಿವೆ.

ಹನುಮ-ಭೀಮ-ಮಧ್ವ ತ್ರಿಶಕ್ತಿಗಳನ್ನು ಎಲ್ಲ ಹರಿದಾಸರು ಅತೀ ಶ್ರದ್ಧೆಯಿಂದ ಕೊಂಡಾಡಿದ್ದಾರೆ. ತ್ರೇತಾಯುಗದಲ್ಲಿ ಹನುಮ, ದ್ವಾಪರದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವರು ಎಂಬುದು ಎಲ್ಲ ಹರಿದಾಸರು ನಂಬಿಕೊಂಡ ಸತ್ಯ. ಮಧ್ವಾಚಾರ್ಯರು ಹನುಮನ ಅವತಾರ, ಭೀಮನ ಸ್ವರೂಪವೆಂದು ಕಂಡು ಧನ್ಯತಾಭಾವದಿಂದ ಹೊಗಳಿದ್ದಾರೆ.

"ಜಯ ಭಾರತೀಶ ಜಯ
ಜಯ ಭೀಮ ಹನುಮನೆ
ಭಯ ಪರಿಹರಿಸಿ ಪೊರೆಯೈ
ಜಯ ಮಧ್ವ ಮುನಿರಾಯ
ಗುರು ಮಧ್ವ ಮುನಿರಾಯ
ಗುರುವೆ ಪಾಲಿಸು ಜಯ ಜಯ

ತ್ರೆತೆಯಲಿ ರಘುಪತಿಯ ಸೇವೆ ಮಾಡುವೆನೆಂದು
ಸೀತೆಗುಂಗುರವನಿತ್ತು
ಮಾತೆಯಾಜ್ಞೆಯಕೊಂಡು
ಘಾತಿಸಿದೆ ರಕ್ಕಸರ
ದೂತ ರಾವಣನ ಕಂಡು
ಭೀತಿಯಿಲ್ಲದೆ ಜನಕ
ಜಾತೆಯ ಕಳುಹೆನಲು
ಆತ ಕೋಪದಿಂದಲಿ ತನ್ನ
ದೂತರಿಂದ ಬಾಲ
ವಗ್ನಿಯಲಿ ದಹಿಸಿರೆನೆ
ಆ ಪುರವ ದಹಿಸಿ ಮೆರೆದೆ

ದ್ವಾಪರದಿ ಶ್ರೀಕೃಷ್ಣನಂಘ್ರಿ ಸೇವಕನಾಗಿ

ಪಾಪಿ ಜರೆಸುತನ ಸೀಳಿ

ದ್ರೌಪದಿಯ ನುಡಿಕೇಳಿ

ಪಾಪಿ ಕೀಚಕನನ್ನು

ಕೋಪದಿಂದ ಕೊಂದ ಮಹಿಮಾ

ಪಾಪಿ ದುರ್ಯೋಧನಾದಿಗಳ ಸಂಗಡ ಕಾದಿ

ಸೋತು ಒಡಲು ದುರುಳನು

ನೀತಿ ಬಿಡದಲೆ ಗದೆಯ

ಏಟಿನಿಂದವರ ತೊಡೆ

ಘಾತಿಸುತಲವನನಳಿದ

ಮಧ್ವ ಮತದವರನುದ್ಧರಿಸ ಬೇಕೆಂದೆನುತ

ಮಧ್ವಗೇಹರಲಿ ಜನಿಸಿ

ಶುದ್ಧ ಶಾಸ್ತ್ರಗಳನುದ್ಧರಿಸುತ ಜಗದೊಳಗೆ ಪ್ರ

ಸಿದ್ಧನೆಂದೆನಿಸಿ ಮೆರೆದೆ

ಮುದ್ದು ಕೃಷ್ಣನ ಪೂಜೆ

ಶ್ರದ್ಧೆ ಬಿಡದಲೆ ಮಾಡಿ

ಉದ್ಧರಿಸಿ ಸಜ್ಜನರನು

ಮುದ್ದು ಕಮಲನಾಭ

ವಿಠ್ಠಲಗರ್ಪಿತವೆಂದೆ

ಮಧ್ವಮುನಿರಾಯ ಜಯತು.”[೧೫]

ಈ ಕೀರ್ತನೆಯಲ್ಲಿ ರಾಮನ ಸೇವಕನಾಗಿ ಹನುಮಂತ ಸೀತೆಗೆ ಉಂಗುರವ ನೀಡಿ ಬಾಲದ ಬೆಂಕಿಯಿಂದ ಲಂಕೆಯನ್ನು ಸುಟ್ಟಿದ್ದು, ಕೃಷ್ಣನ ಸೇವಕನಾಗಿ ಭೀಮನು ಜರಾಸುತನನ್ನು, ಕೀಚಕನನ್ನು ಹಾಗೂ ದುರ್ಯೋಧನನ್ನು ಸಂಹರಿಸಿರುವ ಸಂಗತಿ ಮತ್ತು ಮುದ್ದುಕೃಷ್ಣನ ಸೇವಕನಾಗಿ ಮಧ್ವಮುನಿಗಳು ಮಧ್ವ ಮತವನ್ನು ಉದ್ಧರಿಸಿರುವ ಅಂಶಗಳು ಪ್ರಸ್ತಾಪಿತವಾಗಿವೆ. ಅಂದರೆ ಮಧ್ವಾಚಾರ್ಯರು ಹನುಮ ಭೀಮರ ಉತ್ತರಾಧಿಕಾರಿಗಳು, ಅವತಾರಿಗಳು ಎಂಬುದನ್ನು ಉಳಿದ ಹರಿದಾಸರಂತೆ ಜೀವಮ್ಮಳು ಪ್ರತಿಪಾದಿಸಿದ್ದಾಳೆ.

“ಊರಿನಲ್ಲಿ ಊರ್‍ಧ್ವರಗು ನಿನ್ನ ಮೂರ್ತಿ

ಎಷ್ಟೇಳ್ಗಲಿ ಕೀರ್ತಿ
ಪಾಡುತ ಪೊಗಳ್ವರು ನಿನ್ನಯ ಸತ್ಕೀರ್ತಿ
ವರ್ಣಿಸುವುದೇ ಅರ್ಥಿ
ಪಾಮರನೊಮ್ಮೆ ಪಾಡಲು ನಿನ್ನ ಮೂರ್ತಿ
ಪರಿಹಾರವೋ ಭೀತಿ
ನಾಡೊಳು ನಿನ್ನ ಭಜಿಸುವವರ ಸಂಗ
ನೀಡು ಕೃಪಾಂಗ"[೧೬]

ಹನುಮನ ಮಹಿಮೆಯನ್ನು ಸ್ತುತಿಸುತ್ತ ಆತನ ಘನ ಕಾರ್ಯಗಳನ್ನು ತೋರಿಸಿದ್ದಾಳೆ.

"ಹನುಮ–ಭೀಮ–ಮಧ್ವ ರಕ್ಷಿಸೆನ್ನ
ಅನುದಿನವು ಶ್ರೀಹರಿಯ ಸ್ಮರಣೆ ಮರೆಯದಂತೆ

ತಂದೆ ತಾಯಿ ನೀನೆಂದು ನಂಬಿದೆನೊ
ಬಂಧ ಬಿಡಿಸಿ ಕಾಯೋ ತಂದೆ ಹನುಮ ವೀರ
ದುರುಳ ದೈತ್ಯನಾದ ಜರೆಯಸುತನ ಸೀಳಿ
ಕರುಣಿ ಕೃಷ್ಣನಂಘ್ರಿ ನಿರುತ ಭಜಿಪ ವೀರ
ಸದ್ವೈಷ್ಣವರನೆಲ್ಲ ಉದ್ಧರಿಸಿ ಜಗದಿ
ಮುದ್ದು ಕಮಲನಾಭ ವಿಠ್ಠಲನಂಘ್ರಿ ಭಜಿಪ"[೧೭]

ಹೀಗೆ ಜೀವಮ್ಮ ತ್ರಿಶಕ್ತಿಗಳನ್ನು ಸ್ತುತಿಸಿ ವಂದಿಸಿರುವಳು. ಅವರನ್ನು ತನ್ನ ತಂದೆ–ತಾಯಿ–ಬಂಧು ಬಳಗವೆಂದು ನಂಬಿದ್ದಳು. ಆಯಾ ಯುಗದಲ್ಲಿ ಒಂದೇ ಶಕ್ತಿಯು ವಿವಿಧ ಅವತಾರಗಳನ್ನು ತಾಳಿ ಭೂಮಿಯ ಮೇಲೆ ವ್ಯಾಪಿಸಿದ ಅಧರ್ಮವನ್ನು ನಿರ್ನಾಮಗೊಳಿಸಿ ಧರ್ಮವನ್ನು ಸ್ಥಾಪಿಸಿದ ಪೌರಾಣಿಕ ವಿಷಯಗಳು ಇಲ್ಲಿ ಉಲ್ಲೇಖಿತಗೊಂಡಿವೆ. ರಾಮಾಯಣ ಮತ್ತು ಮಹಾಭಾರತದ ಪ್ರಸಂಗಗಳಿಂದ ವಿಷಯವನ್ನು ಸ್ಪಷ್ಟಪಡಿಸಿದ್ದಾಳೆ.

ಜೀವಮ್ಮ ಕೇವಲ ವಾಯುಪುತ್ರನನ್ನು ಮಾತ್ರ ಸ್ತುತಿಸದೇ ಆತನ ಹೆಂಡತಿಯಾದ ಭಾರತಿದೇವಿಯನ್ನು

"ಬಾರಿ ಬಾರಿ ನಿನ್ನ ಸ್ತುತಿಪೆ

ಮಾರುತನರ್ಧಾಂಗಿಯೆ
ಸಾರಿ ಸಾರಿ ಶ್ರೀರಮಣನ
ಸಾರಕೃಪೆಯ ಕರುಣಿಸು
ಕರುಣಿಸಮ್ಮ ನಿನ್ನ ಪತಿಯ
ಸ್ಮರಣೆ ನಿರುತ ಮರೆಯದೆ
ಕರುಣಾಕರನೆ ಕಮಲನಾಭ
ವಿಠಲನಂಘ್ರಿ ಧ್ಯಾನವೀಯೆ"[೧೮]

ಎನ್ನುತ್ತ ಬಲು ಆಪ್ತತೆಯಿಂದ ಸ್ತುತಿಸಿದ್ದಾಳೆ. ಹನುಮನ ಕೃಪೆ ತೋರಲು ಆತನ ಮಡದಿಯಲ್ಲಿ ಮೊರೆ ಇಡುವುದು ವಿಶೇಷ. ಹೆಣ್ಣು ಜೀವ ಬೇಗನೆ ಮರುಗಿ ದಯೆ ತೋರುವಳೆಂಬುದು ಜೀವಮ್ಮಳ ನಂಬುಗೆ. ಮಗುವಿನ ನೋವಿಗೆ ಮೊದಲು ಸ್ಪಂದಿಸುವ ಜೀವಿ ತಾಯಿ. ಅಂಥ ವಾತ್ಸಲ್ಯತೆಯನ್ನು ಹೊಂದಿರುವ ಭಾರತಿ ದೇವಿಯನ್ನು ಕೀರ್ತನಕಾರ್ತಿಯು ಮಗುವಿನಂತೆ ಪ್ರಾರ್ಥಿಸಿರುವಳು.

ಮಹಾಲಕ್ಷ್ಮಿ ಶ್ರೀಹರಿಯ ಮಡದಿ, ಅಷ್ಟೇ ಅಲ್ಲ ಅಷ್ಟೈಶ್ವರ್ಯವನ್ನು ದಯಪಾಲಿಸುವ ದೇವಿಯೂ ಆಗಿರುವಳು. ಇಂಥ ಮಹಾಲಕ್ಷ್ಮಿಯನ್ನು ಬಹು ವಿಧದಲ್ಲಿ ಅನನ್ಯ ಭಕ್ತಿಯಿಂದ ಜೀವಮ್ಮ ಸ್ತುತಿಸಿರುವಳು.

"ಶಂಬರಾರಿ ಪಿತನ ರಾಣಿ ನಂಬಿ ಸ್ತುತಿಸುವೆ
ಅಂಬುಜನಾಭನ ಧ್ಯಾನ ಸಂಭ್ರಮ ಎನಗೀಯೆ"[೧೯]

"ಶುಕ್ರವಾರದಿ ನಿನ್ನ ಭಕ್ತಿಲಿ ಸ್ತುತಿಪರ
ಇಷ್ಟಾರ್ಥಗಳ ಕೊಟ್ಟುದ್ಧರಿಸು ಭಾರ್ಗವಿ ತಾಯೆ
ಭಕ್ತ ವತ್ಸಲ ನೋಡ ನೋಡುತ ಬಾರಮ್ಮ
ಮಿತ್ರರು ಕರೆವರು ಕೃಷ್ಣವೇಣಿಯೇ ನಿನ್ನ"[೨೦]

"ಫಣಿಯಲ್ಲಿ ಕುಂಕುಮ ಬೈತಲೆ ಬಟ್ಟು
ಥಳಥಳಿಸುವ ಕಣ್ಣಿಗೆ ಕಪ್ಪಿಟ್ಟು
ಎಳೆ ಬಾಳೆಯ ಸುಳಿಯಂದದಿ ಬಳುಕುತ
ಫಳಿಲನೆ ಬಾರಮ್ಮ"[೨೧]

"ಪರಿಮಳೋದಕದಿಂದ ನಿನ್ನ
ಚರಣಗಳನ್ನು ತೊಳೆದು ದಿವ್ಯ

ವರಮಣಿಯ ಪೀಠದಲಿ ಕೂಡಿಸಿ
ಪರಿಪರಿ ಪುಷ್ಪದಿ ಪೂಜಿಸಿ ನಲಿಯುವೆ"[೨೨]

"ಸರಸಿಜಾನನ ಮಾತೆ ಸ್ಮರಿಸುವೆ ನಿಮ್ಮ ಪಾದ
ಸ್ಮರಣೆ ಮರೆಯದಂತೆ ಕರುಣಿಪುದು"[೨೩]

ಈ ರಚನೆಗಳಲ್ಲಿ ಮಹಾಲಕ್ಷ್ಮಿಯ ಶೃಂಗಾರ, ಆಕೆಯೊಡೆಯನ ಗುಣಗಾನ, ಮಿತ್ರೆಯರ ಆಹ್ವಾನ, ಪೂಜಿಸುವ ವಿಧಾನ, ಮಹಾಲಕ್ಷ್ಮಿಯ ನಡಿಗೆಯ ರೀತಿಗಳನ್ನು ಬಣ್ಣಿಸಿರುವ ಬಗೆ ಮನಮೋಹಕ. ಮರೆಯದೇ ನಮ್ಮನ್ನು ಕರುಣಿಸಬೇಕೆಂದು ಭಕ್ತರ ಸ್ಥಾನದಲ್ಲಿ ನಿಂತು ಜೀವಮ್ಮ ಹರಿಸತಿಯನ್ನು ಸ್ತುತಿಸಿದ್ದಾಳೆ.

ಶ್ರೀಹರಿ–ಲಕ್ಷ್ಮಿಯರ ಜೊತೆಗೆ ಜೀವೂಬಾಯಿಯು ಶಿವ–ಪಾರ್ವತಿಯರನ್ನು ತನ್ನ ಕೀರ್ತನೆಗಳಲ್ಲಿ ಕೊಂಡಾಡಿದ್ದಾಳೆ. ವೀರವೈಷ್ಣವ ಭಕ್ತಾಗ್ರಣಿಯೆ ನೀನು ಯಾರಿಗೋಸ್ಕರ ಈ ಪರಿಯ ವೈರಾಗ್ಯವನ್ನು ಹೊಂದಿರುವೆ ಎಂದು ಶಿವನನ್ನು ಪ್ರಶ್ನಿಸುವಳು. ಮುತ್ತು ಮಾಣಿಕ್ಯ ಖಚಿತವಾದ ಕಿರೀಟವನ್ನು ತ್ಯಜಿಸಿ ಜಡೆಯನ್ನೇಕೆ ಸುತ್ತಿಕೊಂಡಿರುವೆ. ಕೈಯ್ಯೊಳಗೆ ಶಂಖ ಚಕ್ರ, ಗದೆ, ಪದ್ಮವ ಬಿಟ್ಟು ಡಮರು, ತ್ರಿಶುಲವನೇಕೆ ಹಿಡಿದಿರುವೆ. ಹಣೆಯೊಳಗೆ ಕಸ್ತೂರಿತಿಲಕವನಿಡುವ ಬದಲು ಭಸ್ಮವನೇಕೆ ಬಳಿದುಕೊಂಡಿರುವೆ. ಕಮಲ ಮುಖಿಯ ಪ್ರೀಯ ಸಖನಾಗಿ ಕಪಾಲವ ಹಿಡಿದು ಭಿಕ್ಷೆ ಏಕೆ ಬೇಡುತ್ತಿರುವೆ. ಮುತ್ತಿನ ಹಾರ ಪದಕಗಳಿರಲು ರುಂಡಮಾಲೆಯೇಕೆ, ಬಗೆಬಗೆಯ ಪರಮಾನ್ನ ಭಕ್ಷಗಳಿರಲು ವಿಷಪಾನವನೇಕೆ ಮಾಡುವೆ. ಬೆಲೆಯುಳ್ಳ ಪೀತಾಂಬರವ ಬಿಟ್ಟು, ಆನೆ ಚರ್ಮವನ್ನೇಕೆ ಹೊದ್ದುಕೊಂಡಿರುವೆ. ನಾನಾ ರೀತಿಯ ರತ್ನದ ಸರಗಳಿರಲು ಹಾವುಗಳ ಅಲಂಕಾರವೇತಕೆ. ಸೇವೆಗಾಗಿ ಸಾಕಷ್ಟು ಭಕ್ತರಿರಲು ರಾಕ್ಷಸರ ಸಂಗವೇಕೆ. ಆನೆ ಕುದುರೆ ಪಲ್ಲಕ್ಕಿ ವಿಮಾನಗಳಿರಲು, ನಂದಿಯನೇರಿ ಸಂಚರಿಸುವುದೇಕೆ. ಜಡೆಯಲಿ ಗಂಗೆಯಿರಲು ಪರ್ವತರಾಜನ ಮಗಳೇಕೆ. ವಾಸಕ್ಕೆ ಯೋಗ್ಯವಾದ ಅರಮನೆಯಿರಲು ಕೈಲಾಸಪರ್ವತ ವಾಸವೇಕೆ. ಹೀಗೆ ಜೀವಮ್ಮ ವಿಷ್ಣುವಿನಿಗಿಂತ ಭಿನ್ನವಾಗಿರುವ ವೇಷ ಭೂಷಣಗಳನ್ನು ಹಾಗೂ ಜೀವನ ಕ್ರಮವನ್ನು ಹೊಂದಿರುವ ಶಿವನನ್ನು ಹೀಗೇಕೆಂದು ಕೇಳುವಳು. ಜೀವಮ್ಮಳಿಗೆ ಶಿವನೂ ಕೂಡ ಶ್ರೀಹರಿಯ ಹಾಗೆಯೇ ಇರಬೇಕೆಂಬ ಬಯಕೆ. ಈ ಎಲ್ಲ ವೈರಾಗ್ಯವನ್ನು ತೊರೆದು ವೈಭವದಿಂದ ಇರುವಂತೆ ಶಿವನಲ್ಲಿ ಕೇಳಿಕೊಳ್ಳುವಳು. ಶ್ರೀಹರಿಯ ಬಹು ಪತ್ನಿತ್ವವನ್ನು ಬೆಂಬಲಿಸುವ ಜೀವಮ್ಮ ಶಿವನ ಬಹು ಪತ್ನಿತ್ವವನ್ನು ವಿರೋಧಿಸುವಳು. "ಜಡೆಯಲ್ಲಿ ಗಂಗೆಯಿರಲು ಪಾರ್ವತಿ ಏಕೆ" ಎಂದು ಕೇಳುವಳು. ಇದು ಶಿವಪರವಾದ ಕೀರ್ತನೆ. ಈ ಮೂಲಕ ಹರಿಹರ ಐಕ್ಯತೆಯನ್ನು ಜೀವಮ್ಮ ತೋರಿದ್ದಾಳೆ.

"ದಕ್ಷ ಕುವರಿಯೆ ಈಕ್ಷಿಸೆನ್ನನು
ಪೇಕ್ಷೆ ಮಾಡದಲೆ
ಅಕ್ಷಿತ್ರಯನ ಸತಿಯೆ ಭಕ್ತರ
ಕಷ್ಟ ಬಿಡಿಸುತಲಿ
ಸೂಕ್ಷ್ಮಮತಿಯನಿತ್ತು ಕೃಷ್ಣನ
ಸ್ತೋತ್ರ ಗಾನದಲಿ ಅ
ಪೇಕ್ಷೆಯೊದಗುವ ಮನವ ಪಾಲಿಸು
ರಕ್ಷಿಸೀಗಲೆ ಭಕ್ತವತ್ಸಲೆ"[೨೪]

ಹರಿಯ ಸೇವೆಗೆ ತನ್ನನ್ನು ಸಿದ್ದಗೊಳಿಸಿಕೊಳ್ಳಲು ಪಾರ್ವತಿಯನ್ನು ಸ್ತುತಿಸುವಳು. ತನಗೆ ಒಳ್ಳೆಯ ಮನ, ಸೂಕ್ಷ್ಮಮತಿಯನ್ನು ನೀಡುವಂತೆ ಬೇಡಿಕೊಂಡಿರುವಳು. ಲಕ್ಷ್ಮಿಯ ಹಾಗೆ ಪಾರ್ವತಿಯನ್ನು ಸ್ತುತಿಸಿರುವುದು ಕಂಡಬರುತ್ತದೆ.

ಹೀಗೆ ಜೀವೂಬಾಯಿಯು ಗಣಪತಿ, ರಾಘವೇಂದ್ರ ಯತಿಗಳ, ಹನುಮ–ಭೀಮ–ಮಧ್ವರ, ಭಾರತಿದೇವಿ, ಶಿವ–ಪಾರ್ವತಿಯರನ್ನು ಯಾವುದೇ ಬೇಧ–ಭಾವವನ್ನು ತೋರದೆ ಏಕೋಭಾವದಿಂದ ಸ್ತುತಿಸುವ ಮೂಲಕ ದೇವರೆಲ್ಲರೂ ಒಂದೇ ಎಂಬ ತತ್ವವನ್ನು ಪಾಲಿಸಿದ್ದಾಳೆ. ಕರ್ನಾಟಕ ಹಾಗೂ ದೇಶದ ವಿವಿಧ ಪ್ರದೇಶಗಳಲ್ಲಿ ಹರಿಯುತ್ತಿರುವ ನದಿಗಳನ್ನು ಸ್ತುತಿಸಿರುವಳು. ಹಿಮಾಲಯದ ತುದಿಯಿಂದ ಕನ್ಯಾಕುಮಾರಿಯವರೆಗಿನ ನದಿಗಳನ್ನು ಹೆಸರಿಸುವ ಮೂಲಕ ರಾಷ್ಟ್ರೀಯ ಭಾವೈಕ್ಯತೆಯನ್ನು ಸಾರಿದ್ದಾಳೆ. ನದಿಗಳು ಮಾನವನ ಎಲ್ಲ ಚಟುವಟಿಕೆಗಳಿಗೆ, ಸಂಸ್ಕೃತಿಗೆ, ನಾಗರೀಕತೆಗೆ ಮೂಲವೆಂಬುದು ಜೀವಮ್ಮಳಿಗೆ ತಿಳಿದಿತ್ತು. ಆದ್ದರಿಂದಲೇ ನದಿಸ್ತೋತ್ರದ ಮೂಲಕ ನೀರಿನ ಮೂಲಗಳಿಗೆ ಶರಣೆಂದಿದ್ದಾಳೆ.

**ನವವಿಧ ಭಕ್ತಿ :**

'ಭಕ್ತಿ' ಎಂದರೆ 'ಗುರುಹಿರಿಯರಲ್ಲಿ ತೋರುವ ನಿಷ್ಠೆ, ಪೂಜ್ಯ ಭಾವನೆ' ಎಂಬುದನ್ನು ಸಂಕ್ಷಿಪ್ತ ನಿಘಂಟು ಅರ್ಥೈಸಿದೆ. ಭಕ್ತಿಯು ಪರಮಾತ್ಮನನ್ನು ಒಲಿಸಿಕೊಳ್ಳುವ ಒಂದು 'ಸಾಧನಮಾರ್ಗ'. ಇದನ್ನೇ 'ಭಕ್ತಿ ಮಾರ್ಗ' ಎಂದು ಕರೆಯುವುದುಂಟು. ಶಿವಶರಣರಿರಬಹುದು, ಹರಿದಾಸರಿರಬಹುದು, ಇನ್ನಾವುದೇ ಸಾಧಕರಿರಬಹುದು, ಅವರು ತಮ್ಮ ಸಾಧನೆಯ ದಾರಿಯಾಗಿ ಒಂಬತ್ತು ಬಗೆಯ ರಹದಾರಿಗಳನ್ನು ರೂಪಿಸಿಕೊಂಡರು, ಅನುಸರಿಸಿದರು. ವಚನ ಮತ್ತು ಕೀರ್ತನ ಸಾಹಿತ್ಯದಲ್ಲಿ ನವವಿಧ ಭಕ್ತಿಗಳು ವಿಶೇಷವಾಗಿ ಅಭಿವ್ಯಕ್ತಗೊಂಡಿವೆ.

"ಶ್ರವಣಂ, ಕೀರ್ತನಂ, ಶಂಭೋ: ಸ್ಮರಣಂ ಪಾದಸೇವನಂ।
ಅರ್ಚನಂ, ವಂದನಂ, ದಾಸ್ಯಂ, ಸಖ್ಯಮಾತ್ಮ ನಿವೇದನಂ॥
ಏವಂ ನವವಿಧ ಭಕ್ತಿ: ಪ್ರೋಕ್ತ ದೇವನ ಶಂಬುನಾ।
ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯಕರ್ಮಣಂ॥"[೨೫]

ಎಂಬುದಾಗಿ ನವವಿಧ ಭಕ್ತಿಗಳು ಉಲ್ಲೇಖಿತಗೊಂಡಿವೆ. ಅವುಗಳನ್ನು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನೆ ಹೀಗೆ ನವವಿಧಗಳಾಗಿ ಹೆಸರಿಸಲಾಗಿದೆ. ಇವುಗಳನ್ನು ಬಹು ಸೂಕ್ಷ್ಮತೆಯಿಂದ ನೋಡಿದಾಗ ಒಂದರಿಂದ ಇನ್ನೊಂದಕ್ಕೆ ಏರುವಾಗ ಭಕ್ತನ ಭಾವದಲ್ಲಿ ಬೆಳವಣಿಗೆ ಕಂಡು ಬರುತ್ತದೆ. ವಚನ ಸಾಹಿತ್ಯದ ಷಟಸ್ಥಲಗಳ ಹಾಗೆ ಶ್ರವಣದಿಂದ ಆರಂಭಗೊಂಡು ಆತ್ಮನಿವೇದನದಲ್ಲಿ ಸೇರಿಕೊಳ್ಳುವುದು. ಈ ನವವಿಧ ಭಕ್ತಿಗಳನ್ನು ಅವುಗಳ ಭಾವದ ಹಿನ್ನೆಲೆಯಲ್ಲಿ ಐದು ವಿಧವಾಗಿ ವಿಂಗಡಿಸುವರು. ಇವುಗಳೇ ಪಂಚಬಾವಗಳು. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ ಮತ್ತು ಶಾಂತ ಭಾವಗಳು ನವವಿಧ ಭಕ್ತಿಗಳಲ್ಲಿ ಸೇರಿಕೊಂಡಿವೆ. ಹರಿದಾಸರಲ್ಲಿ ಈ ಭಾವಗಳು ಬಹುವ್ಯಾಪಕವಾಗಿ ಒಡಮೂಡಿಬಂದಿವೆ. ಜೀವೂಬಾಯಿಯೂ ಸಹ ತನ್ನ ಪೂರ್ವದ ಹರಿದಾಸರ ಹಾಗೆ ತಮ್ಮ ಕೀರ್ತನೆಗಳಲ್ಲಿ ಪಂಚಭಾವಗಳನ್ನು ನವವಿಧ ಭಕ್ತಿಗಳಲ್ಲಿ ಅಭಿವ್ಯಕ್ತಿಗೊಳಿಸಿದ್ದಾಳೆ. ಅವುಗಳನ್ನು ಹೀಗೆ ವಿವರಿಸಲಾಗಿದೆ.

**೪.೧.೧. ಶ್ರವಣ ಭಕ್ತಿ** :– 'ಶ್ರವಣ' ಎಂದರೆ 'ಕೇಳು' 'ಆಲಿಸು' ಎಂಬರ್ಥವಿದೆ. ಪರಮಾತ್ಮ ಸಂಬಂಧಿಯಾದ ಕಥೆಗಳನ್ನು, ಚರಿತ್ರೆಗಳನ್ನು, ಕೀರ್ತನೆಗಳನ್ನು ಕೇಳುವುದೇ ಶ್ರವಣ ಭಕ್ತಿ. ಕಿವಿಯು ಹರಿಯ ವಿಷಯವನ್ನು ಹರಿದಾಸರ, ಭಾಗವತರ ಮಾತುಗಳನ್ನಲ್ಲದೇ ಬೇರೆ ಏನನ್ನೂ ಕೇಳದಿರುವುದು ಶ್ರವಣ ಭಕ್ತಿಯ ಸ್ಥಿತಿ. ಕಾಲು ಹರಿವ್ರತವನ್ನು, ಕಣ್ಣು ಹರಿರೂಪವನ್ನು ಹೊಂದಬೇಕು. ಸದಾಕಾಲವು ಪರಮಾತ್ಮನ ಚಿಂತನೆ, ಧ್ಯಾನ, ಸ್ತುತಿಗಳನ್ನೇ ಕೇಳುತ್ತಿರಬೇಕು ಅದುವೇ ಶ್ರವಣ ಭಕ್ತಿ.

"ಶ್ರೀಗುರು ವಚನೋಪದೇಶವನಾಲಿಸಿ
ದಾಗಲಹುದು ನರರಿಗೆ ಮುಕುತಿ"[೨೬]

ಎಂದು ನಿಜಗುಣ ಶಿವಯೋಗಿಗಳು ಶ್ರವಣ ಭಕ್ತಿಯ ಮಹತಿಯನ್ನು ಅರುಹಿದ್ದಾರೆ. ಒಳ್ಳೆಯ ಮಾತುಗಳನ್ನು ಕೇಳುವುದರಿಂದ ನರರು ಮುಕ್ತಿಯನ್ನು ಹೊಂದಬಲ್ಲರು.

"ನಿನ್ನ ದಾಸರ ಕೀರ್ತಿ ನಿನ್ನ ದಾಸರ ವಾರ್ತೆ
ನಿನ್ನ ನಾಮಾಮೃತವು ಎನ್ನ ಕಿವಿ ತುಂಬಿರಲಿ"[೨೭]

ಎಂದು ಜೀವೂಬಾಯಿಯು ಸದಾಕಾಲವು ತನ್ನ ಕಿವಿಯಲ್ಲಿ ಹರಿಯ ನಾಮಾಮೃತವು ತುಂಬಿರಲಿ ಎಂದಿದ್ದಾರೆ. ಬಸವಣ್ಣನವರು 'ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ' ಎಂದು ಶಿವನನ್ನು ಸ್ಮರಿಸಿದ್ದಾರೆ.

"ಶ್ರೋತ್ರಿಯನ ಸಂಗದೊಳು ನಲಿಯುತ್ತಾ ಮನನಲಿದು ನಿನ್ನಯ"[೨೮]

ಮಹಿಮೆಯ ಕೇಳಿಸುವಂತೆ ಕರುಣಿಸು ಎಂದು ಕೇಳಿ ಕೊಳ್ಳುವಳು. 'ಶ್ರೋತ್ರಿ' ಎಂದರೆ ಸದ್ವಚನವ ಕೇಳುವ ಜನರು ಅಥವಾ ವ್ಯಕ್ತಿ. ಇಂಥ ವ್ಯಕ್ತಿಗಳ ಸಂಗವನ್ನು ಜೀವಮ್ಮ ಬಯಸುವಳು. ಶುಕಮುನಿಯ ಶ್ರೀಕೃಷ್ಣ ಲೀಲಾಮೃತ ಸಾರವನ್ನು ಶ್ರೀಕಾಂತನ ದಯದಿಂದ ಭೂಪಾಲನು ಕೇಳುವ ಸಂದರ್ಭದಲ್ಲಿ

"ಅವನೀಶನೆ ಲಾಲಿಸು ಶ್ರೀಶನು
ನವವಿಧ ಭಕ್ತರಿಗೊಲಿದುದನು"[೨೯]

ಶುಕಮುನಿಗಳು ಭೂಪಾಲನಿಗೆ ಹೇಳುವರು. ಇಲ್ಲಿ ಶುಕಮುನಿಗಳು ಹೇಳುವ ಮಾತುಗಳನ್ನು ಶ್ರೀಕೃಷ್ಣಚರಿತೆಯನ್ನು ಭೂಪಾಲನು ಕೇಳತ್ತಿರುವನು. ಇದೂ ಸಹ ಶ್ರವಣ ಭಕ್ತಿ. ಜೀವಮ್ಮ ತನ್ನೆಲ್ಲ ಖಂಡಕಾವ್ಯಗಳ ಕೊನೆಗೆ ಈ ಚರಿತ್ರೆಯನ್ನು ಕೇಳುವುದರಿಂದ ಪುಣ್ಯ ಲಭಿಸುವುದೆಂದು ಹೇಳಿರುವುದು ಶ್ರವಣ ಭಕ್ತಿಯನ್ನೆ ಸೂಚಿಸುತ್ತದೆ. ಶ್ರೀ ಹರಿವಾಯು ಗುರುಗಳ ಸ್ಮರಣೆಯನ್ನು ಸದಾಕಾಲವು ತನ್ನ ಕಿವಿಗಳಲ್ಲಿ ಕೇಳುವಂತಾಗಲಿ ಎಂದು ಜೀವಮ್ಮ ಬಯಸಿದ್ದಾಳೆ.

**೪.೧.೨. ಕೀರ್ತನ ಭಕ್ತಿ :-** 'ಕೀರ್ತನೆ' ಎಂಬುದಕ್ಕೆ 'ಹೊಗಳುವಿಕೆ' 'ಸ್ತುತಿ' 'ಹರಿಕಥೆ' 'ಪುರಾಣ' ಎಂಬ ಅರ್ಥಗಳು ಇವೆ. ಕೀರ್ತನ ಸಂದರ್ಭದಲ್ಲಿ ನಾಲಿಗೆಯಿಂದುಂಟಾಗುವ ಕ್ರಿಯೆಯೇ ಕೀರ್ತನೆ. ಅನಾವಶ್ಯಕ ಮಾತನಾಡುವುದು, ಹರಟೆಯ ಹಾಡು ಹಾಡುವುದು ಕೀರ್ತನೆ ಎನಿಸಲಾರದು. ಮಾತು ಸ್ತುತಿಯಲ್ಲಿ ಹರಿಭಾವ ತುಂಬಿರಬೇಕು. ವಚನದಲ್ಲಿ, ನಯನದಲ್ಲಿ, ಕಿವಿಯಲ್ಲಿ, ಮನದಲ್ಲಿ ಪರಮಾತ್ಮನ್ನು ತುಂಬಿಕೊಂಡು ನುಡಿದಾಗ, ಹಾಡಿದಾಗ ಅದು ಕೀರ್ತನೆ ಎನಿಸಿಕೊಳ್ಳುವುದು.

ಜೀವೂಬಾಯಿಯವರ ಕೀರ್ತನೆಗಳಲ್ಲಿ 'ಕೀರ್ತನ ಭಕ್ತಿ' ಪ್ರಧಾನವಾಗಿದೆ. ಅಂತೆಯೇ ಹರಿದಾಸ ಪರಂಪರೆಯಲ್ಲಿ ಕೀರ್ತನ ಭಕ್ತಿಗೆ ಮೊದಲಸ್ಥಾನ. ಪ್ರತಿಯೊಬ್ಬ ದಾಸರೂ ಶ್ರೀಹರಿಯ ಮಹಿಮೆಯನ್ನು ಲೀಲೆಗಳನ್ನು, ದಶಾವತಾರಗಳನ್ನು ಹೃದಯದುಂಬಿ ಭಕ್ತಿಭಾವ ಪರವಶರಾಗಿ ಹೊಗಳಿದ್ದಾರೆ.

"ಮದನ ಜನಕ ಮೋಹನಾಂಗ
ಚದುರೆಯರಿಗೊಲಿದು ವನದಿ
ವಿಧವಿಧ ಕ್ರೀಡೆಗಳನಾಡಿ
ಮುಧವನಿತ್ತ ಮಧುಸೂದನನೆ"[೩೦]

ಈ ಮೂಲಕ ಜೀವಮ್ಮ ಶ್ರೀಹರಿಯ ವಿಧವಿಧ ಕ್ರೀಡೆಗಳನ್ನು ಹೊಗಳಿರುವಳು.

"ವಾಸುದೇವನ ಮಹಿಮೆ ಪೊಗಳುತ್ತ ನ
ರಸಿಂಹ ಲಕ್ಷ್ಮೀ ನರಸಿಂಹನ ನ–
ರಸಿಂಹ ನರಸಿಂಹ ಎಂದೆನುತ ಹರಿ–
ದಾಸರೆಲ್ಲರೂ ಸಾರಸಾಕ್ಷನೆ ನಿನ್ನ ಪೊಗಳುತ್ತ
ದ್ವಾರ ದ್ವಾರದಿ ಪೂಜೆಗೊಳ್ಳುತ
ಮಾರಪಿತ ಮಹಾಲಕ್ಷ್ಮಿ ಸಹಿತದಿ
ದೋರ ರಥದೆಡೆಯಲಿ ನಿಲ್ಲುತ
ತೇರನೇರುವ ಶ್ರೀರಮೇಶನ"[೩೧]

–ನ್ನು ವಿವಿಧ ಹೆಸರಿನಿಂದ ಸ್ತುತಿಸಿಹಳು. ಹರಿಯ ಬಗೆಬಗೆಯ ಕಾರ್ಯಗಳನ್ನು ಕೀರ್ತಿಸಿ ಧನ್ಯತೆಯನ್ನು ಪಡೆದಿದ್ದಾಳೆ.

"ನೂತನಕೆ ನೂತನ ಬಲು ನೂತನ
ಶೇಷಗಿರಿವಾಸ ನಿನ್ನ ಮಹಿಮೆ ನೂತನವು
ಮಾಡದನೆ ಮಾಡಿಸುವಿ ನೋಡದನೆ ನೋಡಿಸುವಿ
ಬೇಡದಿದ್ದುದನೆಲ್ಲ ಕಾಡಿ ಬೇಡಿಸುವಿ
ನಾಡೊಳಗೆ ನಿನ್ನ ಪೋಲುವವರುಂಟೆ ಸರ್ವೇಶ
ಮೂಡಲಗಿರಿವಾಸ ನಿನ್ನ ಮಹಿಮೆ ನೂತನವು"[೩೩]

ಶ್ರೀಹರಿಯ ಮಹಿಮೆಯನ್ನು ಈ ರೀತಿಯಾಗಿ ಜೀವಮ್ಮ ತನ್ನ ರಚನೆಗಳಲ್ಲಿ ಕೀರ್ತಿಸಿದ್ದಾಳೆ. ಆ ಮೂಲಕ ಶ್ರದ್ಧೆಯಿಂದ ಕೀರ್ತನ ಭಕ್ತಿಯನ್ನು ಮಾಡಿರುವಳು. "ಹರಿದಾಸರ ಕೀರ್ತನೆಗಳೆಂದರೆ ಕೀರ್ತನ ಭಕ್ತಿಯ ತವನಿಧಿಗಳು"

**೪.೧.೩. ಸ್ಮರಣ ಭಕ್ತಿ:–** 'ಸ್ಮರಣೆ' ಎಂದರೆ 'ನೆನಪು' ಇದು ಮನಸ್ಸಿಗೆ ಸಂಭವಿಸಿದುದು. ಸ್ಮರಣೆ ಎಂದರೆ 'ನೆನೆಯುವುದು' ಎಂಬ ಅರ್ಥವೂ ಇದೆ. ಈ ಸ್ಮರಣೆ ಎರಡು ತೆರನಾಗಿದೆ. ಒಂದು ಪ್ರಾಪಂಚಿಕ ವಿಷಯದ ಸ್ಮರಣೆ ಮತ್ತೊಂದು ಶ್ರೀಹರಿಯ ಸ್ಮರಣೆ. ಶ್ರೀಹರಿಯನ್ನು ಸ್ಮರಿಸಿದ ಹಾಗೆ ಹರಿದಾಸರನ್ನು ಸ್ಮರಿಸುವುದು ಇದರಲ್ಲಿ ಸೇರಿದೆ.

“ಮಹಾತ್ಮರಂ ನೆನೆವುದೇ ಮುಕ್ತಿಪದಂ ಶಿಕ್ಷಾಧವಾ”[೩೩]

ಪ್ರತಿಯೊಬ್ಬ ವ್ಯಕ್ತಿಯು ಮಹಾತ್ಮರನ್ನು ನೆನೆಯುವುದರಿಂದ ಮುಕ್ತಿಯನ್ನು ಗಳಿಸಬಲ್ಲನು. ಪರಮಾತ್ಮನನ್ನು ಪೂಜಿಸಿ ಪ್ರೀತಿಯಿಂದ ನೋಡುವುದು, ಶ್ರೀಹರಿಯ ನಿತ್ಯ ಸ್ಮರಣೆ, ದೇವನೊಡನೆ ಸಮರಸವನ್ನು ಹೊಂದಲು ಸ್ಮರಣೆ ಸಹಾಯಕವಾಗುತ್ತದೆ. ಮನುಷ್ಯನಿಗೆ ಮೂರು ಸ್ಥಿತಿಗಳಿರುತ್ತವೆ. ಅವು ಜಾಗ್ರ, ಸ್ವಪ್ನ ಮತ್ತು ಸುಪ್ತಗಳು. ಈ ಎಲ್ಲ ಸ್ಥಿತಿಗಳಲ್ಲಿ ಪರಮಾತ್ಮನ್ನು ನೆನೆವುದೇ ಸ್ಮರಣ ಭಕ್ತಿ. ಆಪತ್ಕಾಲದಲ್ಲಿ ಮಾತ್ರ ಹರಿಯನ್ನು ನೆನೆಸುವುದು ಸ್ಮರಣೆ ಎನಿಸಲಾರದು. ಇದನ್ನು ಎಲ್ಲ ಹರಿದಾಸರು ಅರಿತುಕೊಂಡು

“ತ್ವರದಿ ಭಜಿಪೆ ನಮ್ಮ ಗುರುಪಾದಾಂಬುಜ
ಕರಗುತಲನುದಿನ ಭಕುತಿಯಲಿ
ನೆರೆ ನಂಬಿದವರ ಬಿಡದೆ ಪೊರೆವರೆಂಬ
ಉರುತರ ಕೀರ್ತಿಯ ಸ್ಮರಿಸುತಲಿ”[೩೪]

ತಮ್ಮ ನಿತ್ಯದ ಕಾರ್ಯಗಳಲ್ಲಿ ಗುರುಪಾದಕ್ಕೆ ಎರಗುತ ಹರಿಯನ್ನು ಸ್ಮರಿಸಿ ಬದುಕಿದರು. ಜೀವೂಬಾಯಿಯೂ ಸಹ

“ಸ್ಮರಿಸಿ ಬದುಕಿರೋ ಗುರವರರಾ ನರ
ಹರಿಸ್ಮರಣೆ ಮರೆಯದಲೆ ಕೀರ್ತಿಸಿ ನಲಿದವರ
ದಾಸ ದೀಕ್ಷೆ ವಹಿಸಿದವರ ಹರಿ
ದಾಸರ ಕೂಡಿ ನರ್ತಿಸಿ ನಲಿದವರ
ಶ್ರೀಶನ ಮಹಿಮೆ ಬಲ್ಲವರ
ಭವಪಾಶಗಳಳಿವ ಸನ್ಮಾರ್ಗ ಬೋಧಕರ”[೩೫]



ಗುರುಗಳನ್ನು, ನರಹರಿಯನ್ನು, ದಾಸ ದೀಕ್ಷೆ ನೀಡಿದವರನ್ನು, ದಾಸರಕೂಡ ನರ್ತಿಸಿದವರನ್ನು, ಶ್ರೀಶನ ಮಹಿಮೆ ಬಲ್ಲವರನ್ನು, ಭವಪಾಶವನ್ನು ಕಳೆಯುವ ಸನ್ಮಾರ್ಗದತ್ತ ಮುನ್ನಡೆಯಲು ಸಹಾಯಕರಾದವರನ್ನು ಜೀವಮ್ಮ ಸ್ಮರಿಸಿದ್ದಾಳೆ ಮತ್ತು ಸ್ಮರಿಸುವಂತೆ ತಿಳಿಸಿದ್ದಾಳೆ. ಸಜ್ಜನರನ್ನು ಸ್ಮರಿಸುವುದರಿಂದ ನಮ್ಮ ಬದುಕು ಸುಗಮವಾಗಿ ಸಾಗುತ್ತದೆ.

“ಏನು ಮಾಡಿದರೇನು ಹಾನಿಯಾಗದು ಪಾಪ
ಶ್ರೀ ನಿಕೇತನ ದಿವ್ಯನಾಮ ನೆನೆಮನವೆ”[೩೬]

ನಾವು ಎಷ್ಟೇ ಪ್ರಯತ್ನ ಮಾಡಿದರೂ ನಮ್ಮ ಪಾಪವು ತೊಲಗುವುದಿಲ್ಲ, ಪರಿಹಾರವಾಗವುದಿಲ್ಲ, ಶ್ರೀ ಹರಿಯ ನಾಮವನ್ನು ಸ್ಮರಿಸುವುದರಿಂದ ಪಾಪವನ್ನು ಕಳೆದುಕೊಳ್ಳಲು ಸಾದ್ಯ. ಅಂದರೆ ಹರಿ ಸ್ಮರಣೆಗೆ ಪಾಪವನ್ನು ಪರಿಹರಿಸುವ ಶಕ್ತಿಯಿದೆ.

**೪.೧.೪. ಪಾದಸೇವನ ಭಕ್ತಿ:–** 'ಸದ್ಗುರುವಿನ ಪಾದಸೇವೆಯೆ' ಪಾದಸೇವನ ಭಕ್ತಿ. ಶ್ರೀ ಗುರುವಿನ ಸೇವೆಯನ್ನು ಆಪ್ತತೆಯಿಂದ ಮಾಡುವುದು. ಗುರುವಿನ ಅವಯವಗಳ ಸೇವೆ, ಪಾದ ಸೇವನೆಯಲ್ಲಿ ಸದ್ಭಾವನೆಯಿಂದ ತತ್ಪರನಾಗುವುದು. ತಾತ್ಸಾರ ಮಾಡದೆ ಅತಿಥಿ ಅಭ್ಯಾಗತರ ಸೇವೆಯನ್ನು ಸಂತೃಪ್ತಿ ಮನೋಭಾವದಿಂದ ಮಾಡಿದರೆ ಪರಮಾತ್ಮನು ತೃಪ್ತನಾಗುತ್ತಾನೆ. ಶಿವಶರಣರು ಎಲ್ಲ ಪದವಿಗಳಿಗಿಂತ ಪಾದಸೇವನೆಯೇ ಮಿಗಿಲೆಂದು ತೋರಿದ್ದಾರೆ. ಅದೇ ದಾರಿಯಲ್ಲಿ ಹರಿದಾಸರು ಮುಂದುವರೆದರು.

"ಅಂಬುಧಿಶಯನ ಪೀತಾಂಬರಧಾರಿಯ
ಶಂಕು ಚಕ್ರಾಂತಿಕ ಹರಿಶೌರಿಯ
ಶಂಬಾರಿಯ ಪಿತನ ನಂಬಿಸೇವಿಪ
ಜಗದಂಬ ನಿನ್ನಯ ಪಾದಾಂಬುಜಕೆರಗುತ
ಶರಣು ಹೊಕ್ಕೆನು ಕಾಯ ಕರಿವರದನ ಪ್ರಿಯೆ
ಸರಸಿಜಾಲಯ ನಿಲಯೆ"[೩೭]

ಹರಿಸತಿಯ ಮಹಿಮೆ ಕೊಂಡಾಡಿದ ಜೀವಮ್ಮ ಅವಳ ಪಾದಕ್ಕೆ ನಮಸ್ಕರಿಸಿ ಸೇವೆಗೈಯ್ದು ಸಂತೃಪ್ತಳಾಗಿಹಳು.

"ಹಗಲು ಇರುಳು ನಿನ್ನ ಬಗೆ ಬಗೆ ಸ್ತುತಿಪರ ಪಾದ
ಗಳ ಸೇವಿಪ ಪರಮಾನಂದದ
ಮಿಗೆ ಸೌಭಾಗ್ಯವ ಕರುಣಿಸು ಬೇಗದಿ
ಸುರತಿ ಮಣಿಯೆ ಹರಿಪಾದ ಯುಗ ತೋರೌ"[೩೮]

ಪರಮಾತ್ಮನನ್ನು ಸದಾಕಾಲವು ಬಿಡಲಾರದೆ ಸ್ತುತಿಪರ ಪಾದಗಳನ್ನು ಪೂಜಿಸುವುದೇ ನಿಜವಾದ ಪರಮಾನಂದ. ಅಂಥ ಶಾಶ್ವತವಾದ ಆನಂದವನ್ನು ನೀಡುವ ಪಾದಗಳನ್ನು ಜೀವಮ್ಮ ಬಯಸಿದ್ದಾಳೆ. ಎಲ್ಲಕ್ಕಿಂತ ಗುರುಗಳ ಪಾದಗಳು ಬಹು ಶ್ರೇಷ್ಠವಾದುವುಗಳು.

"ಚಿಂತೆಯಾತಕೆ ಮನವೆ ಗುರುಗಳ ಪಾದ
ಚಿಂತೆಯನು ಮಾಡದೆ"[೩೯]

ಹೀಗೆ ಗುರುಸೇವೆಯನ್ನು, ಗುರುಪಾದವನ್ನು ಪೂಜಿಸದೆ ಉಳಿದ ಯಾವುದೇ ಚಿಂತೆಯನ್ನು ಮಾಡಿದರೂ ವ್ಯರ್ಥ. ಇಂಥ ಚಿಂತೆಯನ್ನು ಮಾಡದಿರುವಂತೆ ಮನಕ್ಕೆ ಎಚ್ಚರಿಕೆ ನೀಡಿದ್ದಾಳೆ. ಹರಿಯನ್ನು ತಿಳಿಯುವುದಕ್ಕಿಂತ ಮೊದಲು ಗುರುವನ್ನು, ಆತನ ಪಾದವನ್ನು ಚೆನ್ನಾಗಿ ತಿಳಿದು ಪೂಜಿಸಬೇಕೆಂದು ಹೇಳಿದ್ದಾಳೆ. ತನ್ನ ಎಲ್ಲ ರಚನೆಗಳನ್ನು ಶ್ರೀ ಗುರುವಿನ ಪಾದಕ್ಕೆ ಅರ್ಪಿಸಿ ಧನ್ಯತೆಯನ್ನು ಹೊಂದಿದ್ದಾಳೆ.

**೪.೧.೫. ಅರ್ಚನ ಭಕ್ತಿ** :- 'ಅರ್ಚನ' ಎಂದರೆ ಪೂಜೆ, ಸತ್ಕಾರ, ಉಪಕೃತಿ ಸ್ಮರಣೆ ಎಂಬ ಅರ್ಥಗಳಿವೆ. ಭೂಮಿ, ಗಾಳಿ, ಬೆಳಕುಗಳನ್ನು ನೀಡಿದ ಪರಮಾತ್ಮನನ್ನು ಆತನ ಉಪಕಾರವನ್ನು ಸ್ಮರಿಸುವುದು ಅರ್ಚನೆ. ದೇವರ ಪೂಜೆಯಿಂದ ಪಾಪಕೂಪವು ಮರೆಯಾಗುವುದು. ಬಾಹ್ಯ ಪೂಜೆ ಉಪಚಾರಗಳಿಂದಾದರೆ; ಆಂತರಿಕ ಪೂಜೆ ಮಾನಸ ಪೂಜೆ.

"ಹರಪೂಜೆ ಗುರುಸೇವೆ ವರಪುಣ್ಯವಿಲ್ಲದೆ
ಬರಿದೆ ಸುಖಭೋಗ ದೊರಕುವುದುಂಟೆ ಆತ್ಮ"[೪೦]

ಎಂಬುದನ್ನು ಅರಿತ ಹರಿದಾಸರು ಹರಿ ಪೂಜೆಯಲ್ಲಿ ತಮ್ಮನ್ನು ತ್ರಿಕರಣ ಪೂರ್ವಕವಾಗಿ ಅರ್ಪಿಸಿಕೊಂಡರು.

"ಪರಿಯಾಯ ದಿನ ಬರಲು ಶ್ರೀಹರಿಯನ್ನು
ಪರಿ ಪರಿ ವಿಧ ಪೂಜಿಸಿ
ಪರಮ ವೈಭವದಿಂದ ಹರಿಯನ್ನು ಕರತಂದು
ವರ ರಥವೇರಿ ಕುಳ್ಳಿರಿಸುವ ಭಕ್ತಿಯಲಿ"[೪೧]

ಎಂಟು ವಿಧದ ಪೂಜೆಗಳಿಂದ ಪರಿಯಾಯ ದಿನ ಬರಲು ಪೂಜಿಸುವೆನೆಂದು ಭಕ್ತಿಯಿಂದ ಹೇಳಿರುವಳು.

"ಸದಾ ಪೂಜಿಪೆ ನಿನ್ನ ಸೌಭಾಗ್ಯಳೆ"[೪೨]

ಎನ್ನುತ ಲಕ್ಷ್ಮಿಯನ್ನು ಪೂಜಿಸಿದ್ದಾಳೆ. ಪುಷ್ಪ, ಗಂಧಾಕ್ಷತೆ, ಶ್ರೀ ತುಳಸಿಯನ್ನು ತಂದು ಪಂಚಭಕ್ಷ ಪಾಯಸಗಳನ್ನು ಮಾಡಿ ಅರ್ಪಿಸಿ ಹೊಳೆಯುವ ಹರಿವಾಣದಲ್ಲಿ ತಾಂಬೂಲವನ್ನು ನೀಡಿ ಪೂಜಿಸುವಳು. ಹೀಗೆ ಪ್ರತಿ ನಿತ್ಯವು ಹರಿಯನ್ನು ಮತ್ತು ಶ್ರೀ ಲಕ್ಷ್ಮಿಯನ್ನು ಪೂಜಿಸುವುದಾಗಿ ಹೇಳಿರುವಳು.

"ಗಂಗೆಯ ಜನಕಗೆ ಮಂಗಳ ಅಭಿಷೇಕ
ಸಂಭ್ರಮದಲ್ಲಿ ಮಾಡಿ ತವಕದಲಿ

ಶಂಭುವಂದಿತಗೆ ಪೀತಾಂಬರನುಡಿಸಿ ಪಾ–
ಪಂಗಳನೆ ಪೂಜಿಸುತ ಸ್ತುತಿಪರು
ಇಂದಿರಾಪತಿ ಶೀಘ್ರದಲಿ"[೪೩]

ಅಭಿಷೇಕ ಮಾಡಿ ಪೀತಾಂಬರವನ್ನುಡಿಸಿ ಶ್ರೀಹರಿಯ ಪಾದಗಳನ್ನು ಬಹು ವಿಧದಲಿ ಪೂಜಿಸುವ ರೀತಿ ಅತ್ಯಂತ ಹೃದ್ಯವಾದುದು. ಶ್ರೀಹರಿ, ಲಕ್ಷ್ಮಿ ಹಾಗೂ ಗುರುವಿನ ಪೂಜೆಯನ್ನು ಕೀರ್ತನೆಗಳಲ್ಲಿ ಜೀವಮ್ಮ ಅಪಾರ ಭಕ್ತಿಯಿಂದ ಮತ್ತು ಸಮರ್ಪಣಾ ಭಾವದಿಂದ ನೆರವೇರಿಸಿದ್ದಾಳೆ; ಅಂಥ ಭಾವವನ್ನು ತೋರ್ಪಡಿಸಿದ್ದಾಳೆ.

**೪.೧.೬. ವಂದನ ಭಕ್ತಿ:–** 'ವಂದನ' ಎಂದರೆ ಗುರುಪಾದ ಸೇವೆ, ಜಂಗಮ ಸೇವೆಯೆಂದು ಅರ್ಥ ನೀಡುತ್ತದೆ. 'ವಂದನೆಯು' ಭಕ್ತಿಯ ಪ್ರದರ್ಶನವಾಗಿದೆ. ಪರಮಾತ್ಮನನ್ನು ಮತ್ತು ಭಾಗವತರನ್ನು ಕಂಡಾಗ ಕೈ ಮುಗಿಯುವುದು ದಾಸರಿಗೆ ಭೂಷಣ. ಹಿರಿಯರ ಪಾದಕ್ಕೆ ಹಣೆಮುಟ್ಟಿ ನಮಸ್ಕರಿಸುವುದು 'ವಂದನ ಭಕ್ತಿ' ಎನಿಸಿಕೊಳ್ಳುವುದು. ಹೀಗೆ ನಮಿಸುವುದರಿಂದ ಅದು ಕೀಳರಿಮೆ ಎಂದು ತಿಳಿದುಕೊಳ್ಳಬಾರದು.

"ಬಾರಯ್ಯ ಶ್ರೀನಿವಾಸ ಭಕ್ತ ವತ್ಸಲ ಸ್ವಾಮಿ
ಬಾಗಿ ನಮಿಸುವೆನು ಪ್ರಿಯ"[೪೪]

"ಬಾರೋ ಭಕುತರ ಭವ ವಿಮೋಚನ
ಬಾರೋ ದ್ರೌಪದಿಯ ಮಾನ ಸಂರಕ್ಷಣ
ಬಾರೋ ದ್ರುವ ಪ್ರಹ್ಲಾದ ಪಾಲಕ
ಬಾರೋ ಗಜರಾಜೇಂದ್ರ ವರದ"[೪೫]

ನಿನ್ನ ಪಾದಕ್ಕೆ ಬಾಗಿ ನಮಿಸುವೆನು ಹರಿದಾಸಪ್ರೀಯನೆ ಎಂಬ ಭಾವಾಭಿವ್ಯಕ್ತಿಯಲ್ಲಿ ವಂದನ ಭಾವ ಸ್ಪಷ್ಟಗೊಂಡಿದೆ.

"ಬಾರೋ ಬಾರೋ ಕರುಣಾನಿಧಿ ನಿನ್ನನು
ಬಾರಿಬಾರಿಗೆ ಸಿರಬಾಗಿ ನಮಿಸುವೆನು"[೪೬]

ಎಂಬ ಭಾವಭಕ್ತಿಯನ್ನು ಸಲ್ಲಿಸುತ್ತ ಜೀವೂಬಾಯಿಯು ಹರಿಯ ದಶಾವತಾರ ಮತ್ತು ಮಹಿಮೆಗಳನ್ನು ಕೊಂಡಾಡಿ ಇಂಥ ಅಪಾರ ಅಗಣಿತ ಮಹಿಮನ ಪಾದಕಮಲಗಳಿಗೆ ಶಿರಬಾಗಿ ವಂದಿಸುವಳು.

"ರಾಜೀವದಳನೇತ್ರ ರಾಮಚಂದ್ರನೆ ಶುಭ
ನಾಮಧೇಯನೆ ನಿನಗಾನಮಿಸುವೆನು"[೪೭]

ರಾಕ್ಷಸಕುಲ ಭಯಂಕರನಾದ ದಶರಥ ಪುತ್ರನೆ, ಭಕ್ತರ ಸುಧೇನುವೆ, ಗೌತಮ ಸತಿಯ ಶಾಪವ ಪರಿಹರಿಸಿದ ಪತಿತಪಾವನನೆ ಎನುತ ಶ್ರೀರಾಮನ ಪಾದಗಳಿಗೆ ಜೀವಮ್ಮ ಅತಿ ಭಕ್ತಿಯಿಂದ ವಂದಿಸಿದ್ದಾಳೆ.

"ಶ್ರೀಶ ಶ್ರೀಹಯವದನ ಮೂರ್ತಿಗೊಂದಿಸುವೆ
ಸಾಸಿರ ನಾಮದ ಒಡೆಯ ನೀನೆಂದು"[೪೮]

ಜೀವಮ್ಮ ಅಪಾರ ನಂಬುಗೆಯನಿಟ್ಟು

"ಹರಿದಾಸರೆಲ್ಲರೂ ಪರಮ ಸಂಭ್ರಮದಿಂದ
ಹರಿದಿನದ ಜಾಗರ ಹರಿಸ್ಮರಣೆಯಿಂದ
ಪರಮ ವೈಭವದಿ ತನ್ನ ಸ್ಮರಿಸುತಿಹ ಸುಜನರನು
ಕರುಣದಲಿ ಕಾವ ಸಿರಿರಮಣನೆಂತೆಂದು"[೪೯]

ಸಹಸ್ರಾರು ನಾಮಗಳನ್ನು ಹೊತ್ತು ಭಕ್ತಕೋಟಿಯನ್ನು ಸಲುಹುವ ಶ್ರೀಶನಿಗೆ ಜೀವಮ್ಮ ನಿರಂತರವಾಗಿ ಮನಸಾರೆ ವಂದಿಸಿದ ಭಾವ ಅಭಿವ್ಯಕ್ತಗೊಂಡಿದೆ.

**೪.೧.೭. – ದಾಸ್ಯ ಭಕ್ತಿ :–** 'ದಾಸ್ಯ' ಎಂದರೆ ಸೇವಕ, ದಾಸ ಎಂಬ ಅರ್ಥವನ್ನು ನೀಡುತ್ತದೆ. ಮಾನವರ ದಾಸನಾಗುವುದಕ್ಕಿಂತ ಹರಿಯ ದಾಸರಾಗುವುದು ಕೀರ್ತನಕಾರರಿಗೆ ಉತ್ತಮವೆಂದು ತೋರಿತು. ಆದ್ದರಿಂದ ಕೀರ್ತನಕಾರರು ತಮ್ಮನ್ನು ಹರಿದಾಸರೆಂದು ಹೆಮ್ಮೆ ಮತ್ತು ಭಕ್ತಿಯಿಂದ ಕರೆದುಕೊಂಡಿದ್ದಾರೆ. ಅವರು ತಮ್ಮ ರಚನೆಗಳನ್ನು 'ದಾಸಸಾಹಿತ್ಯ' ಎಂದು ಕರೆಯುವಿಕೆಯಲ್ಲಿ ದಾಸ್ಯ ಭಕ್ತಿಭಾವ ಮಿಳಿತಗೊಂಡಿದೆ. ಎಲ್ಲ ಹರಿದಾಸರೂ ತಮ್ಮನ್ನು 'ದಾಸತತ್ವಕ್ಕೆ' ಸಮರ್ಪಿಸಿಕೊಂಡಿದ್ದಾರೆ. ದೇವರ ದಾಸನಾಗುವುದರ ಜೊತೆಗೆ ದಾಸರ ಮನೆಯ ದಾಸರಾಗುವುದನ್ನು ಬಯಸುತ್ತಾರೆ. ಜೀವಮ್ಮಳ ರಚನೆಗಳಲ್ಲಿಯೂ ದಾಸ್ಯ ಭಕ್ತಿ ನಿರೂಪಿತಗೊಂಡಿದೆ.

"ದಾಸರ ಮೊರೆ ಲಾಲಿಸೋ ವೆಂಕಟಾಚಲ
ವಾಸ ಬಿನ್ನಪ ಲಾಲಿಸೋ
ಲೇಸು ಭಕುತಿಯ ಮಾಡದಲೇ ಬಲು

ಘಾಸಿಯಾಗುತ ಮನದಿ ನೊಂದು
ದಾಸನಾಗದೆ ಕ್ಲೇಷಪಟ್ಟೆನೋ
ಈಸು ದಿನಗಳ ಕಳೆದೆನೊ ವೃಥಾ"[೫೦]

ಎಂಬ ಮೊರೆಯಲ್ಲಿ 'ನಾನು ಇಲ್ಲಿಯವರೆಗೆ ನಿನ್ನ ದಾಸನಾಗಲಿಲ್ಲ ಅದರಿಂದ ತೊಂದರೆ ಅನುಭವಿಸಿದ್ದೇನೆ. ಇನ್ನಾದರೂ ನಿನ್ನ ದಾಸನನ್ನಾಗಿ ಮಾಡಿಕೋ' ಎಂದು ದಾಸ್ಯ ತತ್ವಕ್ಕೆ ಬದ್ಧಳಾಗಿರುವ ಭಾವವಿದೆ.

"ತಂದೆ ವೆಂಕಟೇಶ ವಿಠ್ಠಲ
ಬಂದು ಎನ್ನ ಹೃದಯದಲ್ಲಿ
ನಿಂದು ನಾಮನುಡಿಸಿ ಪೇಳ್ವ
ಚಂದ ಮನಕೆ ತಂದುಕೊಡು"[೫೧]

ಎಂದು ವಿನಂತಿಸಿಕೊಳ್ಳುವುದರೊಂದಿಗೆ ತನ್ನನ್ನು ಕರುಣೆಯಿಂದ ಕಾಯುವಂತೆ ಪ್ರಾರ್ಥಿಸಿಕೊಂಡಿರುವುದು ದಾಸ್ಯ ಮನೋಭಾವವನ್ನು ಬಿಂಬಿಸುವುದು.

"ಕಾಯ ಕ್ಲೇಷದಿಂದ
ಮನ ವ್ಯಥೆಗಳಿಂದ
ಕಾಯಜ ಪಿತನಂಘ್ರಿಯ ಸೇವಿಸದಲೆ
ಆಯಾಸದಿ ಮನ ಕಳವಳಗೊಳ್ಳುತ್ತಿದೆ"[೫೨]

ಮನವು ವಿವಿಧ ಕ್ಲೇಷಗಳಿಂದ ಘಾಸಿಯಾಗಿದೆ. ಇಂಥ ಮನಸ್ಸಿಗೆ ಸಾಂತ್ವನವನ್ನು, ನೆಮ್ಮದಿಯನ್ನು ನೀಡುವಂತೆ ಅತಿ ಕಳವಳದಿಂದ ಶ್ರೀಹರಿಯಲ್ಲಿ ಜೀವಮ್ಮ ನಿವೇದಿಸಿಕೊಳ್ಳುವಳು. ಈ ಮೂಲಕ ಸೇವಕ ಮನೋಭಾವ ಪ್ರಕಟಗೊಂಡಿದೆ.

**೪.೧.೮. ಸಖ್ಯ ಭಕ್ತಿ :–** 'ಸಖ್ಯ' ಎಂದರೆ ಗೆಳೆಯ, ಮಿತ್ರ, ಸ್ನೇಹಿತ ಎಂದರ್ಥ. ದೇವರನ್ನು ವಿವಿಧ ರೂಪಗಳಲ್ಲಿ ಕಂಡವರುಂಟು. ದೇವರನ್ನು ತಂದೆ, ತಾಯಿ, ಗುರು, ಮಾತೃ, ಮಗು ಹಾಗೂ ಗೆಳೆಯನ ರೀತಿಯಲ್ಲಿ ಕಂಡು ಆನಂದಿಸಿದ್ದಾರೆ. ಮಹಾಶಿವಶರಣೆ ಬಿಜ್ಜ ಮಹಾದೇವಿಯು ತಾಯಿಯಾಗಿ ಪರಮಾತ್ಮನ ಪ್ರೀತಿ ತೋರಿದ್ದಾಳೆ. ಸಂತ ಸೂರದಾಸರು ಬಾಲಕೃಷ್ಣನಲ್ಲಿ ಭಕ್ತಿ ಕಂಡಿದ್ದಾರೆ. ಸೂಫಿ ಸಂತರು ಪ್ರಿಯತಮೆಯಾಗಿ ಕಂಡಿದ್ದಾರೆ. ಅರ್ಜುನನು ಕೃಷ್ಣನನ್ನು ಗೆಳೆಯನ ರೂಪದಲ್ಲಿ ಕಂಡಿದ್ದಾನೆ.

"ಅರಳು ಕೆಂದಾವರೆ ಪೋಲುವ ಚರಣ
ಸ್ಮರಿಸುವರಘಹರಣ
ಸುರರು ಕಿನ್ನರೋಲೈಸುವ ಚರಣ
ವರಸುಗುಣಾಭರಣ
ಘಲುಘಲು ಘಲುರೆಂದೊಪ್ಪುವ ಚರಣ
ಸಜ್ಜನರಾಭರಣ
ಅಡಿಯಿಡುತಲಿ ಬಾ ಮೃಢ ಸಖ ನಿನ್ನಯ
ಅಡಿಗೆರಗುವರ್‍ಯೆ ತಡೆಯದೆ ಬಾರೆಂದು"[೫೩]

ಶ್ರೀಹರಿಯ ಚರಣವನ್ನು ಸ್ತುತಿಸುತ್ತ ಜೀವುಬಾಯಿಯು 'ಸಖನ' ಭಾವದಿಂದ ಪಾದಕ್ಕೆರಗುವಳು.

"ಹಸುಳೆ ನಿನಗೆ ಹೊಸ ಬೆಣ್ಣೆಯ ನೀವೆ
ಬಿಸಿ ಬಿಸಿ ಕಡುಬು ಕಜ್ಜಾಯವ ಕೊಡುವೆ
ಶಶಿಮುಖಿಯರ ಕೂಡಾಡದಿರೆನುವೆ
ಮೊಸರು ಬೆಣ್ಣೆ ಪಾಲ್ಸಕ್ಕರೆ ಕೊಡುವೆ"[೫೪]

ಇಲ್ಲಿ ಜೀವೂಬಾಯಿಯು ಶ್ರೀಹರಿಯನ್ನು 'ಮಗು' ವಿನಂದದಿ ಮಾತೃವಾತ್ಸಲ್ಯ ಭಾವವನ್ನು ತೋರಿದ್ದಾಳೆ. ನಿನಗೆ ಬೆಣ್ಣೆ, ಕಡುಬು, ಪಾಲ್ಸಕ್ಕರೆ ಕೊಡುವೆ ಗೋಪಿಯರ ಕೂಡ ಆಡ ಹೋಗಬೇಡೆಂದು ಬುದ್ದಿಮಾತು ಹೇಳುವಳು. ಇದೇ ರೀತಿ ಪುರಂದರದಾಸರು

"ಪೋಗದಿರೆಲೋ ರಂಗ ಬಾಗಿಲಿಂದಾಚೆ"

ಎಂದು ಹರಿಯನ್ನು ಮಗುವಿನ ಹಾಗೆ ಕಂಡಿರುವರು.

"ಬ್ಯಾಡೋ ಒಬ್ಬರ ಮನೆಗೆ ನೀಪೋಗ
ಬ್ಯಾಡೋ ಒಬ್ಬರ ಮನೆಗೆ"[೫೫]

ಇಲ್ಲಿಯೂ ಜೀವಮ್ಮ ಮಾತೃವಾತ್ಸಲ್ಯದಿಂದ ಶ್ರೀಹರಿ ಮಗುವೆಂದು ತಿಳಿದುಕೊಂಡಿರುವುದು ಗೋಚರಿಸುತ್ತದೆ.

"ತಂದೆ ತಾಯಿ ಬಂಧು ನೀನು ಪದ್ಮನಾಭ ನಿನ್ನ
ನಂಬಿದ ಭಕ್ತರೊಳಿರಿಸಿ ಪದ್ಮನಾಭ

ಅಂಬುಜಾಕ್ಷ ಸಲಹ ಬೇಕೋ ಪದ್ಮನಾಭ ಪೀ–

ತಾಂಬರಧಾರಿಯೆ ಸಲಹೋ ಪದ್ಮನಾಭ"[೫೬]

ಹರಿಯನ್ನು ತಂದೆ–ತಾಯಿ–ಬಂಧುವೆಂದು ಕಂಡ ಬಗೆ ಅತ್ಯಂತ ತನ್ಮಯತೆಯನ್ನು ತಂದಿದೆ. ನೀನೆ ನನ್ನನ್ನು ರಕ್ಷಿಸಬೇಕು. ನಿನ್ನನ್ನು ಬಿಟ್ಟರೆ ನನಗೆ ಬೇರೆ ಯಾರಿಲ್ಲ ಎಂದು ಹರಿಯೇ ತನ್ನ ಸರ್ವಸ್ವವೆಂಬ ನಂಬಿಗೆ ದೃಢಪಟ್ಟಿದೆ, 'ಗೋಪಿ ಗೀತದಲ್ಲಿಯೂ' ಸಖಭಾವ ವ್ಯಕ್ತವಾಗಿದೆ (ಕೀ.೧೬೬)

**೪.೧.೯. ಆತ್ಮ ನಿವೇದನೆ:–** ಇದು ನವವಿಧ ಭಕ್ತಿಯಲ್ಲಿ ಕೊನೆಯದು, ಆತ್ಮ ನಿವೇದನೆ ಎಂದರೆ ; ನಿವೇದಿಸಿಕೊಳ್ಳು, ವಿಜ್ಞಾಪಿಸಿಕೊಳ್ಳು ಎಂಬ ಅರ್ಥವಿದೆ. ಆತ್ಮವನ್ನು ಸಮರ್ಪಿಸಿಕೊಳ್ಳವುದು. ಭಕ್ತಿಯ ಮಾರ್ಗದಲ್ಲಿ ಕೊನೆಯದು ಹಾಗೂ ಉನ್ನತವಾದುದು. ವ್ಯಕ್ತಿಯು ತನ್ನ ಮನದ ನೋವು ನಲಿವುಗಳನ್ನು ಹೇಳಿಕೊಳ್ಳವುದು. ಇಲ್ಲಿ ವಿಜ್ಞಾಪನೆಗಿಂತ ಸಮರ್ಪಣಾ ಭಾವವು ಮುಖ್ಯ. ಭಗವಂತನಿಗೆ ತನು, ಮನ, ಧನಗಳನ್ನು ಪ್ರಾಮಾಣಿಕವಾಗಿ ಸಮರ್ಪಿಸುವುದು. ಕೋಳೂರು ಕೊಡಗೂಸು, ಬೇಡರ ಕಣ್ಣಪ್ಪರು ಇದಕ್ಕೆ ಉತ್ತಮ ನಿದರ್ಶನರಾಗಿದ್ದಾರೆ.

"ಅಪರಾಧ ಸಹಸ್ರಗಳ ಮಾಡುತನುದಿನದಿ

ಅಪರಿಮಿತ ಮಹಿಮನಿನ್ನನು ಸ್ಮರಿಸದೆ

ಚಪಲ ಬುದ್ಧಿಗಳಿಂದ ತಪಿಸಿದೆನೋ ಭವದೊಳಗೆ

ಗುಪಿತದಿಂ ಸಲಹಯ್ಯ ಪಿತನೆ ಕೈಮುಗಿವೆ"[೫೭]

ತಾನು ಮಾಡಿದ ಎಲ್ಲ ಅಪರಾಧಗಳನ್ನು ಮನ್ನಿಸಬೇಕು. ಇಲ್ಲಿಯವರೆಗೆ ನಾನು ನಿನ್ನನ್ನು ಅರಿಯದೆ ಚಂಚಲ ಮನಸ್ಸಿಗೆ ಒಳಗಾಗಿದ್ದೇನೆ. ತನ್ನ ಪರಿತಾಪವನ್ನು ಶ್ರೀಹರಿಗೆ ನಿವೇದಿಸಿಕೊಳ್ಳುವ ಭಾವ ಇಲ್ಲಿದೆ.

"ನಾನು ನನ್ನದು ಎಂಬ ಹೀನ ವೃತ್ತಿಗಳಿಂದ

ಹಾನಿಯಾಯಿತು ಆಯು ಶ್ರೀನಿಧಿಯೇ

ಜ್ಞಾನಿಗಳೊಡನೆ ಮೌನದಿಂದಿರದಲೆ

ಶ್ವಾನ ಸೂಕನಂತೆ ತಿರುಗಿ ಬಾಯ್ಬಿಡುತಲಿ"[೫೮]

ಇರುವ ಪರಿ ಸ್ವಾರ್ಥ ಸಾಧನೆಯ ಬೆನ್ನು ಹತ್ತಿ ಕೆಟ್ಟ ಕರ್ಮಗಳಲ್ಲಿ ಮುಳುಗಿ ಆಯುಷ್ಯ ಹಾಳಾಯಿತು ಎಂಬ ಪಾಶ್ಚಾತಾಪ ಪ್ರವೃತಿಯನ್ನು ಹೀಯಾಳಿಸಿದ್ದಾಳೆ.

"ದಾರಿ ಕಾಣೆ ದಾಮೋದರ ಸಂ
ರಕ್ಷಣ ವಾಸುದೇವ ಪ್ರದ್ಯುಮ್ನನನಿ
ರುದ್ಧ ಪುರುಷೋತ್ತಮ ಅಮೋಕ್ಷಜ
ನಾರಸಿಂಹ ಅಚ್ಚುತ ಜನಾರ್ಧನ ಉ
ಪೇಂದ್ರ ಹರಿ ಶ್ರೀ ಕೃಷ್ಣ ಶೌರಿ"[೫೯]

ಈ ಎಲ್ಲ ಮನೋಚಂಚಲತೆಗೆ ಒಳಗಾಗಿ ತಾನು ಮುಂದಿನ ದಾರಿಯನ್ನು ಕಾಣದೇ ನಿಂತಿರುವೆ. ನೀನು ದಯದೋರಿ ಕರುಣೆಯಿಂದ ತನ್ನನ್ನು ಮುನ್ನಡೆಸುವಂತೆ ಶ್ರೀಹರಿಯಲ್ಲಿ ಜೀವಮ್ಮ ಬೇಡಿಕೊಳ್ಳುವ ಭಾವ ತುಂಬಿದೆ.

"ಯಾಕೆ ನಿರ್ದಯನಾದೆ ಲೋಕೇಶ ಪ್ರಭುವೆ
ಸಾಕಲಾರದೆ ಎನ್ನ ನೂಕಿ ಭವದೊಳಗೆ"[೬೦]

ಎಂದು ಅಧಿಕಾರವಾಣಿಯಿಂದ ಪ್ರಶ್ನಿಸುವಳು. ನನ್ನನ್ನು ಸಾಕುವ ಕಾರ್ಯ ನಿನ್ನದು. ಒಂದು ವೇಳೆ ಸಾಕಲಾಗದಿದ್ದರೆ ನನ್ನನ್ನು ಈ ಪ್ರಪಂಚದಲ್ಲಿ ಏಕೆ ಹುಟ್ಟಿಸಿರುವೆ. ಇಂಥ ಮಾತುಗಳು ಒಂದೆಡೆ ಅಧಿಕಾರ ಮತ್ತೊಂದೆಡೆ ವಿಶ್ವಾಸವನ್ನು ತೋರಿಸುತ್ತವೆ.

"ವಾರಿಜಾಕ್ಷನೆ ನಿನ್ನ ಚಾರುಚರಣದ ಸ್ಮರಣೆ
ಬಾರಿಬಾರಿಗೆ ಮಾಳ್ಪ ಭಾಗ್ಯವೀಯೋ
ಸಾರಸಾಕ್ಷನೆ ಸಂಸಾರ ದು:ಖದಿ ಎನ್ನ
ಸೇರದಂದದಿ ಮಾಡೋ ಸರ್ವವಂದಿತ ಕೃಷ್ಣ"[೬೧]

ಈ ಮೂಲಕ ಜೀವೂಬಾಯಿಯು ಶ್ರೀಹರಿಯಲ್ಲಿ ತನ್ನ ನೋವು ನಲಿವುಗಳನ್ನು ಹಂಚಿಕೊಂಡು ತನ್ನ ಜೀವನದ ದು:ಖಗಳನ್ನು ಪರಿಹರಿಸಿ ಮುಂದಿನ ದಾರಿಯನ್ನು ತೋರುವಂತೆ ನಿವೇದಿಸಿಕೊಂಡಿರುವಳು.

ಶ್ರವಣದಿಂದ ಪಾಪ ಪರಿಹಾರವಾಗುವುದು. ಕೀರ್ತನ ಮಾಡಲು ಪಾತಕವು ಪರಿಹಾರವಾಗುವುದು, ಸ್ಮರಣೆ ಮಾಡಲು ಮನುಜರಿಗೆ ಇಹಪರದಲ್ಲಿ ಮಂಗಲವುಂಟಾಗುವುದು. ಪಾದಸೇವನೆಯಿಂದ ಪಾಪ ವಿಮೋಚನೆಯಾಗುವುದು. ಅರ್ಚನೆಯಿಂದ ಅಷ್ಟೈಶ್ವರ್ಯ ಪ್ರಾಪ್ತವಾಗುವುದು. ವಂದನೆಯ ಮಾಡಲು ಮುಕುಂದನು ಪ್ರೀತಿಯಿಂದ ಒಲಿಯುವನು. ದಾಸ್ಯವು ಗೈಗೊಳ್ಳಲು ದಾಸ್ಯ ಪರಿಹಾರವಾಗುವುದು. ಸಖ್ಯದಿಂದ ಭಕ್ತರ ಹೃದಯದಲ್ಲಿ ಪರಮಾತ್ಮನು ಸದಾಕಾಲ ನೆಲೆಸಿರುವನು. ಆತ್ಮ ನಿವೇದನದಿಂದ ನಿತ್ಯ ಮುಕ್ತರನ್ನಾಗಿ

ಮಾಡುವನು. ಈ ರೀತಿಯಾಗಿ ಜೀವೂಬಾಯಿಯು ನವವಿಧ ಭಕ್ತಿಯ ಪ್ರಯೋಜನಗಳನ್ನು 'ನವವಿಧ ಭಕ್ತಿ' (ಕೀ.೧೭೦) ಯಲ್ಲಿ ತಿಳಿಸಿದ್ದಾಳೆ.

"ಶಿವಶರಣರಂತೆ ಹರಿದಾಸರಿಗೂ ಧರ್ಮಪ್ರಚಾರ ಮುಖ್ಯೋದ್ದೇಶವಾಗಿತ್ತು. 'ಭಕ್ತಿ' ಎರಡು ಪಂಥಗಳಿಗೆ ಸಮಾನವಾದ ತೀವ್ರ ಮನೋಭಾವವಾಗಿತ್ತು, ಲೌಕಿಕ ಭೋಗದಲ್ಲಿ ನಿರಾಶಕ್ತಿ. ಸಂಸಾರದ ನಿಸ್ಸಾರತೆ, ಅರಿವು, ಭಕ್ತಿಯ ತೀವ್ರತೆ ಎರಡು ಪಂಥಗಳಲ್ಲಿಯೂ ಕಾಣಿಸಿಕೊಂಡವು"[೬೨] ಶಿವಶರಣರಲ್ಲಿದ್ದ ಗಾಢವಾದ ಏಕದೇವೋಪಾಸನೆ ಹರಿದಾಸರಲ್ಲಿ ಕಂಡು ಬರುವುದಿಲ್ಲ.

ಕೃಷ್ಣನನ್ನು ನೆನೆಯುವುದೇ ಹರಿದಾಸರ ಕೀರ್ತನೆಗಳ ಮುಖ್ಯ ಗುರಿ. ಅದರಲ್ಲಿಯೂ ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವುದು ದಾಸರಿಗೆ ಬಹು ಪ್ರೀತಿ. ಹರಿದಾಸರದು "ಆತ್ಮನಿವೇದನೆಯೇ ಹೊರತು ಆತ್ಮ ಶೋಧನೆಯಲ್ಲ"[೬೩] ತಾವು ಪಾಪಿಗಳು ಅನಿಸಿದಾಗ ತಮ್ಮನ್ನು ಬೈಯ್ದುಕೊಳ್ಳುವರು. ಹರಿದಾಸರು ಹಿರಿಯರು ಎನಿಸಿದಾಗ ಹೊಗಳುವುದು ಅವರ ಕೆಲಸ. ಎಲ್ಲಿಯೂ ಒಂದು ಸ್ಥಿತಿಯನ್ನು ಪರಿಶೀಲನೆಗೊಳ ಪಡಿಸುವ ಆತ್ಮ ವಿಮರ್ಷೆ ಕಾಣುವುದಿಲ್ಲ. ಈ ಮಾತು ಜೀವೂಬಾಯಿಯವರ ಕೀರ್ತನೆಗಳಿಗೂ ಅನ್ವಯಿಸುತ್ತದೆ.

**೪.೨. ಭಗವಂತನ ಸಂಕೀರ್ತನೆ :-**

"ವರ್ಣನೆ, ಕೀರ್ತನೆ ಈ ಬಗೆಯ ಮಾತುಗಳಲ್ಲಿ ಒಂದು ರೀತಿಯ ತನ್ಮಯತೆ ಕಾಣುವ ಗುಣ. ಕನ್ನಡ ಸಾಹಿತ್ಯದಲ್ಲಿ ಕೀರ್ತನೆ ಇಂಥ ತನ್ಮಯತೆಯ ಫಲ"[೬೪] ಭಕ್ತನಲ್ಲಿರುವ ಈ ತನ್ಮಯತೆ ತಲ್ಲೀಣತೆಯು ಅತ್ಯಂತ ತೀವ್ರತರಗೊಂಡಾಗ ಆ ಭಾವವೇ ಹಾಡಾಗಿ ಹೊರಹೊಮ್ಮುವುದು. ಇದಕ್ಕೆ ಹರಿದಾಸರ ಕೀರ್ತನೆಗಳು ಸಾಕ್ಷಿ.

ಕೃಷ್ಣನನ್ನು ನೆನೆಯುವುದೆಂದರೆ ಹರಿದಾಸರಿಗೆ ಮೃಷ್ಟಾನ್ನವನುಂಡಷ್ಟು ಆನಂದ. ಈ ಆನಂದ ಅನುಭವಗಮ್ಯವಾದುದು. ಹೃದಯ ಭಾವಾವೇಷದಿಂದ ತುಂಬಿಕೊಂಡು ಹರಿಯ ವಿವಿಧ ರೂಪಗಳನ್ನು ಕೊಂಡಾಡಿ ಕುಣಿದಾಡಿ ಕೀರ್ತಿಸಿದ್ದಾರೆ. ಬಾಲಕೃಷ್ಣನ ವರ್ಣನೆಗಳನ್ನು ಎಷ್ಟೆ ಬಗೆಬಗೆಯಾಗಿ ವರ್ಣಿಸಿದರೂ ಹರಿದಾಸರಿಗೆ ತೃಪ್ತಿಯಿಲ್ಲ. ಇಂಥ ಗೀತೆಗಳನ್ನು ಪುರಂದರದಾಸರಾದಿಯಾಗಿ ಎಲ್ಲ ಹರಿದಾಸರಲ್ಲಿ ಕಾಣುತ್ತೇವೆ. ಆದರೆ ವಾತ್ಸಲ್ಯ ಭಾವದ ಕೀರ್ತನೆಗಳನ್ನು ಬರೆದವರಲ್ಲಿ ದಾಸಶ್ರೇಷ್ಠರಾದ ಪುರಂದರದಾಸರಿಗೆ ಪ್ರಥಮ ಸ್ಥಾನ ಸಲ್ಲುವುದು. ಇನ್ನುಳಿದ ಹರಿದಾಸರೂ ಸಹ ಭಗವಂತನನ್ನು ಅಪಾರ ಶ್ರದ್ಧೆಯಿಂದ ಭಕ್ತಿ ಭಾವಾವೇಷದಿಂದ ಕೀರ್ತಿಸಿ ತನ್ಮಯತೆ ಹೊಂದಿದ್ದಾರೆ. ಜೀವೂಬಾಯಿಯೂ ಈ ಸಾಲಿನಲ್ಲಿ ನಿಲ್ಲುತ್ತಾಳೆ. ಜೀವೂಬಾಯಿಯು ರಚಿಸಿದ ಒಟ್ಟು ೧೭೦ ಕೀರ್ತನೆಗಳಲ್ಲಿ ೪೮ ಕೀರ್ತನೆಗಳು ಭಗವಂತನ ಸಂಕೀರ್ತನೆಗೆ

ಸಂಬಂಧಿಸಿದವುಗಳೆಂದು ಲೀಲಾವತಿ ಎಸ್. ರಾವ್ ಅವರು ವಿಭಾಗೀಕರಿಸಿದ್ದಾರೆ. ಅಂದರೆ ಜೀವಮ್ಮಳ ಕೀರ್ತನೆಗಳ ಕಾಲು ಭಾಗವು ಭಗವಂತನ ಸಂಕೀರ್ತನೆಯನ್ನು ಹೊಂದಿವೆ.

ಬಾಲಕೃಷ್ಣನ ವರ್ಣನೆಯು ಬಹು ಮುದ್ದಾಗಿ ಮೂಡಿ ಬಂದಿದೆ. ಅಂದಿಗೆ ಕಾಲ್ಗೆಜ್ಜೆಯನ್ನು ಹಾಕಿಕೊಂಡು, ಕಂಕಣ, ತೋಳ ಬಾಪುರಿಯನ್ನು ಧರಿಸಿಕೊಂಡು ಮಂದಹಾಸದ ಮುಖದ ಸುಂದರಾಂಗನನ್ನು ತಾಯಿ ಯಶೋಧೆಯು ಹುಡುಕುತ್ತಿರಲು

"ತರಳರೊಡನೆ ಕೂಡಿ ಕೃಷ್ಣ
ಮುರಳಿನಾದ ಗೈಯ್ಯುತಿರಲು
. . . . . . . . . . . . . . .
ವತ್ಸಗಳ ಬಾಲಗಳನೆ ಪಿಡಿದು
ಸ್ವೆಚ್ಛೆಯಿಂದ ನಲಿಯುತಿರಲು
. . . . . . . . . . . . . . .
ಮನೆಮನೆಗಳ ಪೊಕ್ಕು ಪಾಲು
ಮೊಸರು ಬೆಣ್ಣೆ ಮೆಲುವೆನೆನುವ
ವನಿತೆಯರ ಸಂತೈಸಿ ಕಳುಹಿ
ತನಯನೆಲ್ಲೆಂದುಡುಕುತಿರಲು

ಬಂದನು ಬಲರಾಮ ಭಯದಿಂದ
ಇಂದಿರೇಶ ಮಣ್ಣು ಮೆಲುವ
ನೆಂದು ಪೇಳೆ ಬಾಯತಗಿಸಿ
ಕಂಡು ವಿಶ್ವವ ವಿಸ್ಮಯಗೊಳುತಿರೆ"[೬೫]

ಉಳಿದ ಓಣಿಯ ಬಾಲಕರ ಜೊತೆಗೂಡಿ ಬಾಲ ಗೋಪಾಲನು ಮುರಳಿನಾದವನ್ನು ಮಾಡುತ್ತ ಮನಬಂದಂತೆ ಆಡುತ್ತಿದ್ದನು. ಆ ಕೇರಿಯ ವನಿತೆಯರು ನಿನ್ನ ಮಗ ಮೊಸರು ಬೆಣ್ಣೆಯ ತಿನ್ನುತ್ತಿರುವನೆಂದು ದೂರುವರು. ಅವರನ್ನೆಲ್ಲ ಸಂತೈಸಿ ಬರುವಾಗ ಬಲರಾಮನು "ಕೃಷ್ಣನು ಮಣ್ಣು ತಿನ್ನುತ್ತಿರುವನೆಂದು" ಹೇಳಲು, ಯಶೋಧೆ ಬಾಲಕೃಷ್ಣನ ಬಾಯಿ ತೆರೆಸಲು ಬಾಲನು ಬಾಯಿಯೊಳಗೆ ಬ್ರಹ್ಮಾಂಡವನ್ನೇ ತೋರಿದನು. ಇದ ಕಂಡ ಯಶೋಧೆಯು ಮಗುವನ್ನು ಪ್ರೀತಿಯಿಂದ ಮುದ್ದಾಡುವಳು.

"ನಾರಿಯರು ನಲಿದು ಬಂದು
ವಾರಿಧಿಯೊಳು ಸರಸವಾಡೆ
ಮಾರ ರವಣನು ಸೀರೆಗಳನು
ಗಾರು ಮಡಿ ಕದಿವರೇನೊ
ತಾರೋ ವಸನವ ದುರುಳ ಕೃಷ್ಣ ತಾರೋ ವಸನವ"[೬೬]

ನಾರಿಯರೆಲ್ಲರೂ ನದಿಗೆ ಸ್ನಾನ ಮಾಡಲು ಇಳಿದಿರುವಾಗ ಕೃಷ್ಣನು ಅವರ ಸೀರೆಗಳನ್ನು ಕದ್ದು ಇಟ್ಟುಕೊಳ್ಳುವನು. ಆಗ ನಾರಿಯರೆಲ್ಲರೂ ಸೇರಿ 'ದುರುಳ ಕೃಷ್ಣನೇ ನಮ್ಮ ಸೀರೆಗಳನ್ನು ಕೊಡು' ಎಂದು ಕೇಳುವರು. ನಾರಿಯರ ಸೀರೆ ಕದ್ದ ಕಳ್ಳ ಕೃಷ್ಣನು.

"ಅಂಗನೆಯರೆ ನಿಮ್ಮ ವೃತಕೆ
ಭಂಗವಾದ ಕಾರ್ಯವೆಸಗೆ
ವಂದಿಸಿದರೆ ಕೊಡುವನೆಂದು
ರಂಗ ನಲಿದು ನುಡಿದ ಮುದದಿ
ವಸನ ನೀಡಿದ ರಂಗ ವಸನ ನೀಡಿದ"[೬೭]

ತಾವೆಲ್ಲ ಬಂದು ನನಗೆ ನಮಸ್ಕರಿಸಬೇಕು ಆಗ ನಿಮ್ಮ ಸೀರೆಗಳನ್ನು ಕೊಡುವೆನು ಎನಲು ನಾರಿಯರೆಲ್ಲರೂ ಕೃಷ್ಣನಿಗೆ ನಮಸ್ಕರಿಸಲು ಆತ ಸೀರೆಗಳನ್ನು ನೀಡಿದನು.

ಗೋವುಗಳನ್ನು ಮೆಯ್ಯಲು ಬಿಟ್ಟಾಗ ಕೃಷ್ಣನು ತನ್ನೆಲ್ಲ ಗೆಳೆಯರ ಜೊತೆ ಕೂಡಿಕೊಂಡು ಕರುಗಳನ್ನು ಬಚ್ಚಿಡುವನು. ಗೋಪಿಯರೆಲ್ಲ ಸೇರಿಕೊಂಡು

"ದುರುಳತನ ತರವೆ ಕೃಷ್ಣ
ತಾರೋ ಕರುಗಳ ಕೃಷ್ಣ ತಾರೋ ಕರುಗಳ"[೬೮]

ಎನುತಾ ಗೋಪಾಲನನ್ನು ವಿನಂತಿಸಿಕೊಳ್ಳಲು ಮುದ್ದಿನ ಕರುಗಳನ್ನು ಜೋಕೆಯಿಂದ ಹಿಡಿದು ತಂದು ಬಿಡುವನು.

ಗೊಲ್ಲತಿಯರ ಮನೆಯೊಳಗೆ ಹೊಕ್ಕು ಗೋಪಾಲನು ಬೆಣ್ಣೆಯನ್ನು ಕದ್ದು ತಿನ್ನುತಿರಲು

ನಲ್ಲೆಯರು ಹಿಡಿದು ಹರಿಯ
ನಿಲ್ಲೊ ನಿಲ್ಲೊ ನಿಲ್ಲೊ ಕೃಷ್ಣ
ಜೋರ ಕೃಷ್ಣನೆ ತೋರೊ ನಿಜವ ಜಾರ ಕೃಷ್ಣನೆ"[೬೯]

ಎಂದು ಕೂಗುತ್ತ ಕೃಷ್ಣನ ಬೆಂಬ್ಹತ್ತಿ ಓಡಿಬರುವರು. ಆಗ ಕೃಷ್ಣನು ಬೆಕ್ಕು ತಿಂದು ಹೋಯಿತು ಎಂದು ನುಡಿವನು. ಹೀಗೆ ಜೀವೂಬಾಯಿಯು ಬಾಲ ಕೃಷ್ಣನ ಮತ್ತು ಗೊಲ್ಲತಿಯರ ಸಂಭಾಷಣೆಯ ಮೂಲಕ ಬಾಲ ಗೋಪಾಲನ ಲೀಲೆಯನ್ನು ಸಂಕೀರ್ತಿಸಿರುವಳು.

"ನೊಸಲಲ್ಲಿ ಕುಡಿನಾಮವ ನಿಟ್ಟಿಹಳು
ನೋಡುತ ಹಿಗ್ಗುವಳು
ಎಸಳುಗಣ್ಣಿಗೆ ಕಪ್ಪನೆ ತೀಡುವಳು
ಬಣ್ಣಿಸಿ ಕರೆಯುವಳು
ಎಸೆವ ಕರ್ಣಕೆ ನೀಲದ ಬಾವಲಿಯೂ
ರತ್ನದ ಚೌಗಳಿಯು
ಬಿಸುಜನಾಭ ನಿನ್ನ ಶಶಿಮುಖಿಯರುಗಳು
ರಸಕಸಿ ಮಾಳ್ಪರು ಹಸನಾಗಿ ಕೂಡೆಂದು"[೨೦]

ಯಶೋಧೆಯು ಬಾಲ ಕೃಷ್ಣನನ್ನು ಚಂದಾಗಿ ಶೃಂಗರಿಸಿ ಕಾಡಿಗೆಯನಿಟ್ಟು ಸುಂದರಿಯರು ನಿನ್ನ ಕಾಡುವರು ಎಲ್ಲಿಯೂ ಹೋಗಬೇಡ, ನಿನ್ನ ಶುಭ ಹಸ್ತದಲ್ಲಿ ಬೆಣ್ಣೆ ಮುದ್ದೆಯನ್ನು ಕೊಡುವೆ ಬಾ ಎನ್ನ ದೊರೆ ಎಂದು ಮುದ್ದಿಸುವಳು.

"ಚಂಡು ಬುಗುರಿ ಗೋಲಿ ಗಜ್ಜುಗ
ಹರಿಯೆ ಗುಂಡು ಬಿಂದಲಿಟ್ಟ ಕರದಲಿ
ಹಿಂಡು ಗೋಪಾಲರ ಕೂಡಿಸುವೆ
ಪುಂಡರಿಕಾಕ್ಷನೆ ಪಾಲಿಸು ದೊರೆಯ"[೨೧]

ನಿನಗೆ ಬಿಸಿ ಬಿಸಿ ಕಡುಬು ಕಜ್ಜಾಯ ಕೊಡುವೆ. ಶಶಿಮುಖಿಯರ ಜೊತೆಗೆ ಆಡಬೇಡ. ಎಂದು ಬಾಲನಿಗೆ ತಿಳಿ ಹೇಳುವಳು. ಇಲ್ಲಿಯ ಆಟದ ಸಾಮಾನುಗಳು ಹಳ್ಳಿಯ ಮಕ್ಕಳ ಆಟಿಕೆಯ ವಸ್ತುಗಳು.

"ತೊಟ್ಟಿಲ ತೂಗುವೆ ಕೃಷ್ಣನ ತೊಟ್ಟಿಲ ತೂಗುವೆ
ಪುಟ್ಟಿ ಬಾಲಕರೊಳು ಪರಮ ಶ್ರೇಷ್ಠನಾದನಾ"[೨೨]

'ಎಲ್ಲ ಮಕ್ಕಳಲ್ಲಿ ಕೃಷ್ಣ ಶ್ರೇಷ್ಠ' ಎಂಬ ಯಶೋಧೆಯ ಮಾತುಗಳಲ್ಲಿ ಎರಡರ್ಥಗಳಿವೆ. ಒಂದು ಕೃಷ್ಣನು ಹರಿಯ ಅವತಾರ ದೈವೀ ವ್ಯಕ್ತಿ ಎಂಬುದೊಂದು. ಇನ್ನೊಂದು ಯಾವುದೇ ತಾಯಿಗೆ ಎಲ್ಲ ಮಕ್ಕಳಲ್ಲಿ ತನ್ನ

ಮಗನೇ ಶ್ರೇಷ್ಠನಾಗಿ ಕಾಣುತ್ತಾನೆ. ಹೀಗೆ ಕೃಷ್ಣನನ್ನು ಜೋಗುಳ ಹಾಡಿ ಆತನ ವಿವಿಧ ಅವತಾರಗಳನ್ನು ಸ್ತುತಿಸುವಳು.

ಬಾಲಕೃಷ್ಣನು ತಾನು ಆಟ ಆಡಲು ಹೋದಾಗ ಗೊಲ್ಲತಿಯರು ತನ್ನನ್ನು ನೋಡುವ ರೀತಿ ಮತ್ತು ನುಡಿದ ಮಾತುಗಳನ್ನು ತಾಯಿಗೆ ಹೇಳುವುದನ್ನು ಜೀವಮ್ಮ ಬಹು ಹಾಸ್ಯಮಯವಾಗಿ ನಿರೂಪಿಸಿದ್ದಾಳೆ. ಸಣ್ಣ ಕೂಸೆಂದು ಅರಿಯದೆ ಬ್ರಹ್ಮನ ತಂದೆ ಎನ್ನುವರು. ಸಣ್ಣ ಹೊಟ್ಟೆಯವನೆಂದು ಅರಿಯದೆ, ಬ್ರಹ್ಮಾಂಡ ಹೊಟ್ಟೆಯಲ್ಲಿಟ್ಟುಕೊಂಡವನೆಂಬರು. ಬೆಣ್ಣೆ ಕಳ್ಳನೆಂದು ಕಣ್ಸನ್ನೆ ಮಾಡಿ ನಗುವರು. ಮುದ್ದಿಸುತ ಅಪಹಾಸ್ಯ ಮಾಡುವರು. ನಾರುಮಯ್ಯವ, ಘೋರರೂಪ, ಕ್ರೂರ ರೂಪಿ, ಬ್ರಹ್ಮಚಾರಿ, ನಾರು ವಸ್ತ್ರಧಾರಿ, ನವನೀತ ಚೋರ, ರಾವುತನೆಂಬರು. ಹತ್ತು ಅವತಾರಧಾರಿ ಎಂದು ಗೊಲ್ಲತಿಯರು ಆಡುವ ಮಾತುಗಳನ್ನೆಲ್ಲ ಯಶೋಧೆಯ ಮುಂದೆ ಹೇಳುವ ಸಂದರ್ಭ ಬಾಲ ಗೋಪಾಲನ ರೂಪವನ್ನು ಕಣ್ಮುಂದೆ ನಿಲ್ಲಿಸುತ್ತದೆ.

ಅಂಗಳದೊಳಗೆ ಆಡುತ್ತ ಚೆಂದದಿಂದ ನಲಿದಾಡುತ್ತಿದ್ದ ಬಾಲಕೃಷ್ಣನನ್ನು ಬಾರೋ ಗೋಪಾಲ, ಬಾರೋ ಸುಶೀಲ ದೇವಕಿ ಕಂದ ಕಂಸಾರಿ ತ್ರಿಲೋಲ ಎಂದು ಮುದ್ದು ಗೋಪಾಲನನ್ನು ಕಂಡು ಅವನ ರೂಪಕ್ಕೆ ಬೆರಗಾಗಿ ಮನೆಗೆ ಬರುವಂತೆ ಪ್ರೀತಿಯ ಮಾತುಗಳಿಂದ ಕರೆದಿರುವಳು.

"ಗೋಕುಲದಿ ಪುಟ್ಟಿ ಆಕಳನೆ ಕಾಯ್ದು
ಗೋವರ್ದನವನೆತ್ತಿ ಗೋಪಿವೃಂದ ಕಾಯ್ದ॥

ಬಾಲತನವನೋಡಿ ಪಾಲು ಬೆಣ್ಣೆ ಸೂರೆ
ಬಾಲಗೋಪರೊಡನೆ ಚೋರನೆನಿಸಿ ಮೆರೆದ॥

ಮುರಳಿನಾದಗೈದು ಪರಿಪರಿಯ ಜನರ
ಮರುಳಗೈಸಿ ಮೆರೆದ ಸುರಮುನಿವಂದ್ಯ॥

ಮಡದಿಯರು ಜಲದಿ ಮುದದಿಂದಾಡುತಿರಲು
ಮದನನಯ್ಯ ವಸ್ತ್ರಗಳನೆ ಕದ್ದ ಚೋರ॥

ಕಾಳಿ ಮಡುವ ಧುಮುಕಿ ಕಾಳಸರ್ಪನ ತುಳಿದ
ಕಾಮಜನಕ ಹರಿ ಶ್ರೀ ಕಮಲನಾಭವಿಠ್ಠಲ"[೭೩]

ಬಾಲಗೋಪಾಲನು ಗೋಕುಲದಲ್ಲಿ ಆಕಳ ಕಾಯುವಾಗ ತೋರಿದ ಬಾಲ ಲೀಲೆಗಳು ಇಲ್ಲಿ ವ್ಯಕ್ತಗೊಂಡಿವೆ. ಗೋವರ್ಧನಗಿರಿಯನ್ನು ಬೆರಳಿನಿಂದ ಎತ್ತಿ ಗೋಪವೃಂದವನ್ನು ರಕ್ಷಣೆ ಮಾಡಿದ ರೀತಿ, ಗೆಳೆಯರ ಜೊತೆ

ಸೇರಿ ಹಾಲು ಬೆಣ್ಣೆ ಕಳ್ಳತನ ಮಾಡಿದ ಸಂಗತಿ, ಗೋಪಿಯರ ಮನ ಆಕರ್ಷಣೆ ಮಾಡಿರುವುದು, ನಾರಿಯರು ನದಿಯಲ್ಲಿ ಜಲ ಕ್ರೀಡೆಯಾಡುತ್ತಿರಲು ಸೀರೆಗಳನ್ನು ಕದ್ದು ಮರವೇರಿ ಕುಳಿತದ್ದು, ಕಾಳಿಂಗ ಮಡುವಿನಲ್ಲಿ ಜಿಗಿದು ಕಾಳಸರ್ಪವ ಮದಿಸಿದ್ದ ಸಾಹಸಗಳನ್ನು ನಿರೂಪಿಸಿದ್ದಾಳೆ. ಜೀವಮ್ಮ ಮುಂದುವರೆದು ವಿಷವುಣಿಸಿ ಕೊಲ್ಲಲು ಬಂದ ಪೂತನಿಯ ರಕ್ತ ಹೀರಿ ಕೊಂದದ್ದು, ಒರಳು ಕಲ್ಲನ್ನು ಎಳೆದು ಎರಡು ಗಿಡಗಳನ್ನು ಮುರಿದು ಯಮಳಾರ್ಜುನರ ಶಾಪ ವಿಮೋಜನೆ ಮಾಡಿರುವ ಲೀಲೆಗಳನ್ನು ಬಹು ಆಪ್ತತೆಯಿಂದ ವರ್ಣಿಸಿದ್ದಾಳೆ.

"ಬ್ಯಾಡೋ ಒಬ್ಬರ ಮನೆಗೆ ನೀ ಪೋಗಬ್ಯಾಡೋ
ಬ್ಯಾಡೋ ಒಬ್ಬರ ಮನೆಗೆ ॥
ಗಾಡಿಕಾರನೆ ಕೃಷ್ಣ ಚಾಡಿ ಮಾತನು ಕೇಳಿ
ಗಾಡದೆ ಕಿವಿ ಮುಚ್ಚಿ ಓಡಿಸಿದೆ ಗೋಪಿಯರ
ಕಟ್ಟಿದ ತುರುಕರುಗಳ ಬಿಚ್ಚಿ ಪೋಗುವದಿದು
ನಿಶ್ಚಯವೆಂದು ಪೇಳ್ವರೊ
ಸ್ವಚ್ಛ ಕರುಗಳ ಕಣ್ಣು ಮುಚ್ಚಿ ಪಾಲೆಲ್ಲ ಕುಡಿದ
ಅಚ್ಯುತನಿಗೆ ಬುದ್ದಿ ಮತ್ತೆ ನೀ ಪೇಳೆಂಬರು ॥

ಮಕ್ಕಳೆಲ್ಲರು ಕಯ್ಯೊಳು ಬಟ್ಲಲಿ ಅವ
ಲಕ್ಕಿಯ ತಿನ್ನುತಿರಲು
ಫಕ್ಕನೆ ಬಡಿಯೆ ದಿಕ್ಕು ದಿಕ್ಕಿಗೆ ಚಲ್ಲೆ
ಬಿಕ್ಕಿ ಬಿಕ್ಕಿ ಅಳುತಾರೆ ಗೋಪಕ್ಕಾ ನೀನೋಡೆಂಬರು ॥
ವಾಸುದೇವನೆ ಹರಕೆಯ ಮಾಡಿ ನವ
ನೀತ ಮೀಸಲು ಮಾಡಿರೆ
ಮೀಸಲಳಿತು ಕೋತಿ ಮಾರ್ಜಾಲಗಳಿಗುಣಿಸಿ
ನೀತಿ ಪೇಳುವ ಶ್ರೀನಾಥ ನೋಡೆಂಬರು ॥

ಗೊಲ್ಲ ಬಾಲಕಿಯರೆಲ್ಲ ಪಾಲ್ಮೊಸರು ಮಾರೆ
ಮೆಲ್ಲನೆ ಪೋಗುತಿರಲು
ಗುಲ್ಲು ಮಾಡದೆ ಕವಣೆ ಕಲ್ಲಿಂದ ಕುಂಬ ಒಡೆಯೆ

ಚಲ್ಲಿ ಪಾಲ್ಮೊಸರು ಸೂರೆ ನಲ್ಲೆ ನೀ ನೋಡೆಂಬರು ॥

ಮತ್ತೆ ಕೇಳಮ್ಮ ಯಶೋಧೆ ನಾವೆಲ್ಲ ಆಣಿ
ಪೋಣಿಸುತ್ತಿರಲು
ಸುತ್ತ ಮುತ್ತಲು ಸೂರೆ ಮಾಡಿದ
ಕರ್ತೃ ಶ್ರೀ ಕಮಲನಾಭ ವಿಠ್ಠಲ ನೋಡೆಂಬರು"[೭೪]

ಇಲ್ಲಿ ಕೃಷ್ಣನ ತುಂಟತನಗಳನ್ನು ಕುರಿತು ಗೋಪಿಕಾ ಸ್ತ್ರೀಯರು ಯಶೋಧೆಗೆ ದೂರು ನೀಡುವರು. ಕಟ್ಟಿದ ಆಕಳ ಕರುಗಳನ್ನು ಬಿಟ್ಟು ಓಡಿಸುವನು. ಕರುವಿನ ಹಾಗೆ ಆಕಳ ಮೊಲೆಯ ಕುಡಿಯುವನು. ಮಕ್ಕಳು ಬಟ್ಟಲಿನಲ್ಲಿ ಅವಲಕ್ಕಿ ತಿನ್ನುವಾಗ ಅದನ್ನು ಬಡಿದು ಅವಲಕ್ಕಿ ಚಲ್ಲುವನು. ದೇವರಿಗಾಗಿ ಮೀಸಲು ಬೆಣ್ಣೆ ಇಡಲು ಅದನ್ನು ಕೋತಿ ಬೆಕ್ಕುಗಳಿಗೆ ತಿನ್ನಿಸುವನು. ಗೊಲ್ಲತಿಯರು ಹಾಲು ಮೊಸರು ಮಾರಲು ಹೋಗುತ್ತಿರಲು ಹಿಂದಿನಿಂದ ಕವಣಿಯೊಳಗೆ ಕಲ್ಲು ಹಾಕಿ ಮಡಿಕೆಯನ್ನು ಒಡೆದು ಹಾಲು ಮೊಸರು ಸೂರೆ ಮಾಡುವನು. ನಾವೆಲ್ಲರು ಕುಳಿತು ಮುತ್ತು ಪೋಣಿಸುತ್ತಿರುವಾಗ ಅವನೆಲ್ಲ ಚೆಲ್ಲಾಪಿಲ್ಲಿ ಮಾಡುವನು. ಕೈಗೆ ಸಿಗದೆ ಓಡಿಹೋಗುವನೆಂದು ಗೋಪಿಯರು ಹೇಳುವರು. ಯಶೋಧೆಯು ತನ್ನ ಮಗನಿಗೆ 'ಮತ್ತೊಬ್ಬರ ಮನೆಗೆ ಹೋಗಬೇಡ' ಎಂದು ಬಾಲ ಕೃಷ್ಣಣಿಗೆ ಬುದ್ದಿ ಹೇಳುವ ಸಂದರ್ಭ ಮಕ್ಕಳ ತುಂಟತನವನ್ನು ನೆನಪಿಸುತ್ತದೆ.

"ಪೊಡವಿಯೊಳು ಸಮರಿಲ್ಲ ಈತನ
ಉಡುಪಮುಖ ಶ್ರೀ ಕೃಷ್ಣರಾಯನ
ಕಡಲತಡಿಯ ನೆಲೆಸಿದಾತ
ಮೃಡ ಪುರಂದರೊಡೆಯದೇವನ"[೭೫]

ಎಂದು ಉಡಪಿಯ ಶ್ರೀ ಕೃಷ್ಣನನ್ನು 'ಉಡುಪಮುಖ' ನೆಂದು ವರ್ಣಿಸಿರುವಳು. ' ಉಡುಪ' ಎಂದರೆ ಚಂದ್ರ, 'ಉಡುಪ' ಎಂಬ ಹೆಸರಿನಿಂದಲೇ 'ಉಡುಪಿ' ಎಂಬ ಗ್ರಾಮ ನಾಮ ಬಂದಿರಲು ಸಾಧ್ಯವಿದೆ.

"ಮಧ್ವರಾಯರಿಗೊಲಿದು ಉಡುಪಿಯ
ಮಣ್ಣ ಗದ್ದೆಯೊಳಗೆ ಪೊಳೆದು
ಅದ್ವೈತ ಮತದ ಸದ್ದಡಗಿಸಿ ಮೆರೆದಂಥ
ಮುದ್ದು ಸರ್ವಜ್ಞರ ಆಜ್ಞಾಧಾರಕರೆಲ್ಲ"[೭೬]

"ಕೊರಳ ಕೌಸ್ತುಭ ಮಾಲೆಯು ವೈಜಯಂತಿಯು
ಮುರುಡಿ ಸರಪಣಿ ಗೆಜ್ಜೆಯು
ಪರಿಪರಿ ರತ್ನಾಭರಣಗಳ್ಹೊಳೆಯುತ
ಜರದ ಪೀತಾಂಬರದಿಂದ ಶೋಭಿಪ ದಿವ್ಯ"[೭೭]

ಈ ಕೀರ್ತನೆಯಲ್ಲಿ ಮಧ್ವರಿಗೆ ಒಲಿದ ಉಡುಪಿಯ ಶ್ರೀಕೃಷ್ಣನ ಸ್ತ್ರೀ ರೂಪಿ ಸೌಂದರ್ಯವನ್ನು ಜೀವಮ್ಮ ವರ್ಣಿಸಿರುವಳು. ನಾವಿಕ ನೀಡಿದ ಗೋಪಿಚಂದನದ ಗಟ್ಟಿಯೊಳಗಿಂದ ಮಧ್ವಾಚಾರ್ಯರಿಗೆ ಕೃಷ್ಣನ ಮೂರ್ತಿ ದೊರೆತದ್ದರಿಂದ 'ಮಣ್ಣಗಡೆಯೊಳಗೆ ಪೊಳೆದ' ಎಂದು ಜೀವಮ್ಮ ಹೆಸರಿಸಿರುವಳು. ಸ್ತ್ರೀ ರೂಪಧರಿಸಿದ ಉಡುಪಿಯ ಶ್ರೀ ಕೃಷ್ಣನಿಗೆ ಪ್ರತಿ ಶುಕ್ರವಾರ ಮತ್ತು ನವರಾತ್ರಿಯ ಒಂಭತ್ತು ದಿನಗಳು ದೇವಿಯ ಅಲಂಕಾರ ಮಾಡುತ್ತಾರೆ ಆ ಸಂದರ್ಭದ ರೂಪವನ್ನು ಜೀವಮ್ಮ ವರ್ಣಿಸಿದ್ದಾಳೆ.

ತಿರುಪತಿಯ ವೆಂಕಟೇಶನನ್ನು ಕೂಡಾ ಜೀವಮ್ಮ ವರ್ಣಿಸಿ ಧನ್ಯತೆ ಪಡೆದಿದ್ದಾಳೆ.

"ನೂತನಕೆ ನೂತನ ಬಲು ನೂತನ
ಶೇಷಗಿರಿವಾಸ ನಿನ್ನ ಮಹಿಮೆ ನೂತನವು

ಮಾಡದನೆ ಮಾಡಿಸುವಿ ನೋಡದೆ ನೋಡಿಸುವಿ
ಬೇಡದಿದ್ದುದನೆಲ್ಲ ಬೇಡಿಸುವಿ
ನಾಡೊಳಗೆ ನಿನ್ನ ಪೋಲುವರುಂಟೆ ಸರ್ವೇಶ
ಮೂಡಲಗಿರಿವಾಸ ನಿನ್ನ ಮಹಿಮೆ ನೂತನವು"[೭೮]

ತಿರುಪತಿಯನ್ನು ಜೀವಮ್ಮ 'ಮೂಡಲಗಿರಿ' ಎಂದಿರುವಳು. ಇದಕ್ಕೆ ಶೇಷಾಚಲ, ಉರಗಗಿರಿ, ಸಪ್ತಗಿರಿ ಎಂತಲೂ ಕರೆಯುವರು. ವೆಂಕಟಪತಿಯು ಭಕ್ತರಿಂದ ಮಾಡದೆ ಮಾಡಿಸುವ, ನೋಡದೆ ನೋಡಿಸುವ ಶಕ್ತಿಯನ್ನು ಹೊಂದಿದವನು. ಇಂಥ ಮಹಿಮೆ ಹೊಂದಿದ ವೆಂಕಟಾಚಲಪತಿಯು ಅಣುವನ್ನು ಪರ್ವತವನ್ನಾಗಿಸುವನು, ಶ್ರೇಷ್ಠವಾದುದನ್ನು ಹುಲ್ಲಾಗಿಸುವನು, ನಿಂದಿಸುವವರನ್ನು ಶಿಕ್ಷಿಸುವನು, ಆದ್ದರಿಂದ ಮೂಡಲಗಿರಿವಾಸನ ಮಹಿಮೆ ನಿತ್ಯವೂ ನೂತನವಾದುದೆಂದು ಜೀವಮ್ಮ ಹೊಗಳಿದ್ದಾಳೆ.

"ಕೌಸಲ್ಯದೇವಿಯ ಕಂದನೆ ರಾಮ
ಕೌಶಿಕ ಯಜ್ಞವ ಕಾಯ್ದ ರಾಮ
ಹಿಂಸಿಸಿದ ತಾಟಕೀಯ ಕೊಂದ ರಾಮ
ಧ್ವಂಸ ಮಾಡಿ ಶಿವಧನು ಮುರಿದ ರಾಮ

ಸಂಶಯವಿಲ್ಲದೆ ಸೀತೆ ಕರವ ಪಿಡಿದು
ತನ್ನಂಶದ ಪರಶುರಾಮಗೊಲಿದನೆ"[೭೯]

ಜಾನಕಿರಮಣ ಶ್ರೀರಾಮನ ಮಹಿಮೆಯನ್ನೂ ಸಹ ಅತೀ ಸುಲಲಿತವಾಗಿ ಜೀವಮ್ಮ ಪರಿಚಯಿಸಿದ್ದಾಳೆ. ಯಾಗವನ್ನು ನಾಶಮಾಡುತ್ತಿದ್ದ ತಾಟಕೀಯನನ್ನು ಕೊಂದು ವಿಶ್ವಾಮಿತ್ರನಿಗೆ ಸಹಾಯ ಮಾಡಿದವನು. ಸೀತಾಸ್ವಯಂವರದಲ್ಲಿ ಶಿವಧನಸ್ಸನ್ನು ಮುರಿದು ಸೀತೆಯನ್ನು ಮದುವೆಯಾದವನು. ತನ್ನವತಾರದ ಪರಶುರಾಮನಿಗೆ ಗುರುವಾಗಿ ಕೃಪೆದೋರಿದವನು ಎಂದು ರಾಮನನ್ನು ಕೊಂಡಾಡಿರುವಳು. ಇದರ ಜೊತೆಗೆ ಶ್ರೀರಾಮನಿಗೆ ಪಟ್ಟಗಟ್ಟಲು ದಶರಥ ನಿರ್ಧರಿಸಿದಾಗ ಕೈಕೆಯಿಯ ಸಲುವಾಗಿ ಶ್ರೀರಾಮ ಸಿಂಹಾಸನ ತೊರೆದು ಸೀತೆ ಲಕ್ಷ್ಮಣ ಸಹಿತ ಭರತನಿಗೆ ಪಾದುಕೆ ಕೊಟ್ಟು ವನವಾಸಕ್ಕೆ ಹೋದ ವಿಷಯ. ಸೀತೆ ಬಯಸಿದ ಮಾಯಾ ಜಿಂಕೆಯನ್ನು ತರಲು ರಾಮ ತೆರಳಲು ರಾವಣನನು ಸೀತೆಯನ್ನು ಅಪಹರಣ ಮಾಡಿದ ಸಂಗತಿ. ಹನುಮಂತನ ಮೂಲಕ ಸೀತೆಯನ್ನು ಶೋಧಿಸಿ ಅವಳಿಂದ ಉಂಗುರ ಪಡೆದು ಬರುವಾಗ ಬಾಲದ ಬೆಂಕಿಯಿಂದ ಲಂಕೆಯ ಸುಟ್ಟು ರಾಮನೆಡೆ ಬಂದ ವಿಷಯವನ್ನು ನಿರೂಪಿಸಿದ್ದಾಳೆ. ಮುಂದೆ

"ಸೇತು ಬಂಧನ ಮಾಡಿ ಕಪಿಗಳ ಕೂಡಿ
ನೀತಿ ಪೇಳಿದ ವಿಭೀಷಣಗಭಯ ನೀಡಿ
ಭೂತ ರಾವಣನ ದಶಶಿರವ ಚಂಡಾಡಿ
ಸೀತಾಸಹಿತ ರಾಮ ಪುಷ್ಪಕವನೇರಿ
ಆತುರದಿ ಭರತನಿಗ್ವಾರ್ತೆಯ
ಪ್ರೀತಿಲಿ ಕಳುಹಿಸಿದ ಶ್ರೀ ರಘುರಾಮ"[೮೦]

ಕೇವಲ ಐದು ನುಡಿಗಳಲ್ಲಿ ಜೀವಮ್ಮ ದೀರ್ಘ ರಾಮಾಯಣವನ್ನು ಸಂಕ್ಷೇಪಿಸಿ ಹೇಳಿದ್ದಾಳೆ. ಸೀತೆಯನ್ನು ಲಂಕೆಯಿಂದ ತಂದು, ಅಯೋಧ್ಯೆಯಲ್ಲಿ ಶ್ರೀರಾಮ ಪಟ್ಟಗೊಳ್ಳವ ವರೆಗಿನ ವಿಷಯ ತಿಳಿಸಿದ್ದಾಳೆ. ಮತ್ತೊಂದು ಕೀರ್ತನೆಯಲ್ಲಿ (ಕೀ ೩೮) ಇದೇ ವಿಷಯವನ್ನು ಪ್ರಸ್ತಾಪಿಸಿದ್ದಾಳೆ. ಸೀತಾ ಸ್ವಯಂವರಕ್ಕಾಗಿ ಬರುತ್ತಿರುವಾಗ ಗೌತಮ ಮುನಿಗಳ ಸತಿಯಾದ ಅಹಲ್ಯಯನ್ನು ಶಾಪ ವಿಮೋಚನಳನ್ನಾಗಿಸಿದ ಸಂಗತಿಯನ್ನು ತಿಳಿಸಿದ್ದಾಳೆ. ರಾಮನನ್ನು ಸ್ತುತಿಸಿ ರಾಮನಿಗೆ ತನ್ನ ನಿರ್ಮಲ ಭಕ್ತಿಯನ್ನು ಅರ್ಪಿಸಿದ್ದಾಳೆ.

ನಾರದ ಶ್ರೀ ಕೃಷ್ಣನಿಗೆ ಪಾರಿಜಾತ ಪುಷ್ಪವನ್ನು ಕೊಡುವನು. ಈ ವಿಷಯ ಸತ್ಯಭಾಮೆಗೆ ತಿಳಿದಾಗ ಕೃಷ್ಣನೊಂದಿಗೆ ಕಲಹಕ್ಕೆ ತೊಡಗುವಳು. ಈ ಕಲಹದಲ್ಲಿ ಕೃಷ್ಣನು ಸೋಲುವನು. ಸತ್ಯಭಾಮೆಸಹಿತ ಕೃಷ್ಣ ಪಾರಿಜಾತ ವೃಕ್ಷದೊಂದಿಗೆ ದ್ವಾರಕೆಗೆ ಬರುವನು. ಆಗ ದುರುಳ ರಾಕ್ಷಸರು ಗುಂಪಾಗಿ ಕೃಷ್ಣನನ್ನು ಹಿಡಿಯಲು ಬರುವರು. ಇದನ್ನು ತಿಳಿದ ಹರಿಯು ಗುಹೆಯಲ್ಲಿ ಹೊಕ್ಕು ಮುಚಕುಂದರಾಯನಿಗೆ ಜರದ ವಲ್ಲಿಯನ್ನು

ಹೊದಿಸಿ ಮಾಯವಾಗುವನು. ಆ ರಾಕ್ಷಸರೆಲ್ಲರೂ ಬಂದು ಮುಚುಕುಂದನನ್ನು ಒದೆಯುವರು. ಆತ ಕಣ್ತೆರೆದು ನೋಡಲು ಆ ದುರುಳರ ದಂಡು ಸುಟ್ಟು ಬೂದಿಯಾಗುವುದು. ಇದೇ ರೀತಿ ಮತ್ತೊಮ್ಮೆ ದೈತ್ಯರು ಕೃಷ್ಣನನ್ನು ಹಿಡಿಯಲು ಬರುವರು. ಹರಿ ಮತ್ತೆ ಹೆದರಿ ಹಿಂದೆ ಓಡುತ ಪರ್ವತವನ್ನೇರಿ ನಿಲ್ಲುವನು. ಖಳರು ಪರ್ವತದ ಸುತ್ತ ನಿಂತರು. ಹರಿಯು ಆ ಪರ್ವತವನ್ನು ತನ್ನ ಪಾದದಿಂದ ಒತ್ತಿ ತುಳಿಯಲು ಜಲವು ಅವರೆಲ್ಲರ ಮುಖಕ್ಕೆ ಎರಚಲು ಖಳರೆಲ್ಲರೂ ಓಡಿಹೋದರು. ಕೌರವರು ರಚಿಸಿದ ಚಕ್ರವ್ಯೂಹದಲ್ಲಿ ಸಿಕ್ಕ ಅಭಿಮನ್ಯು ಮರಣ ಹೊಂದಲು ಹರಿಯು ಮಿತ್ರನ ಪುತ್ರ ತೀರಿಕೊಂಡುದಕ್ಕೆ ದು:ಖಿತನಾಗಿ ತಾನೂ ಸಹ ನರನಂತೆ ಸತ್ತಂತೆ ನಟಿಸಿದನು. ಹತ್ತು ಹನ್ನೊಂದು ಸಲ ಹರಿಯನ್ನು ಗೆಲ್ಲಲು ದೈತ್ಯ ದಾನವನಾದ ಜರಾಸುತನು ಏರಿಬರುತ್ತಿದ್ದನು. ಇದನ್ನು ತಿಳಿದ ಹರಿಯು ಜಲಮಧ್ಯದಲ್ಲಿ ಸುಂದರವಾದ ದ್ವಾರಕಾಪುರವನ್ನು ರಚಿಸಿ ತನ್ನ ಎಂಟು ಜನ ಪಟ್ಟದರಸಿಯರು ಮತ್ತು ಹದಿನಾರು ಸಾವಿರ ಸತಿಯರ ಜೊತೆಗೂಡಿ ಆನಂದದಿಂದ ನೆಲೆಸಿದನು. ಹೀಗೆ ಕೃಷ್ಣನ ಬದುಕಿನ ವಿಚಿತ್ರ ಘಟನೆಗಳನ್ನು ಜೀವಮ್ಮ ವಿವರಿಸಿದ್ದಾಳೆ. (ಕೀ. ೧೩)

ಹರಿಯು ವೈಕುಂಠದಲ್ಲಿ ಶ್ರೀ ಲಕ್ಷ್ಮಿಯ ಜೊತೆಗೆ ಕುಳಿತಿರಲು ಬೃಗು ಮಹರ್ಷಿಯು ಬಂದು ವಿಷ್ಣುವಿನ ಎದೆಗೆ ಒದ್ದನು. ಆದರೆ ಶ್ರೀಹರಿಯು ಋಷಿಯ ಈ ಕೃತ್ಯಕ್ಕೆ ಕೋಪಗೊಳದೇ ಸತ್ಕರಿಸಿ ಕಳುಹಿಸುವನು. ಇದರಿಂದ ಕುಪಿತಗೊಂಡು ಲಕ್ಷ್ಮಿಯು ವಿಷ್ಣುವನ್ನು ಬಿಟ್ಟು ವೈಕುಂಠದಿಂದ ಹೋಗುವಳು. ಈ ತಾಪವನ್ನು ಸಹಿಸಿಕೊಳ್ಳಲು ಆಗದೆ ವಿಷ್ಣು ಲಕ್ಷ್ಮಿಯನ್ನು ಹುಡುಕುತ್ತಾ ತಿರುಪತಿಗೆ ಬಂದನು. ತಿರುಪತಿಯ ಶ್ರೀನಿವಾಸನು ಒಮ್ಮೆ ಆನೆಯ ಬೆಂಬತ್ತಿ ಬಂದು ಪದ್ಮಾವತಿಯನ್ನು ಭೆಟ್ಟಿಯಾಗುವನು. ಅವಳನ್ನು ಮೋಹಿಸಿ ಕೊರವಂಜಿ ವೇಷವನ್ನು ಧರಿಸಿ ಆಕಾಶರಾಜನ ಮನೆಗೆ ಹೋಗುವನು. ನಂತರ ಶ್ರೀನಿವಾಸನು ಪದ್ಮಾವತಿಯನ್ನು ಮುದುವೆಯಾಗುವನು.

ಒಮ್ಮೆ ದೇವದಾನವರು ಅಮೃತಕ್ಕಾಗಿ ಸಮುದ್ರ ಮಥಿಸುತಿರಲು ಅಮೃತ ಉದಿಸಿರುವದನ್ನು ಕಂಡು ದಾನವರು ಸಂತೋಷಪಟ್ಟರು. ಆಗ ಶ್ರೀಹರಿಯು ಮೋಹಿನಿಯ ರೂಪವನ್ನು ಧರಿಸಿದನು. ದಾನವರೆಲ್ಲರೂ ಮೋಹಿನಿಯ ರೂಪವನ್ನು ನೋಡಿ ಬೆರಗಾದರು. ಶ್ರೀಹರಿಯು ದೇವತೆಗಳಿಗೆ ಮಾತ್ರ ಅಮೃತವನ್ನು ಬಡಿಸಿದನು. ಭಸ್ಮಾಸುರನು ಅತಿ ಕಠೋರ ತಪಸ್ಸನ್ನಾಚರಿಸಿ ಶಿವನಿಂದ ತಾನು ಯಾರ ತಲೆಯ ಮೇಲೆ ಕೈಯಿಟ್ಟರೂ ಅವರು ಸುಟ್ಟು ಭಸ್ಮವಾಗಬೇಕೆಂಬ ವರವನ್ನು ಪಡೆದುಕೊಳ್ಳುವನು. ಇದನ್ನು ಶಿವನ ಮೇಲೆ ಪ್ರಯೋಗ ಮಾಡಬೇಕೆಂದು ಭಸ್ಮಾಸುರನು ಬೆಂಬತ್ತಲು, ಶಿವನು ಶ್ರೀ ವಿಷ್ಣುವಿನ ಬಳಿ ಓಡಿಬಂದು ರಕ್ಷಿಸುವಂತೆ ಪ್ರಾರ್ಥಿಸಿಕೊಳ್ಳವನು. ಆಗ ಶ್ರೀ ಹರಿಯು ಮೋಹಿನಿಯ ರೂಪವನ್ನು ತಾಳಿ ಭಸ್ಮಾಸುರನನ್ನು ಆಕರ್ಷಿಸಿ ತನ್ನ ತಲೆಯ ಮೇಲೆ ತಾನೇ ಕೈ ಇಟ್ಟುಕೊಂಡು ಭಸ್ಮವಾಗುವಂತೆ ಮಾಡಿದನು. ಹೀಗೆ ಜೀವೂಬಾಯಿಯು (ಕೃಷ್ಣನ) ಹರಿಯ ವಿವಿಧ ಕಾರ್ಯಗಳನ್ನು ಹೊಗಳಿದ್ದಾಳೆ (ಕೀ ೪೬)

ಶ್ರೀ ಹರಿಯ ಮೋಹಿನಿಯ ರೂಪವನ್ನು "ಎಂತು ಶೋಭಿಸುತಿಹಳೋ ಈ ಕನ್ನಿಕೆ" (ಕೀ. ೬) ಎಂಬ ಕೀರ್ತನೆಯಲ್ಲಿ ತುಂಬ ಆಕರ್ಷಕವಾಗಿ ಚಿತ್ರಿಸಿದ್ದಾಳೆ. ಸಮುದ್ರ ಮಥನದಿಂದ ಉದ್ಭವಿಸಿದ ಅಮೃತವನ್ನು ಕಂಡು ದೇವತೆಗಳೆಲ್ಲರೂ ಸೇರಿ ಶ್ರೀ ಹರಿಯ ಬಳಿ ಬಂದು 'ಈ ಅಮೃತವು ರಾಕ್ಷಸರಿಗೆ ದೊರಕದಂತೆ ಮಾಡಬೇಕು' ಎಂದು ಕೇಳಿಕೊಳ್ಳುವರು. ಇದಕೊಪ್ಪಿದ ಶ್ರೀ ಹರಿಯ 'ಬಲು ಲೀಲೆಯಿಂದ ಈ ಅಮೃತವ ಬಡಿಸುವೆನೆಂದು' ರಾಕ್ಷಸರಿಗೆ ಸಾಲಾಗಿ ಕುಳಿತುಕೊಳ್ಳಲು ಹೇಳುವನು. ಕೈಯಲ್ಲಿ ಕನ್ನಡಿಯ ಹಿಡಿದು ನಿಲ್ಲಲು ಮೋಹಿನಿಯ ರೂಪ ಹೊಂದುವನು.

ಮಂಗಲಕರವಾದ ಅಂದಿಗೆ ಕಿರುಗೆಜ್ಜೆಗಳನ್ನು ಪಾದಗಳಿಗೆ ಹಾಕಿಕೊಂಡು ಬೆರಳಿಗೆ ಪಿಲ್ಲಿ, ಕಿರುಪಿಲ್ಲಿ, ಕಾಲುಂಗುರಗಳನ್ನು ಇಟ್ಟುಕೊಂಡು, ತೋಳಿಗೆ ತೋಳಬಂದಿ ಬಾಪುರಿ, ಕೈಗೆ ಚಂದದ ನಾಗಮುರಿಗೆ ತಾಯಿತ, ಸುಂದರವಾದ ಹಸ್ತ ಕಡಗ, ಬಳೆಗಳನ್ನು ಹಾಕಿಕೊಂಡು ರಂಭೆಯಂತೆ ಕಂಗೊಳಿಸುತಿಹಳು. ಅಪಾರ ಕಾಂತಿಯ ಪೀತಾಂಬರ, ಸರಿಗೆ, ಅಂಚಿನಕುಪ್ಪಸ, ನವರತ್ನಗಳಿಂದ ಕೂಡಿದ ನಡುಪಟ್ಟಿ, ಕೊರಳಿಗೊಪ್ಪುವ ಏಕಾವಳಿಸರ, ವಜ್ರದ ಪದಕಗಳು, ಗೆಜೆಟಿಕ್ಕೆ, ಕಂಠಿ, ಕಟ್ಟಾಣಿ, ಮುರಳಿ ಸರಗಳನ್ನು ಹಾಕಿಕೊಂಡು ಶೋಭಿಸುತ್ತಿದ್ದಳು. ಗಲ್ಲಕೆ ಹೊಳೆಯುವ ಅರಿಶಿಣ, ಕಿವಿಗೆ ಹೊಳೆಯುವ ಮೀನ್ ಬಾವುಲಿ, ಮುರುವು, ಬುಗುಡಿ, ಬಾವುಲಿ, ಮುಖರ, ನಾಶಿಕದಲ್ಲಿ ಬುಲಾಕು ಹಾಕಿಕೊಂಡು ಕಂಗೊಳಿಸುತ್ತಿರುವಳು. ಸಣ್ಣದಾದ ಬೈತಲೆ ಬಟ್ಟು, ಜಡೆ ಬಿಲ್ಲೆ ಗೊಂಡೆಗಳನ್ನು ಇಟ್ಟು, ಚೌರಿಯಂತೆ ಜಡೆಯನ್ನು ಬಿಟ್ಟುಕೊಂಡು ನಡುವನ್ನು ಬಳುಕಿಸುತ್ತ ಅಸುರರ ಚಿತ್ತ ಮತ್ತು ನೋಟವನ್ನು ಅಪಹರಿಸುತ್ತಾ ಕೈಯಲ್ಲಿ ಅಮೃತದ ಕಲಶವನ್ನು ಹಿಡಿದುಕೊಂಡು ಬಂದಳು.

> "ಕಂಗಳು ಮುಚ್ಚಿ ಕುಳಿತಿರಲು ದಾನವ ಪಂಕ್ತಿ
> ಮುಂದೆ ಕಾಲ್ಗೆಜ್ಜೆ ಧ್ವನಿಯ ಮಾಡುತ
> ಅಂದಿಗೆ ಸರಪಣಿ ನಾದ ತುಂಬಲು ಭರದಿ
> ಸುಂದರಿ ಬಂದಿಹಳೆಂದು ದಾನವರೆಲ್ಲ
> ಮಂದಹಾಸದಿ ಮೈಮರೆತು ಮ
> ತ್ತೊಂದು ತೋರದೆ ಕಳವಳಿಸುತಲಿರೆ
> ಇಂದಿರೇಶನು ದೇವತೆಗಳಿಗೆ
> ಪೊಂದಿಸಿದ ಅಮೃತವನು ಹರುಷದಿ"[೮೧]

ಇಂಥ ಮೋಹಿನಿಯ ಸೌಂದರ್ಯವನ್ನು ಕಂಡು ಅಸುರರಷ್ಟೇ ಅಲ್ಲ ಸ್ವತ: ಶಿವನೂ ಸಹ ಆ ರೂಪಕ್ಕೆ ಮೋಹಿತನಾಗುವನು.  ಅಂಥ ಸುರಸುಂದರಿಯನ್ನು ಶ್ರೀಹರಿಯ ಅವತಾರವೆಂಬಂತೆ ಜೀವಮ್ಮ

ಬಲು ಮೋಹಕವಾಗಿ ಚಿತ್ರಿಸಿ ವರ್ಣಿಸುವ ಮೂಲಕ ಹರಿಯನ್ನು ಕೀರ್ತಿಸಿರುವಳು. ಕೀರ್ತನೆ ೨೬ ರಲ್ಲಿಯೂ ಸಹ ಮೋಹಿನಿಯ ಅವತಾರವನ್ನು ವರ್ಣಿಸಿದ್ದಾಳೆ.

'ಬೆಳಗಾಯಿತು ಏಳಿ' ಕೀರ್ತನೆಯಲ್ಲಿ (ಕೀ ೩೧) ಶ್ರೀಹರಿಯನ್ನು ನಿದ್ರೆಯಿಂದ ಎಬ್ಬಿಸುವ ರೀತಿಯನ್ನು ತಿಳಿಸಿದ್ದಾಳೆ. ರಂಭೆ ಊರ್ವಶಿಯರು ನಾಟ್ಯವಾಡುತ್ತಿದ್ದಾರೆ. ಗಂಗೆ, ಗೋದಾವರಿ, ತುಂಗೆ, ಕೃಷ್ಣೆಯರು ಹಾಡುತ್ತಿರುವರು. ಸಪ್ತಋಷಿಗಳು ಬಹು ಭಕ್ತಿಯಲ್ಲಿ ಪಾಡುತಿಹರು. ಸನಕಾದಿನಾರದರೂ ಕೂಡ ಹರಿಯನ್ನು ಕೊಂಡಾಡುತ್ತಿದ್ದಾರೆ. ದುರ್ಗಾದೇವಿ, ಗಜರಾಜ, ಗೋಮಾತೆಯರು ನೋಡುತ್ತಾ ನಿಂತಿರುವರು. ಮದಗಜಗಮನೇರು ಕನ್ನಡಿಗಳನ್ನು ಹಿಡಿದು ನಿಂತಿಹರು. ಹರಿಯ ಶಯ್ಯಾಗೃಹದ ಮುತ್ತಿನ ಕದಗಳು ತೆರೆಯುವಾಗ ಬಗೆಬಗೆ ವಾದ್ಯಗಳು ಮೊಳಗಿದವು. ಲಕ್ಷ್ಮೀಸಮೇತ ಗಂಗಾಜನಕನ ಅಲಂಕಾರವನ್ನು ವೈಯ್ಯಾರವನ್ನು ನೋಡಲು ಸುಜನೆಲ್ಲರು ಕಾದುನಿಂತರು. ಹೀಗೆ ಜೀವಮ್ಮಳು ಶ್ರೀಹರಿಯನ್ನು ಭಕ್ತರು ಎಬ್ಬಿಸುವ ರೀತಿಯನ್ನು ಆಕರ್ಷಕವಾಗಿ ತಿಳಿಸಿದ್ದಾಳೆ.

ಶ್ರೀಹರಿಯು ಅರ್ಜುನ ಸಾರಥಿಯಾಗಿ ಪಾಂಡವರನ್ನು ರಕ್ಷಿಸಿದ್ದು, ದ್ರೌಪದಿಗೆ ಅಕ್ಷಯಾಂಬರ ನೀಡಿ ಮಾನ ಸಂರಕ್ಷಿಸಿದುದು, ದುಷ್ಟ ಕಂಸನನ್ನು ಕೊಂದದ್ದು, ಗಂಜೇಂದ್ರನನ್ನು ಕಾಪಾಡಿದ್ದು, ಪ್ರಹ್ಲಾದನಿಗೆ ದರ್ಶನ ನೀಡಿದ್ದು, ದ್ರುವನನ್ನು ಅಮರಗೊಳಿಸಿದ್ದು, ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದು, ವತ್ಸಾಸುರನನ್ನು ಕೊಂದದ್ದು, ಕಾಡ್ಗಿಚ್ಚನ್ನು ನುಂಗಿ ಗೋವು ಮತ್ತು ಗೋಪಾಲಕರನ್ನು ಸಂರಕ್ಷಣೆ ಮಾಡಿದ್ದು, ಬಾಯಲ್ಲಿ ಬ್ರಹ್ಮಾಂಡ ತೋರಿದ್ದು, ಕಾಳಿಂಗ ಮರ್ದನ ಸಂಗತಿ, ಖಾಂಡವನ ದಹನ ಪ್ರಸಂಗ, ಜೀವದ ಗೆಳೆಯ ಸುಧಾಮನಿಗೆ ಅಷ್ಟೈಶ್ವರ್ಯ ನೀಡಿದ್ದು, ಅಹಲ್ಯ ಉದ್ಧಾರ, ಶಭರಿಯ ಎಂಜಲು ಹಣ್ಣು ತಿಂದದ್ದು, ಮುಂತಾದವುಗಳು ಶ್ರೀಹರಿಯು ತನ್ನ ಭಕ್ತರನ್ನು ಉದ್ಧರಿಸಿದ ಸಂಗತಿಗಳನ್ನು ಜೀವಮ್ಮ 'ಏನು ಚ್ಯೋದ್ಯವೆಂದು' ಮನದುಂಬಿ ಕೊಂಡಾಡಿದ್ದಾಳೆ.

ಶ್ರೀಹರಿಯ ದಶಾವತಾರಗಳನ್ನು ಪ್ರತಿಯೊಂದು ಅವತಾರಗಳ ಸ್ವರೂಪ ಉದ್ದೇಶಗಳನ್ನು ಬಿಡಿಬಿಡಿಯಾಗಿ ಕೆಲವೊಮ್ಮೆ ಇಡಿಯಾಗಿ ಸ್ತುತಿಸಿದ್ದಾಳೆ. ಪ್ರತಿಯೊಂದು ಅವತಾರದಲ್ಲಿ ಭಕ್ತರನ್ನು ದುಷ್ಟ ಶಕ್ತಿಗಳಿಂದ ರಕ್ಷಿಸಿರುವ ವಿಷಯವನ್ನು ಕೀರ್ತಿಸಿದ್ದಾಳೆ. ಭಕ್ತರ ಮನೋಭಿಲಾಷೆಯನ್ನು ಪೂರೈಸಿದುದನ್ನು ಕೊಂಡಾಡಿದ್ದಾಳೆ. ದುಷ್ಟ ರಾಕ್ಷಸರ ಅಟ್ಟಹಾಸವನ್ನು ಉಪಾಯದಿಂದ ಅಡಗಿಸಿದ ತಂತ್ರಗಾರಿಕೆಯನ್ನು ಕೀರ್ತಿಸಿ ಧನ್ಯತೆ ಪಡೆದಿದ್ದಾಳೆ.

ಹೀಗೆ ಜೀವೂಬಾಯಿಯು ಕೃಷ್ಣನ ಬಾಲಲೀಲೆಗಳನ್ನು, ಶ್ರೀರಾಮ ಚರಿತ್ರೆ, ಹರಿಯ ಭಕ್ತೋದ್ಧಾರ, ತಿರುಪತಿಯ ವೆಂಕಟೇಶ, ಉಡುಪಿಯ ಶ್ರೀ ಕೃಷ್ಣ, ಹರಿಯ ವಿಚಿತ್ರ ಪವಾಡಗಳನ್ನು, ಮೋಹಿನಿಯ ರೂಪವನ್ನು ಅನನ್ಯ ಭಕ್ತಿಯಿಂದ ಸಂಕೀರ್ತಿಸಿ ಸಾರ್ಥಕತೆಯನ್ನು ಪಡೆದಿದ್ದಾಳೆ.

೪.೩. ಆತ್ಮ ನಿವೇದನೆ :-

ಲೀಲಾವತಿ ಎಸ್. ರಾವ್ ಅವರು ನಿಡಗುರಕಿ ಜೀವೂಬಾಯಿಯವರ ಕೀರ್ತನೆಗಳ ಸಂಗ್ರಹದಲ್ಲಿ ಇಪ್ಪತ್ತೊಂದು ಆತ್ಮ ನಿವೇದನೆಯ ವಿಷಯವನ್ನೊಳಗೊಂಡ ರಚನೆಗಳನ್ನು ಗುರುತಿಸಿದ್ದಾರೆ. ಆತ್ಮ ನಿವೇದನೆಯು ನವವಿಧ ಭಕ್ತಿಗಳಲ್ಲಿ ಒಂದು. ಭಕ್ತನು ಪರಮಾತ್ಮನಿಗೆ ತನ್ನ ನೋವುಗಳನ್ನು ನಿವೇದಿಸಿಕೊಳ್ಳವುದೇ ಆತ್ಮನಿವೇದನೆ. ತನ್ನನ್ನು ಸಂಪೂರ್ಣವಾಗಿ ಶ್ರೀಹರಿಗೆ ಅರ್ಪಣೆ ಮಾಡಿಕೊಳ್ಳವುದು ಇಲ್ಲಿ ಮುಖ್ಯ ವಿಷಯ.

ಸಂಸಾರದ ಬಂಧನದಲ್ಲಿ ಸಿಲುಕಿ ಹಲವು ರೀತಿಯ ತೊಂದರೆಗಳಿಗೆ ಸಿಕ್ಕಿಕೊಂಡು ಅದರಿಂದ ಹೊರಬರಲು ಪ್ರತಿಯೊಬ್ಬ ವ್ಯಕ್ತಿಯು ಪರಿತಪಿಸುತ್ತಿರುವನು. "ಜಗತ್ತು ಮಿಥ್ಯ ಪರಮಾತನೇ ಸತ್ಯ" ಎಂಬ ಸತ್ಯವನ್ನು ಅರಿತುಕೊಳ್ಳವನು. ತನಗೆ ಬಂದಿರುವ ತೊಂದರೆಗಳನ್ನು ಪರಮಾತ್ಮನನ್ನು ಹೊರತುಪಡಿಸಿ ಬೇರೆ ಯಾರಿಂದಲೂ ಪರಿಹರಿಸಲು ಸಾಧ್ಯವಿಲ್ಲ. ಎಂಬುದನ್ನು ಅರಿತುಕೊಂಡು ತನ್ನನ್ನು ಪೂರ್ಣವಾಗಿ ಪರಮಾತ್ಮನಿಗೆ ಅರ್ಪಿಸಿಕೊಳ್ಳವನು. ತಾನು ಅರಿಯದೆ ಮಾಡಿರುವ ತಪ್ಪುಗಳನ್ನು ಅಪಾರ ವಿಶ್ವಾಸ, ನಂಬಿಗೆಯಿಂದ, ಆತ್ಮೀಯತೆಯಿಂದ ಪರಮಾತ್ಮನ ಮುಂದೆ ಹೇಳಿಕೊಳ್ಳುವನು. ಇದನ್ನು ಮನ್ನಿಸಿ ನನ್ನನ್ನು ಕೃತಾರ್ಥನನ್ನಾಗಿಸಬೇಕೆಂಬ ಪ್ರಾರ್ಥನೆಯನ್ನು ಸಲ್ಲಿಸುವನು. ಇಂಥ ಆತ್ಮ ನಿವೇದನೆಯ ಅಂಶಗಳು ಹರಿದಾಸ ಪರಂಪರೆಯ ಎಲ್ಲ ದಾಸರ ರಚನೆಗಳಲ್ಲಿ ಕಂಡು ಬರುತ್ತದೆ. ಜೀವೂಬಾಯಿಯೂ ಸಹ ತನ್ನ ನೋವುಗಳನ್ನು ಶ್ರೀ ಹರಿಯ ಮುಂದೆ ವಿವಿಧ ರೀತಿಯಲ್ಲಿ ವಿಜ್ಞಾಪಿಸಿಕೊಂಡಿದ್ದಾಳೆ.

"ಅಪರಾಧ ಸಹಸ್ರಗಳ ಮಾಡುತನುದಿನದಿ
ಅಪರಿಮಿತ ನಿನ್ನನ್ನು ಸ್ಮರಿಸದೆ
ಚಪಲ ಬುದ್ಧಿಗಳಿಂದ ತಪಿಸಿದೆನೊ ಭವದೊಳಗೆ
ಗುಪಿತದಿಂ ಸಲಹಯ್ಯಾ ಪಿತನೆ ಕೈಮುಗಿವೆ"[೮೨]

ಈ ಕೀರ್ತನೆಯಲ್ಲಿ ಕೀರ್ತನಕಾರ್ತಿಯು 'ತಾನು ಸಹಸ್ರಾರು ತಪ್ಪುಗಳನ್ನು ತಿಳಿಯಲಾರದೆ ಮಾಡಿರುವೆ ಇದಕ್ಕೆ ಇಂದ್ರೀಯಗಳಿಗೊಳಗಾದ ಚಪಲ ಮನಸ್ಸು ಕಾರಣ. ಇಂಥ ಹರಿವ ಮನದ ಸೆಳೆತಕ್ಕೆ ಸಿಲುಕಿ ತಪ್ಪುಗಳನ್ನು ಮಾಡಿರುವೆ. ಗುಪಿತದಿಂದ ಈ ಎಲ್ಲ ನನ್ನ ಪ್ರಮಾದಗಳನ್ನು ಮನ್ನಿಸಿ ಕೃಪೆದೋರು ಎಂಬ ನಿವೇದನೆ ಇದೆ.

'ಜ್ಞಾನಿಗಳೊಡನಾಡಿ ಶ್ರೀನಿವಾಸನೆ ನಿನ್ನ
ನಾನಾ ಲೀಲೆಗಳ ಧ್ಯಾನಿಸಲಿಲ್ಲ ಹರಿಯೇ'[೮೩]

ಇಡೀ ಜೀವನದ ತುಂಬ ದುಷ್ಟರ, ಅಜ್ಞಾನಿಗಳ ಸಂಗದಲ್ಲಿ ಬೆಳೆದೆನು. ಒಂದು ಕ್ಷಣವೂ ಜ್ಞಾನಿಗಳ ಜೊತೆಗೂಡಿ ನಿನ್ನ ನಾಮಸ್ಮರಣೆಯನ್ನು ಮಾಡಲಿಲ್ಲ. ಸಂಸಾರ ಸುಖದ ಬೆಂಬ್ಹತ್ತಿ ಪರಮಾತ್ಮನ ಧ್ಯಾನವನ್ನು ತೊರೆದು ಬದುಕಿದೆ. ಆದ್ದರಿಂದ ಇನ್ನಾದರೂ ಸುಜ್ಞಾನಿಗಳ, ಸತ್ಯವಂತರ, ಸಾಧುಸಂತರ ಒಡನಾಟವನ್ನು ಕರುಣಿಸಿ ನನ್ನ ಮನದಲ್ಲಿರುವ ಅಜ್ಞಾನವನ್ನು ತೊಡೆದು ಹಾಕಿ ಬದುಕನ್ನು ಹಸನಾಗಿಸುವಂತೆ ಕೇಳಿಕೊಳ್ಳುವಳು. ಜ್ಞಾನಿಗಳ ಸಂಘವನ್ನು ಸೇರಬೇಕೆಂಬ ಅಪಾರವಾದ ಹಂಬಲವನ್ನು ಜೀವಮ್ಮ ವ್ಯಕ್ತಪಡಿಸಿರುವಳು.

"ಕರೆ ಕರೆ ಭವದೊಳು ಮುಳುಗಿರುವೆ
ದುರಿತದೂರನೆ ದು:ಖ ತರ ತರ ವ್ಯಥೆಯಲಿ
ನಾನು ನನ್ನದು ಎಂಬ ಹೀನವೃತ್ತಿಗಳಿಂದ
ಹಾನಿಯಾಯಿತು ಆಯು ಶ್ರೀನಿಧಿಯೆ
ಜ್ಞಾನಿಗಳೊಡನಾಡಿ ಮೌನದಿಂದಿರದಲೆ
ಶ್ವಾನಸೂಕರನಂತೆ ತಿರುಗಿ ಬಾಯ್ಬಿಡುತಲಿ"[೮೪]

ಈ ಸಂಸಾರದ ಸಾಗರದಾಳದಲ್ಲಿ ಮುಳುಗಿದರೆ ಅಪಾರವಾದ ದು:ಖ-ದುಮ್ಮಾನಗಳನ್ನು ಅನುಭವಿಸ ಬೇಕಾಗುತ್ತದೆ. ಇಂಥ ದು:ಖ-ದುಮ್ಮಾನವನ್ನು ತಾವಾಗಿಯೇ ತಂದು ಕೊಂಡದ್ದು. 'ತೆರಣಿಯಹುಳ ತನ್ನ ಬಾಯಿಯ ನೂಲಿನಿಂದ ತನ್ನನೇ ಬಂಧಿಸಿಕೊಳ್ಳುವಂತೆ' ಈ ಸ್ಥಿತಿ. ನಾನು ನನ್ನದು ಎಂಬ ಸ್ವಾರ್ಥಮನೋಭಾವ, ಪ್ರತಿಯೊಂದು ನನಗೆ ದೊರೆಯಬೇಕು, ನನ್ನದಾಗಬೇಕೆಂಬ ಮನೋಭಾವ ಬೆಳೆಯಲು, ಮನುಷ್ಯ ಅವುಗಳಿಂದ ದೂರಾದಾಗ ದು:ಖತಪ್ತನಾಗುವನು. ಮನಸ್ಸಿನಲ್ಲಿ ಹೀನಪ್ರವೃತ್ತಿಗಳನ್ನು ತಂದುಕೊಂಡು ಇಡೀ ಜೀವನವನ್ನು ಹಾಳುಮಾಡಿಕೊಳ್ಳುತ್ತಿರುವೆವು. ಮನದ ಅಲ್ಪತನವನ್ನು ಕಳೆದುಕೊಳ್ಳಬೇಕಾದರೆ ಜ್ಞಾನಿಗಳ ಒಡನಾಟವೇ ದಿವ್ಯ ಔಷಧಿ. "ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಢಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ" ಎಂದು ದಾಸಿಮಯ್ಯ ಹೇಳಿರುವನು. ಜ್ಞಾನಿಗಳ ಜೊತೆಯಲ್ಲಿ ಯಾವಾಗಲೂ ಮೌನವಾಗಿರಬೇಕು. ಅವರ ಸಂಘದಲ್ಲಿದ್ದು ಗೊತ್ತು ಗುರಿಯಿಲ್ಲದೆ ಮಾತನಾಡಬಾರದು. ಆದರೆ ಜೀವಮ್ಮ ತನ್ನನ್ನು 'ನಾಯಿಹಂದಿಗಳಂತೆ' ಎಂದು ಸಂಬೋಧಿಸಿಕೊಂಡು ಎಲ್ಲೆಡೆಗೆ ಬೊಗಳುತ್ತಾ ತಿರುತಿರುಗಿ ನೊಂದಿದ್ದೇನೆಂದು ಭವಜೀವನದ ಸ್ಥಿತಿಯನ್ನು ಶ್ರೀಹರಿಗೆ ಹೇಳುತ್ತಾ ಪಾಶ್ಚಾತಾಪ ಪಡುತ್ತಾಳೆ.

"ಜನುಮ ಜನುಮದಲಿ ಜನಿಸಿ ಬರುವ ದು:ಖ
ಕೊಣೆಗಾಣದಾಗಿದೆ ಕರುಣಾದಿ"[೮೫]

ಜನನ ಮರಣದ ಸುಳಿಯಲ್ಲಿ ಸಿಕ್ಕು ವಿವಿಧ ಜನುಮದಲ್ಲಿ ಬರುವ ಈ ದು:ಖದಿಂದ ಹೇಗೆ ಪಾರಾಗಬೇಕೆಂಬುದು ತಿಳಿಯದಾಗಿದೆ. ಆದ್ದರಿಂದ ನೀನು ನನಗೆ ಭವ ದು:ಖದಿಂದ ಶಾಶ್ವತವಾಗಿ ದೂರಾಗುವ ದಾರಿಯನ್ನು ಕರುಣಿಸುವಂತೆ ಭಗವಂತನಲ್ಲಿ ಮೊರೆ ಇಡುತ್ತಾಳೆ.

> "ದಾನಧರ್ಮವ ಮಾಡಬೇಕೆಂದು ಮನವಿದೆ
> ದಾನವಾಂತಕ ಕೃಷ್ಣ ಧನವಿಲ್ಲವಯ್ಯ
> . . . . . . . . . . . . . . . . . . . . .
> ತೀರ್ಥಯಾತ್ರೆಗಳಿಂದ ಪಾರ್ಥಸಾರಥಿ ಕೃಷ್ಣ
> ಮೂರ್ತಿ ಸೇವಿಸಲಸಮರ್ಥನಾಗಿರುವೆ"[೮೬]

ಇಲ್ಲಿ ಜೀವಮ್ಮಳು ತನ್ನ ವಾಸ್ತವಿಕ ಸ್ಥಿತಿಯನ್ನು ಹರಿಯಲ್ಲಿ ಬಿನ್ನಹಿಸಿಕೊಂಡಿದ್ದಾಳೆ. ದಾನ ಧರ್ಮಗಳನ್ನು ಮಾಡಬೇಕೆಂಬ ಅತಿಯಾದ ಆಶೆ ಮನಸ್ಸಿನಲ್ಲಿ ತುಂಬಿಕೊಂಡಿದೆ, ಆದರೆ ನನ್ನಲ್ಲಿ ಒಂದಿಷ್ಟು ಧನವಿಲ್ಲ. ವಿವಿಧ ಪುಣ್ಯಕ್ಷೇತ್ರಗಳನ್ನು ದರ್ಶಿಸಿ ಶ್ರೀಹರಿಯನ್ನು ಕಂಡು ಧನ್ಯಳಾಗಬೇಕೆಂಬ ಅಪಾರ ಹಂಬಲ ಮನದೊಳಗೆ ತುಂಬಿದೆ, ಆದರೆ ತೀರ್ಥಯಾತ್ರೆ ಮಾಡಲು ಸಾಮರ್ಥ್ಯವಿಲ್ಲದಾಗಿದೆ. ಇಂಥ ಅಸಹಾಯಕ ಸ್ಥಿತಿಯ ಬಗ್ಗೆ ಜೀವಮ್ಮ ಭಗವಂತನಲ್ಲಿ ತೋಡಿಕೊಂಡಿರುವಳು. ಹಣವಿದ್ದಾಗಲೇ ಭಕ್ತಿಯನ್ನು, ದಾನಧರ್ಮವನ್ನು ಮಾಡಬೇಕು. ಶಕ್ತಿ ಇದ್ದಾಗಲೇ ತೀರ್ಥಯಾತ್ರೆಯನ್ನು ಮಾಡಿ ಭಗವಂತನ ಕಂಡು ಪುಣ್ಯಸಂಪಾದಿಸಿ ಕೊಳ್ಳಬೇಕೆಂಬುದನ್ನು ಈ ಮೂಲಕ ಜೀವಮ್ಮ ಪರೋಕ್ಷವಾಗಿ ಹೇಳಿರುವಳು.

> "ದಯದಿ ವರಗಳ ನೀಡು ಮಮಸ್ವಾಮಿ ಸರ್ವಾಂತರಯಾಮಿ
> ನಯದಿ ಬೇಡುವೆ ಭಕುತಜನ ಪ್ರೇಮಿ ಮಮ ಸರ್ವಸ್ವಾಮಿ
>
> ಸವಿನಯದಿ ಪ್ರಾರ್ಥಿಸುತ ಬೇಡುವೆ
> ಸುಮನರಸರ ಪ್ರೀಯ ಚಿತ್ಸುಖಪ್ರದ
> ಅಮಿತ ವಿಕ್ರಮ ಅಪ್ರಮೆಯನೇ
> ರಮೆಯ ರಮಣನೆ ರಕ್ಷಿಸೆನ್ನನು"[೮೭]

ಈ ಜನುಮದಲಿ ಬಂದೊದಗಿದ ದು:ಖಗಳು ದೂರಾಗುವಂತೆ ವರಗಳನ್ನು ದಯಪಾಲಿಸು. ಅತೀ ವಿನಯದಿಂದ ನಿನ್ನಲಿ ಬೇಡುತ್ತಿರುವೆ ನನ್ನನ್ನು ಬಿಡದೆ ರಕ್ಷಿಸೆನುತ ಪ್ರಾರ್ಥಿಸಿರುವಳು. ಹೀಗೆ ಎಷ್ಟೇ ವಿನಯತೆಯಿಂದ ಕೇಳಿಕೊಂಡರೂ ಹರಿ ವರಗಳನ್ನು ಕರುಣಿಸದಿರಲು

"ದಾಸರ ಮೊರೆ ಲಾಲಿಸು ವೆಂಕಟಾಚಲ
ವಾಸ ಬಿನ್ನಪ ಲಾಲಿಸು

ಲೇಸು ಭಕುತಿಯ ಮಾಡದಲೆ ಬಲು
ಘಾಸಿಯಾಗುತ ಮನದಿನೊಂದು
ದಾಸನಾಗದೆ ಕ್ಲೇಷ ಪಟ್ಟೆನೋ
ಈಸು ದಿನಗಳ ಕಳೆದೆನು ವೃಥಾ"[೮೮]

ಇಲ್ಲಿ ಜೀವಮ್ಮ ಹರಿಯನ್ನು ತನ್ನ ದೀನವಾದ ಮೊರೆಯನ್ನು ಕೇಳುವಂತೆ ಒತ್ತಾಯಿಸುತ್ತಾಳೆ. ಇಷ್ಟು ದಿನ ತಾನು ಸರಿಯಾಗಿ ಭಕ್ತಿಯನ್ನು ಮಾಡದೆ ಬದುಕಿನಲ್ಲಿ ಬಹಳಷ್ಟು ನೋವನುಂಡಿದ್ದೇನೆ; ಮನ ನೊಂದಿದ್ದೇನೆ. ನಿನ್ನ ದಾಸನಾಗದೆ, ಅರ್ಪಿಸಿಕೊಳ್ಳದೆ, ಸೇವೆ ಗೈಯ್ಯದೆ ಸುಮ್ಮನೆ ಸಮಯವನ್ನು ಕಳೆದಿರುವೆ. ವೆಂಕಟಾಚಲನೇ ತನ್ನ ಮೇಲೆ ಕೃಪೆದೋರಿ ಕಾಪಾಡು ಎಂದು ಅತೀ ವಿಶ್ವಾಸದಿಂದ ಸಹಾಯ ಯಾಚಿಸಿರುವಳು.

"ಧನ್ವಂತ್ರಿ ನಿನ್ನ ಸ್ಮರಿಸಿ ಧನ್ಯರಾಗಿಹರ
ಧ್ಯಾನದೊಳಿರಿಸೆನ್ನ ಧನ್ಯನೆಂದೆನಿಸೋ
ನಿನ್ನ ಪಾದದ ಸ್ಮರಣೆಯನ್ನು ಮಾಳ್ಪರ ಸಂಗ
ಇನ್ನು ಪಾಲಿಸು ದೇವನೆ"[೮೯]

ಇಲ್ಲಿಯವರೆಗೆ ತಿಳಿಯದೆ ನಿನ್ನನ್ನು ತೊರೆದು ಜೀವಿಸಿದ್ದೇನೆ. ಇನ್ನು ಮುಂದೆ ಸದಾ ನಿನ್ನ ಧ್ಯಾನದಲ್ಲಿರುವಂತೆ ಅನುಗ್ರಹಿಸು. ನಿನ್ನ ಪಾದಸೇವೆಯನ್ನು ಅತೀ ಶ್ರದ್ಧೆಯಿಂದ ಮಾಡುವ ದಾಸರ ಸಂಗವನ್ನು ಎನಗೆ ದಯಪಾಲಿಸು. ನಾನೂ ಸಹ ನಿನ್ನ ದಾಸಳಾಗಿ ಬದುಕು ಸಾರ್ಥಕಗೊಳಿಸಿಕೊಳ್ಳುತ್ತೇನೆಂಬ ಹಂಬಲ ವ್ಯಕ್ತಪಡಿಸಿದ್ದಾಳೆ.

"ನಿನ್ನ ದಾಸರ ಕೀರ್ತಿ ನಿನ್ನ ದಾಸರ ವಾರ್ತೆ
ನಿನ್ನ ನಾಮಾಮೃತವು ಎನ್ನ ಕಿವಿ ತುಂಬಿರಲಿ"[೯೦]

ಬದುಕಿನ ಎಲ್ಲ ಜಂಜಡಗಳನ್ನು ಮೀರಿ ಹರಿಯ ಸೇರಬೇಕೆಂಬ ತುಡಿತ ಜೀವಮ್ಮನಲ್ಲಿ ಅತಿಯಾಗಿದೆ. ಎಂದೆಂದಿಗೂ ನನ್ನ ಕಿವಿಯೊಳಗೆ ನಿಮ್ಮ ಸುವಾರ್ತೆಯು ಕೇಳುತಿರಲಿ, ನನ್ನ ನಾಲಗೆಯು ಹರಿನಾಮವನ್ನೇ ನುಡಿಯುವಂತಾಗಲಿ ಎಂದು ಹೇಳುವ ಮೂಲಕ ತನ್ನ ಎಲ್ಲ ಕ್ರಿಯೆಗಳಲ್ಲಿ ಭಗವಂತನೇ ತುಂಬಿರಲಿ ಎಂದಿರುವಳು.

"ಸ್ನಾನ ಜಪತಪವ ನೇಮಗಳ ಬಿಟ್ಟೆ
ಮೌನವನು ಬಿಟ್ಟೆ ದಾನಧರ್ಮವ ಕೊಡದೆ ಕೈಬಿಟ್ಟೆ
ಶ್ರೀನಿವಾಸನ ಪೂಜೆ ನೇಮ ನಿಷ್ಠೆ ಮಾಡದಲೆ ಬಿಟ್ಟೆ
ಶ್ವಾನ ಸೂಕನಂತೆ ಹೊರೆದೆ ಹೊಟ್ಟೆ
ಏನ ಪೇಳಲಿ ಪರರ ದ್ರವ್ಯಪಹರಿಸುತಿಹ
ಹೀನ ಜನರ ಸಂಗ ಮಾಡಿ ಬಳಲಿ ಬರಿದೆ"[೧]

ಮನದೊಳಗೆ ತುಂಬಿದ ಅಜ್ಞಾನದಿಂದ ವ್ರತ-ನಿಯಮಗಳನ್ನು ಬಿಟ್ಟು ವ್ರತವಿಹೀನಳಾಗಿ ಬದುಕು ಮಾಡಿರುವೆ. ದಾನಧರ್ಮವನ್ನು ಮಾಡದೆ ಅಧರ್ಮ ಮಾರ್ಗದಲ್ಲಿ ಕ್ರಮಿಸಿದೆ. ಸರ್ವೋತ್ತಮನಾದ ಹರಿಯನ್ನು ಮನಮುಟ್ಟಿ ಪೂಜಿಸದೆ ವ್ಯರ್ಥ ಕಾಲಕಳೆದೆ. 'ನಾಯಿ ಹಂದಿಗಳ ಹಾಗೆ ಹೊಟ್ಟೆಯನ್ನು ತುಂಬಿಕೊಳ್ಳುವುದೆ ಜೀವನ' ವೆಂದು ಅರಿತುಕೊಂಡು ಉದರ ಪೋಷಣೆಗಾಗಿ ಮಾಡಬಾರದ ಕಾರ್ಯಗಳನ್ನು ಮಾಡಿರುವೆ. ಮತ್ತೊಬ್ಬರ ಹಣವನ್ನು ಅಪಹರಿಸಿ ವಾಮ ಮಾರ್ಗದಿಂದ ಹಣ ಸಂಪತ್ತು ಗಳಿಸುವ ಕರ್ಮದಲ್ಲಿ ನಿರತನಾಗಿದ್ದೆ. ಇದಕ್ಕೆಲ್ಲ ಕಾರಣ ಅಲ್ಪಮತಿಗಳ ಸಂಗವೆಂದು ಜೀವಮ್ಮ ಹೇಳಿರುವಳು. ಒಬ್ಬ ವ್ಯಕ್ತಿಯು ಕೆಡಲು ಸಂಗವೇ ಕಾರಣ. ಶ್ರೇಷ್ಠನಾಗಲೂ ಸಂಗವೇ ಕಾರಣ. ಹೀನ ವ್ಯಕ್ತಿಗಳ ಸಂಘದಿಂದ ಕೆಳಮಟ್ಟಕ್ಕಿಳಿದರೆ; ವ್ಯಕ್ತಿಯು ಮಹಾವ್ಯಕ್ತಿಗಳ ಸಂಘದಿಂದ ಉನ್ನತ ಮಟ್ಟಕ್ಕೇರುತ್ತಾನೆ ಎಂಬ ಸತ್ಯವನ್ನು ಈ ಕೀರ್ತನೆಯಲ್ಲಿ ಒಡಮೂಡಿಸಿರುವಳು. ಮಾನವ ಜೀವನವು ನಾಯಿ ಹಂದಿಗಳ ಹಾಗೆ ಅಲ್ಲ. ಎಲ್ಲ ಜನ್ಮಗಳಿಗಿಂತಲೂ ನರಜನ್ಮವು ಉನ್ನತವಾದುದು ಎಂದರಿತುಕೊಂಡಿರುವಳು.

"ನಾನಾ ಯೋನಿಗಳಲ್ಲಿ ಜನಿಸಿ ಪದ್ಮನಾಭ
ನಾನಾ ಕ್ಲೇಷಗಳಿಂದ ಬಳಲಿ ಪದ್ಮನಾಭ
ನಾ ನಿನ್ನನು ಸ್ಮರಿಸದ್ಹೋದೆ ಪದ್ಮನಾಭ
ನಾನೆಂಬ ದುರ್ಮತಿಯ ಬಿಡಿಸೋ ಪದ್ಮನಾಭ"[೨]

ಕೇವಲ ಮಾನವಜನ್ಮ ಒಂದೆ ಅಲ್ಲ. ಎಂಭತ್ನಾಲ್ಕು ಲಕ್ಷ ಜೀವರಾಶಿಗಳಿಲ್ಲಿ ಹುಟ್ಟಿ ಹುಟ್ಟಿ, ಸತ್ತು ಸತ್ತು ಹಲವು ತೊಂದರೆಗೆ ಸಿಲುಕಿಕೊಂಡು ಬಳಲಿ ಬೆಂದಿರುವೆ. ಇದಕ್ಕೆ ಕಾರಣ ಹರಿಸ್ಮರಣೆ ಮಾಡದಿರುವುದು. ಮಾನವನಲ್ಲಿ ಎಲ್ಲಿಯವರೆಗೆ 'ನಾ(ಅಹಂ)' ಎಂಬ ಭಾವವಿರುತ್ತದೆಯೋ ಅಲ್ಲಿಯವರೆಗೆ ಆತನ ಉನ್ನತಿಯಾಗದು. ದೇವನನ್ನು ಆರಾಧಿಸಲು 'ನಾ' ಎಂಬುದು ತೊಂದರೆಯನ್ನುಂಟು ಮಾಡುತ್ತದೆ. ತನ್ನೊಳಗೆ ತುಂಬಿರುವ ಈ 'ಅಹಂ' ಭಾವವನ್ನು ಸುಟ್ಟು, ತುಂಬಿರುವ ದುರ್ಮತಿಯನ್ನು ತೊಡೆದು ಹಾಕು ಎಂಬ ಬೇಡಿಕೆಯನ್ನು ಹರಿಯಲ್ಲಿ ನಿವೇದಿಸಿಕೊಳ್ಳುವಳು. ಕನಕದಾಸರೂ ಸಹ 'ನಾ' ಎಂಬುದನ್ನು

ವಿರೋಧಿಸಿದ್ದಾರೆ. ಶರಣರೂ ಸಹ 'ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ' ಎಂದು ಶಿವನಲ್ಲಿ ಕೇಳಿಕೊಂಡಿರುವರು. ಎಲ್ಲಿಯವರೆಗೆ ನಮ್ಮಲ್ಲಿ 'ನಾ' ಇರುತ್ತದೆಯೋ ಅಲ್ಲಿಯವರೆಗೆ ನಮ್ಮಿಂದ ಯಾವುದೇ ಕಾರ್ಯವು ಆಗುವುದಿಲ್ಲ.

"ಜ್ಞಾನ ಶೂನ್ಯನಾಗಿ ನಾನಾ ವಿಷಯಗಳಲ್ಲಿ
ನಾನು ನನ್ನದೆಂಬ ಹೀನ ಮಮತೆಯಿಂದ
ದಾನವಾರಿ ನಿನ್ನ ಧ್ಯಾನಿಸದಲೆ ಕಾಲ
ಸಾನುರಾಗದಿಂದ ಶ್ವಾನನಂತೆ ಕಳೆದೆ"[೩]

'ನಾ' ಎಂಬ 'ಅಹಂ' ಉಂಟಾಗಲು ಒಂದೆಡೆಗೆ ಸೊಕ್ಕು, ಮತ್ತೊಂದೆಡೆಗೆ ಜ್ಞಾನ ಶೂನ್ಯತೆಯೇ ಕಾರಣ. ಇದರಿಂದ ಮನಸ್ಸು ಬೇರೆ ಬೇರೆ ವಿಚಾರಗಳತ್ತ ಚಲಿಸುತ್ತದೆ. ಮನೋವಿಕಾರಕ್ಕೆ ಒಳಗಾದ ಮನುಷ್ಯನು ನ್ಯಾಯ, ನೀತಿ, ಸತ್ಯ ಧರ್ಮಗಳೆಂಬ ಮಾನವೀಯ ಮೌಲ್ಯಗಳನ್ನು ತೊರೆದು ತದ್ವಿರುದ್ಧವಾಗಿ ಚಲಿಸಲಾರಂಭಿಸುತ್ತಾನೆ. ತಪ್ಪಿಸಿಕೊಂಡ ಮೂಲ ದಾರಿಗೆ ಪುನ: ಬರಬೇಕಾದರೆ ಹರಿಸ್ಮರಣೆಯೇ ಪರಮ ಸಾಧನ. ಇಂಥ ದಿವ್ಯವಾದ ಸಾಧನವನ್ನು ಅನುಗ್ರಹಿಸುವಂತೆ, ತನ್ನಲ್ಲಿರುವ ಅಜ್ಞಾನವನ್ನು ಪರಿಹರಿಸುವ ಹಾಗೆ ಪನ್ನಗೇಂದ್ರಶಯನನಲ್ಲಿ ಜೀವಮ್ಮ ನಿವೇದಿಸಿಕೊಳ್ಳುವ ರೀತಿ ವಿಶಿಷ್ಟವಾಗಿದೆ. ಮನದಿಚ್ಛೆಯಲ್ಲಿ ಮಗ್ನನಾಗಿ ಬದುಕುವುದು ನಾಯಿಯ ಬಾಳು. ಇಂಥ ಬಾಳು ಅರ್ಥಹೀನವಾದುದು. ವ್ಯಕ್ತಿ 'ಅಹಂ' ನ್ನು ಬಿಟ್ಟು ಪರಮಾತ್ಮನ ಪಾದಕ್ಕೆರಗಿದರೆ ಆತ ಖಂಡಿತ ಬಿಡದೆ ರಕ್ಷಿಸುವನೆಂಬ ನಂಬಿಕೆ, ಭರವಸೆ ಜೀವಮ್ಮಳ ಕೀರ್ತನೆಯಲ್ಲಿ ಕಾಣುತ್ತದೆ.

"ಯಾಕೆ ಕರುಣೆ ಬಾರದ್ಹರಿಯೆ
ಲೋಕನಾಯಕ ನಿನಗೆ ಸರಿಯೆ
ವ್ಯಾಕುಲದಲಿ ಮುಳುಗಿ ಬಹಳ
ಶೋಕಪಡುವ ಜನರ ಕಂಡು"[೪]

ಇಷ್ಟೆಲ್ಲ ಜನರು ತೊಂದರೆಯಲ್ಲಿ ಸಿಲುಕಿ ವೇದನೆಯನ್ನು ಪಡುತ್ತಿರುವಾಗ ನಿನಗೇಕೆ ಒಂದಿಷ್ಟು ಕರುಣೆ ಬರುತ್ತಿಲ್ಲವೆಂದು ಜೀವಮ್ಮ ಲೋಕನಾಯಕನನ್ನು ಪ್ರಶ್ನಿಸಿದ್ದಾಳೆ. ತಾಯಿಗೆ ಮಗು ಅಳುವಾಗ ಅದನ್ನು ನೋಡಿ ಸುಮ್ಮನೆ ಕುಳಿತುಕೊಳ್ಳಲು ಆಗುವುದಿಲ್ಲ. 'ಜಗತ್ತಿನಲ್ಲಿ ಕೆಟ್ಟ ಮಕ್ಕಳಿರಬಹುದು; ಕೆಟ್ಟ ತಾಯಿಯಿರಲು ಸಾಧ್ಯವಿಲ್ಲ' ಅಂತೆಯೆ ಈ ಜಗದಲ್ಲಿ ಕೆಟ್ಟ ಜನರಿರಬಹುದು. 'ದುಷ್ಟ ದೇವರಿರಲು ಸಾಧ್ಯವಿಲ್ಲ' ಭಕ್ತರು ಏನೆ ತಪ್ಪು ಮಾಡಿದರು ತಾಯಿ ತನ್ನ ಮಗುವನ್ನು ತಪ್ಪು ಮನ್ನಿಸಿ ಮುದ್ದಾಡುವಂತೆ ದೇವರು ಭಕ್ತರ ತಪ್ಪುಗಳನ್ನೆಲ್ಲ ಮರೆತು ಕೃಪೆದೋರಬೇಕೆಂಬುದು ಜೀವಮ್ಮಳ ಅಭಿಮತ. ಇಷ್ಟಕ್ಕೆ ಜೀವಮ್ಮ ಸುಮ್ಮನಾಗದೆ

“ಯಾಕೆ ನಿರ್ದಯನಾದೆ ಲೋಕೇಶ ಪ್ರಭುವೆ
ಸಾಕಲಾರದೆ ಎನ್ನ ನೂಕಿ ಭವದೊಳು”[೫]

ಹೀಗೆ ಬಲು ಕಠೋರವಾಗಿ ಹರಿಯ ನಿಲುವನ್ನು ಪ್ರಶ್ನಿಸಿದ್ದಾಳೆ. ನಿನಗೆ ನನ್ನನ್ನು ಸಾಕಲು ಸಂರಕ್ಷಿಸಲು ಆಗದಿದ್ದರೆ ಈ ಭವಕ್ಕೆ ನನ್ನನ್ನು ಏಕೆ ಕಳಿಸಿರುವೆ. ಕಳಿಸಿದ ಮೇಲೆ ಸಾಕಿ ಸಂರಕ್ಷಿಸಬೇಕಾದುದು ನಿನ್ನ ಧರ್ಮ. ಭಕ್ತರ ಮೇಲೆ ಇಷ್ಟೊಂದು ನಿರ್ದಯಿಯಾಗಿರುವುದು ‘ದಯಾಸಿಂಧು’ ಎಂಬ ನಿನ್ನ ಹೆಸರಿಗೆ ತಕ್ಕುದಾದುದಲ್ಲ. ಹೀಗೆ ಕಠೋರ ನುಡಿಗಳ ಮೂಲಕ ಹರಿಯ ಕಾರ್ಯವನ್ನು ನೆನಪಿಸಿ ಆತನನ್ನು ಜಾಗೃತಗೊಳಿಸುವಳು.

“ತಂದೆ ತಾಯಿ ಬಂಧು ನೀನೆ ಪದ್ಮನಾಭ ನಿನ್ನ
ನಂಬಿದ ಭಕ್ತರೊಳಿರಿಸಿ ಪದ್ಮನಾಭ
ಅಂಬುಜಾಕ್ಷ ಸಲಹಬೇಕೋ ಪದ್ಮನಾಭ ಪೀ
ತಾಂಬರ ಧಾರಿಯೆ ಸಲಹೋ ಪದ್ಮನಾಭ”[೬]

ಎನಗೆ ನೀನೆ ಸರ್ವಸ್ವ, ತಂದೆಯೂ ನೀನೆ, ತಾಯಿಯೂ ನೀನೆ, ಎನ್ನ ಬಂಧು ಬಳಗವೆಲ್ಲವೂ ನೀನೆ ನಿನ್ನನ್ನು ಬಿಟ್ಟರೆ ನನಗೆ ಬೇರೆ ಯಾರೂ ಇಲ್ಲ. ಶ್ರೀಹರಿಯೇ ತನ್ನ ಪರಮ ಬಂಧು ಎಂದು ಪೂರ್ಣವಾಗಿ ನಂಬುವಳು. ಇಹದ ಬಂಧು ಬಾಂಧವರು ಶಾಶ್ವತರಲ್ಲ. ಪರಮ ಬಂಧುವೆನಿಸಿದೆ ಹರಿಯೇ ಜಗದ ಜನಕೆ ಸರ್ವಸ್ವ

“ತಂದೆ ತಾಯಿ ಬಂಧು ಬಳಗ
ಇಂದು ಮುಂದು ಗತಿನೀನೆಂದು”[೭]

ತನ್ನನ್ನು ಶ್ರೀಹರಿಗೆ ಸಮರ್ಪಿಸುವಳು. ಈ ಮೂಲಕ ಯಾರು ಬದುಕಿನಲ್ಲಿ ಶ್ರೀಹರಿಯನ್ನು ಧ್ಯಾನಿಸದೆ ‘ನಾನು’ ಎಂಬ ಅಹಂಕಾರದಲ್ಲಿ ಮುಳುಗಿರುವರೋ ಅಂತಹವರನ್ನು ಪರಮಾತ್ಮನು ಒಪ್ಪಿಕೊಳ್ಳಲಾರನು. ದಾನ, ಧರ್ಮ, ಧ್ಯಾನ, ಸ್ಮರಣೆ, ವ್ರತ, ನಿಷ್ಠೆಗಳನ್ನು ಹೊಂದಿ ಸದಾಕಾಲ ಹರಿಯ ಸೇವೆಯಲ್ಲಿ ತನ್ಮಯರಾದವರನ್ನು ಪರಮಾತ್ಮನು ಒಪ್ಪಿಕೊಳ್ಳವನು. ಭಕ್ತನು ಹರಿಯೇ ತನ್ನ ಸರ್ವಸ್ವ, ಅವನ್ನು ಬಿಟ್ಟರೆ ಬೇರೆ ಯಾರೂ ನಮ್ಮನ್ನು ರಕ್ಷಿಸಲಾರರು ಎಂದು ತಿಳಿದುಕೊಳ್ಳವಂತೆ ತಿಳಿಸಿರುವಳು.

ಒಂದು ದಿನದ ಹರಿ ಪೂಜೆಯಿಂದ ವೈಕುಂಠಕ್ಕೆ ಹೋದ ರಾಜಶೇಖರನ ಕಥೆ, ಗಜೇಂದ್ರ, ಪ್ರಹ್ಲಾದ, ರಾಮಾಯಣ, ಮಹಾಭಾರತದ ಸಂದರ್ಭಗಳ ಮೂಲಕ ಜೀವಮ್ಮ ಆತ್ಮನಿವೇದನೆಯನ್ನು ಮಾಡಿಕೊಂಡಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

### ೪.೪. ದಶಾವತಾರ

ಹರಿದಾಸ ಪರಂಪರೆಯ ಎಲ್ಲ ದಾಸರೂ ತಮ್ಮ ಕೃತಿಗಳಲ್ಲಿ ಶ್ರೀಹರಿಯ ದಶಾವತಾರಗಳನ್ನು ಬಹು ವರ್ಣನಾತ್ಮಕವಾಗಿ ಪ್ರಸ್ತಾಪಿಸಿದ್ದಾರೆ. ಜೀವಮ್ಮಳು ಕೂಡ ಎಲ್ಲ ದಾಸರ ಹಾಗೆ ವಿಷ್ಣುವಿನ ಹತ್ತು ಅವತಾರಗಳನ್ನು ವರ್ಣಿಸಿದ್ದಾಳೆ. ಹರಿಸ್ತುತಿಯೇ ಮುಖ್ಯವಾಗಿರುವ ದಾಸಸಾಹಿತ್ಯವು ಹರಿಯ ಮಹಿಮೆಗಳನ್ನು ವಿವಿಧ ಅವತಾರಗಳ ಹಿನ್ನೆಲೆಯಲ್ಲಿ ವಿಭಿನ್ನ ಶೈಲಿಯಲ್ಲಿ, ಭಾವದಲ್ಲಿ ವ್ಯಕ್ತಪಡಿಸಿದೆ.

ಪಂಚಮವೇದವೆನಿಸಿಕೊಂಡ ಮಹಭಾರತದ ಒಂದು ಭಾಗವಾದ ಶ್ರೀಮದ್ ಭಗವದ್ಗೀತೆಯಲ್ಲಿ

"ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುಮತ್ಥಾನಾಯ ಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಮ್"

ಎಂದು ಶ್ರೀಕೃಷ್ಣನು ಅರ್ಜುನನನ್ನು ಉದ್ದೇಶಿಸಿ ಈ ಲೋಕದ ಎಲ್ಲ ಜನತೆಗೆ ಹೇಳಿದ್ದಾನೆ. ಈ ಭೂಮಿಯ ಮೇಲೆ ಧರ್ಮಕ್ಕೆ ತೊಂದರೆ ಬಂದಾಗಲೆಲ್ಲಾ ಹಾಗೂ ಅಧರ್ಮವು ಹೆಚ್ಚಾದಾಗ ನಾನು ನನ್ನ ರೂಪವನ್ನು ತೋರಿಸುತ್ತೇನೆ. ಸಜ್ಜನರನ್ನು ಉದ್ಧರಿಸಲು, ದುರ್ಜನರನ್ನು ಶಿಕ್ಷಿಸಲು ಭೂಮಿಯ ಮೇಲೆ ಈ ಮೂಲಕ ಧರ್ಮವನ್ನು ಪುನರ್ ಸಂಸ್ಥಾಪಿಸಲು ಯುಗಯುಗಗಳಲ್ಲಿ ನಾನಾ ಅವತಾರಗಳನ್ನು ಎತ್ತಿ ಬರುತ್ತೇನೆ. ಈ ಅವತಾರಗಳ ಅಗತ್ಯತೆಯನ್ನು ಅರ್ಜುನನಿಗೆ ಶ್ರೀಕೃಷ್ಣನು ಹೀಗೆ ಹೇಳುವನು.

ಶ್ರೀ ಹರಿಯು ಈ ಭೂಮಿಯ ಮೇಲೆ ಇಪ್ಪತ್ತೊಂದು ಅವತಾರಗಳನ್ನು ತಾಳಿದ್ದಾನೆ. ಅವುಗಳೆಂದರೆ; ಸನತ್ಕುಮಾರ, ವರಾಹ, ನಾರದ, ನರನಾರಾಯಣ, ಕಪಿಲ, ದತ್ತಾತ್ರೆಯ, ಯಜ್ಞ, ಋಷಭ, ಪೃತು, ಮತ್ಸ್ಯ, ಕೂರ್ಮ, ಧನ್ವಂತರಿ, ಮೋಹಿನಿ, ನರಸಿಂಹ, ವಾಮನ, ಪರಶುರಾಮ, ವೇದವ್ಯಾಸ, ರಾಮ, ಬಲರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ. ಆದರೆ ಇವುಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಭಾರ್ಗವ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಈ ಹತ್ತು ಅವತಾರಗಳು ಮಾತ್ರ ಹೆಚ್ಚಿನ ಪ್ರಾಧಾನ್ಯತೆಯನ್ನು ಪಡೆದುಕೊಂಡಿವೆ.

ಜೀವೂಬಾಯಿಯು ಸಂದರ್ಭ ಸಿಕ್ಕಾಗೆಲ್ಲ ದಶಾವತಾರಗಳನ್ನು ಬಗೆಬಗೆಯಾಗಿ ವರ್ಣಿಸಿರುವಳು. ಕೆಲವೊಮ್ಮೆ ಹತ್ತು ನುಡಿಗಳಲ್ಲಿ ದೀರ್ಘವಾಗಿದ್ದರೆ ಮತ್ತೊಮ್ಮೆ ಕೇವಲ ಒಂದೊಂದು ನುಡಿಗಳಲ್ಲಿ ಚಿತ್ರಿಸಿರುವಳು. ಈ ವರ್ಣನೆಗಳನ್ನು ಎರಡು ರೀತಿಯಲ್ಲಿ ಭಾಗ ಮಾಡಿಕೊಂಡು ಅಭ್ಯಶಿಸಬಹುದು.

**೧. ಬಿಡಿಕೀರ್ತನೆಗಳಲ್ಲಿ ದಶಾವತಾರ ವರ್ಣನೆ**

"ಮೀನನಾಗಿ ಭಾರ ಪೊತ್ತು ಬೇರು ಮೆಲ್ಲಿದನ
ಕ್ರೂರರೂಪ ತೋರಿ ಭೂಮಿದಾನ ಬೇಡ್ದನ

ಭೂಮಿಪರ ಸಂಹರಿಸಿ ಶ್ರೀರಾಮಚಂದ್ರನ
ಮಾವ ಕಂಸನ ತರಿದ ಬಲರಾಮನನುಜನ

ಬುದ್ಧರೂಪದಿ ನೊತ್ರಿಪುರಂದದ್ದ ಧೀರನ
ಮುದ್ದು ತೇಜಿಯನೇರಿ ಮೆರೆದ ಪದ್ಮನಾಭ”[೮]

ಮುದ್ದು ಕೃಷ್ಣನ ಜೋಗುಳುವ ಹಾಡುತ ತೊಟ್ಟಿಲು ತೂಗುವಾಗ ಹರಿಯ ಅವತಾರಗಳನ್ನು ಯಶೋಧೆ ವರ್ಣಿಸಿರುವಳು. ಆರು ಸಾಲುಗಳಲ್ಲಿ (ಪಾದ) ವರ್ಣಿತಗೊಂಡ ದಶಾವತಾರ ಮತ್ಸ್ಯ, ಕೂರ್ಮ, ಬಲಿ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಅವತಾರಗಳನ್ನು ಜೀವೂಬಾಯಿಯು ಬಹು ಸಂಕ್ಷಿಪ್ತವಾಗಿ ಹೇಳಿರುವಳು.

“ವೇದ ತಂದ ಭಾರ ಪೊತ್ತು
ಕೋರೆ ತೋರಿ ಕರುಳ ಬಗೆದು
ಬೇಡಿ ಭೂಮಿ, ದೂಡಿ ನೃಪನ
ಸಾಗರದಿ ಬಂಧಿಸಿದ ಭಯವೋ

ಕದ್ದು ಬೆಣ್ಣೆ ಕಳ್ಳನೆನಿಸಿ
ವದ್ದು ತ್ರಿಪುರಾಸುರರ ಸದೆದು
ಹದ್ದನೇರುವುದನೆ ಬಿಟ್ಟು
ಹಯವನೇರಿದ ಭಯವೋ ಸ್ವಾಮಿ”[೯]

ಬಾಲಗೋಪಾಲನು ಅಡಗಿಕೊಂಡು ಕುಳಿತಿರಲು ‘ಯಾಕೋ ನರಹರಿ ಅಡಗಿಕೊಂಡು ಕುಳಿತಿರುವೆ ನಿನ್ನ ಈ ಭಯಕೆ ಕಾರಣವೇನು’ ಎಂದು ಕೇಳುತ್ತ ಯಶೋಧೆಯು ಆತನ ಅವತಾರಗಳನ್ನು ಪ್ರಸ್ತಾಪಿಸಿರುವಳು. ಸಾಮಾನ್ಯವಾಗಿ ಚಿಕ್ಕಮಕ್ಕಳು ಏನಾದರೂ ತಪ್ಪು ಮಾಡಿದಾಗ ತಾಯಿ ಹೊಡೆಯುವಳು ಎಂಬ ಹೆದರಿಕೆಯಿಂದ ಕುಳಿತುಕೊಂಡಿರುತ್ತವೆ. ಹೀಗೆ ಅವಿತುಕೊಂಡಿರುವ ಬಾಲಕೃಷ್ಣನನ್ನು ಮಾತೃ ವಾತ್ಸಲ್ಯ ಭಾವದಿಂದ ಹೆದರಿಕೆಯ ಕಾರಣಗಳನ್ನು ಕೇಳುವಳು.

ಅಕ್ಕತಂಗಿಯರ ಸಂಭಾಷಣೆಯ ರೂಪದಲ್ಲಿ ಮೂಡಿಬಂದ ಹರಿಯ ದಶಾವತಾರಗಳ ವರ್ಣನೆ ಬಹು ವಿವರಣೆಯನ್ನು ಹೊಂದಿದೆ.

"ನೀರೊಳು ಮುಳುಗುತ ಮೀನರೂಪದಿ
ನಾರುವ ಮೈಯ್ಯವದಾರಕ್ಕ
ನೀರೊಳು ಮೂಳುಗಿ ವೇದವ ತಂದು ಸುತಗಿತ್ತ
ಧೀರ ಮತ್ಸ್ಯ ಮೂರುತಿ ತಂಗಿ

ಭಾರ ಬೆನ್ನಲಿ ಪೊತ್ತು ಮೊರೆ ಕೆಳಗೆ ಮಾಡಿ
ನೀರೊಳು ವಾಸಿಪದಾರಕ್ಕ
ವಾರಿಧಿ ಮಥಿಸಿದ ಅಮೃತ ಸುರರಿಗಿತ್ತ
ಧೀರ ಕೂರ್ಮ ಮೂರುತಿ ತಂಗಿ
ಕೋರೆ ದಾಡಿಯಲ್ಲಿ ದಾರುಣಿ ನೆಗಹಿದ
ಘೋರನೆನುವರಿವದಾರಕ್ಕ
ಕ್ರೂರ ಹಿರಣ್ಯಾಕ್ಷನ ಕೊಂದು ಭೂಮಿತಂದ
ಶೂರ ವರಹ ಮೂರುತಿ ತಂಗಿ

ಕ್ರೂರ ರೂಪ ತಾಳುತ ಕರುಳ್ವನ
ಮಾಲೆ ಹಾಕಿದವದಾರಕ್ಕ
ಪೋರನು ಸಲುಹಲು ಕಂಬದಿಂದುದಿಸಿದ
ನಾರಸಿಂಹ ಮೂರುತಿ ತಂಗಿ

ಮೂರಡಿ ಭೂಮಿಯ ದಾನವ ಬೇಡಿದ
ಹಾರ್ವನೆನುವನಿವದಾರಕ್ಕ
ಧೀರ ಬಲಿಯ ಭಕ್ತಿಗೆ ಮೆಚ್ಚಿ ಬಾಗಿಲು ಕಾಯ್ದ
ವಾಮನ ಮೂರುತಿ ಇವ ತಂಗಿ

ಮೂರು ಏಳು ಬಾರಿ ಧಾರುಣಿ ಚರಿಸಿದ
ಶೂರನೆನುವರಿವದಾರಕ್ಕ
ವೀರ ಕ್ಷತ್ರಿಯರ ಮದವನಡಗಿಸಿದ ಪರಶು
ರಾಮ ಮೂರುತಿ ತಂಗಿ

ಕೋತಿಗಳೊಡನೆ ಸೇತುವೆ ಕಟ್ಟಿದ ಪ್ರ
ಖ್ಯಾತನೆನುವರಿವದಾರಕ್ಕ
ಮಾತರಿಶ್ವನಿಗೆ ಒಲಿದಂಥ ದಶರಥ
ರಾಮಚಂದ್ರ ಮೂರುತಿ ತಂಗಿ
ಗೋಕುಲದೊಳು ಪಾಲ್ಬೆಣ್ಣೆ ಮೊಸರು ನವನೀತ
ಚೋರನಿವದಾರಕ್ಕ
ಲೋಕಗಳೆಲ್ಲಾ ತಾಯಿಗೆ ಬಾಯೊಳು ತೋರ್ದ
ಗೋಪಾಲಕೃಷ್ಣ ಮೂರುತಿ ತಂಗಿ

ತ್ರಿಪುರರ ಸತಿಯರ ವ್ರತಗಳನಳಿದನು
ಗುಪಿತನೆನುವರಿವದಾರಕ್ಕ
ಕಪಟ ನಾಟಕ ಸೂತ್ರಧಾರಿ ಶ್ರೀ
ಹರಿ ಬೌದ್ಧ ಮೂರುತಿ ತಂಗಿ

ಅಶ್ವವನೇರುತ ಹಸ್ತದಿ ಖಡ್ಗ ಪುರು
ಷೋತ್ತಮನೆನುವರಿವದಾರಕ್ಕ
ಸ್ವಸ್ತದಿ ಕಲಿಯೊಳು ಸುಜನರ ಪಾಲಿಪ
ಕರ್ತೃ ಕಲ್ಕಿ ಮೂರುತಿ ತಂಗಿ"[೧೦೦]

ಈ ಪರಿಯಲ್ಲಿ ಮೂರು ಲೋಕಗಳಲ್ಲೆಲ್ಲಾ ವ್ಯಾಪಕವಾಗಿರುವ ಹರಿಯನ್ನು ಎಲ್ಲರೂ ಕೊಂಡಾಡುವಾಗ ತಂಗಿಯು ಅಕ್ಕನನ್ನು 'ನಿಜದಲಿ ಪೇಳಿವದಾರಕ್ಕ' ಎಂದು ಪ್ರಶ್ನಿಸುವಳು. ತಂಗಿ ಕೇಳುವ ಎಲ್ಲ ಪ್ರಶ್ನೆಗಳಿಗೆ ಅಕ್ಕಳು ಉತ್ತರಿಸುವ ರೀತಿಯಲ್ಲಿ ಜೀವಮ್ಮ ಅತೀ ವಿವರವಾಗಿ ಸ್ಪಷ್ಟವಾಗಿ ವರ್ಣಿಸಿದ್ದಾಳೆ. ಇದು ಸಂಭಾಷಣಾ ರೂಪದಲ್ಲಿ ಮೂಡಿಬಂದಿದೆ.

ಬಾಲಗೋಪಾಲನು ಆಡಲು ಗೋಪಿಯರ ಜೊತೆ ಹೋದಾಗ ಅವರು ಗೋಪಾಲನನ್ನು ಅಪಹಾಸ್ಯ ಮಾಡುವರು. ಈ ಸಂದರ್ಭದಲ್ಲಿ ಗೋಪಿಯರು ತನ್ನನ್ನು ಅಪಹಾಸ್ಯ ಮಾಡಿದ ಬಗೆಯನ್ನು ತಾಯಿ ಯಶೋಧೆಗೆ ಹೇಳುವಲ್ಲಿ ದಶಾವತಾರ ಲೀಲೆಯನ್ನು ಜೀವಮ್ಮ ಬಲು ಹಿತಕರವಾಗಿ ಚಿತ್ರಿಸಿರುವಳು. ಸಣ್ಣಮಕ್ಕಳು ಯಾರಾದರು ಗದರಿಸಿದಾಗ, ಬೈಯ್ದಾಗ ಓಡಿ ಬಂದು ತನ್ನ ತಾಯಿಗೆ ಹೇಳುವಂತೆ ಸಹಜತೆಯಿಂದ ಮೂಡಿ ಬಂದಿದೆ.

"ನಾನೆಲ್ಲು ಪೋಗಲಿಲ್ಲ ನಾರಿಯರೆಲ್ಲ
ದೂರುವರಿದ ನೋಡಮ್ಮ

ನೀರ ಪೊಕ್ಕರೆಂಬೋರೆ ವೇದ ತಂದಿತ್ತ
ನಾರು ಮಯ್ಯನೆಂಬೋರೇ
ಮೋರೆ ತಗ್ಗಿಸಿದ ಭಾರ ಪೊತ್ತವನೆಂಬೋರೇ
ಘೋರರೂಪನು ಎಂಬೋರೇ
ಕೋರೆ ದಾಡೆಯ ನೆಗಹಿ ಧರಣಿಯ
ಶೂರ ಹಿರಣ್ಯಾಕ್ಷಕನ ಸೀಳಿದ
ಕ್ರೂರ ರೂಪ ಧರಿಸಿ ಕರುಳಿನ
ಮಾಲೆ ಹಾಕಿದ ಧೀರನೆಂಬೋರು

ಮೂರು ಪಾದದ ಭೂಮಿಯ ಬೇಡಲು ಬ್ರಹ್ಮ
ಚಾರಿಯಾದನು ಎಂಬೋರೇ
ಮೂರು ಏಳೆನಿಸಿಕೊಂಡು ಧರಣಿಯ ಸುತ್ತಿದ
ಧೀರ ರಾಮನು ಎಂಬೋರೇ
ನಾರು ವಸ್ತ್ರವ ಧರಿಸಿ ವನ ವನ ಸೇರಿ
ವಾನರರೊಡನೆ ಚರಿಸಿದ
ನಾರಿಯ ವಸ್ತ್ರಗಳ ಕದ್ದ ನವ–
ನೀತ ಚೋರನೆಂದೆನಿಸುತ ನಗುವರು"[೧೦೧]

ನಾರುಮಯ್ಯ(ಮೀನು), ಕೆಳಮೊರೆಯ ಘೋರನು, ಕ್ರೂರ ರೂಪಿಯು, ಕೋರೆ ದಾಡಿಯನು, ಕರುಳ ಮಾಲೆ ಧಾರಿಯು, ಭಿಕ್ಷೆ ಬೇಡಿದ ಬ್ರಹ್ಮಚಾರಿ, ಧರಣಿ ಸುತ್ತಿದ ಧೀರನು, ವನವನ ಚರಿಸಿದ ವಾನರ ಚರನು, ನಾರಿಯ ವಸ್ತ್ರಕಳ್ಳರೆಂದು ವನಿತೆಯರು ಅಪಹಾಸ್ಯ ಮಾಡುವುದನ್ನು ತಾಯಿಯ ಮುಂದೆ ಬಾಲಕೃಷ್ಣನು ಹೇಳುವುದು ದಶಾವತಾರವನ್ನು ನಿಂದಿಸಿದಂತೆ ವ್ಯಕ್ತವಾಗಿದೆ. ಅಂದರೆ ಗೋಪಿಯ ನಿಂದೆಗಳಲ್ಲಿಯೂ ಹರಿಯ ದಶಾವತಾರವನ್ನು ಜೀವಮ್ಮ ಮಾರ್ಮಿಕವಾಗಿ ವರ್ಣಿಸಿದ್ದಾಳೆ.

ಯಶೋಧೆಯು ಬಾಲಕೃಷ್ಣನನ್ನು ಜೋಗುಳಹಾಡಿ ಮಲಗಿಸುವ ಜೋಗುಳ ಪದಗಳಲ್ಲಿಯೂ ಕೂಡ ದಶಾವತಾರಗಳನ್ನು ಸ್ತುತಿಸಿರುವುದು ಕಂಡು ಬರುತ್ತದೆ.

"ವೇದ ಕದ್ದನ ಭೇದಿಸಿ ಅಜನಿಗೆ
ವೇದವ ತಂದಿತ್ತು ಆದರಿಸಿದ ದೇವ।

ಮುಳುಗಿದ ಗಿರಿಯನು ಧರಿಸಿ ಬೆನ್ನಲಿ ಬೇಗ
ಸುರರಿಗೆ ಅಮೃತವ ಕುಡಿಸಿದ ಮಾಧವ।
ಸುರುಮುನಿಗಳಿಗೆಲ್ಲ ಅಭಯವ ನೀಡುತ
ವರಹ ರೂಪವ ತಾಳಿ ಬಳಲಿ ದಣಿದು ಬಂದಿ।

ಕಂದನಿಗಾಗಿ ದೊಡ್ಡ ಕಂಬದಿಂದುದಿಸಿ ಖಳನ
ಕೊಂದು ಕರುಳ ವನ ಮಾಲೆ ಧರಿಸಿ ಧಣಿದಿ।
ಮೂರಡಿ ಭೂಮಿಯ ಬೇಡಿ ಬಲಿಂದ್ರನ
ದೂಡಿ ಪಾತಾಳಕೆ ಬಹಳ ಬಳಲಿ ಬಂದಿ।

ಭೂಮಿ ಪಾಲಕರನ್ನು ಸೋಲಿಸಿ ಬಾರಿ ಬಾರಿ
ವಾರಿಜಾಕ್ಷ ಶ್ರೀರಾಮರಿಗೊಲಿದೆಯೊ।

ಸೇತುವೆಯನ್ನು ಕಟ್ಟಿ ದೂರ್ತರಾವಣನ ಕುಲವ
ಘಾತಿಸಿ ಕೊಂದ ರಘನಾಥನೆ ಬಳಲಿದೆ।

ವಸುದೇವ ಕಂದನೆ ಶಿಶುರೂಪಿನಿಂದಲಿ
ಅಸುರೆ ಪೂತಣಿ ಅಸುಹೀರಿ ಬಳಲಿ ಬಂದಿ।

ತಿದ್ದಿ ತ್ರಿಪುರಾಸುರರ ಮರ್ದಿಸಿ ಸುಜನರಿಗೆ
ಮುದ್ದು ತೋರಿದ ಸುಪ್ರಸಿದ್ಧ ಮೂರುತಿ ಬೇಗ।
ಕರದಿ ಖಡ್ಗವ ಧರಿಸಿ ಸಿರದಿ ಕಿರೀಟ ಹೊಳೆಯೆ
ಇಳೆಯ ಮನುಜರಿಗೆಲ್ಲ ಸುಲಭನಂದದಿ ತೋರ್ಪಿ"[೧೦೨]

ಬ್ರಹ್ಮನ ಬಾಯಿಯಿಂದ ಬಿದ್ದ ವೇದಗಳನ್ನು ಹಯಗ್ರೀವನೆಂಬ ರಾಕ್ಷಸನು ಅಪಹರಿಸಿ ನೀರಿನಲ್ಲಿ ಅಡಗಿದ್ದನು. ಆಗ ವಿಷ್ಣು ಮತ್ಸ್ಯ ರೂಪದಿಂದ ನೀರಲ್ಲಿ ಮುಳುಗಿ ಆ ವೇದಗಳನ್ನು ಮರಳಿ ತಂದನು. ದೇವದಾನವರು ಸಮುದ್ರಮಥನ ಮಾಡುತ್ತಿರಲು ಕಡಗೋಲಾಗಿ ಬಳಸಿದ ಮಂದಾರ ಪರ್ವತವು ಮುಳಗಲಾರಂಭಿಸಿತು. ಆಗ ಹರಿಯು ಅಮೆಯ ರೂಪವನ್ನು ಧರಿಸಿ ತನ್ನ ಬೆನ್ನಿನಿಂದ ಆ ಪರ್ವತವನ್ನು

ಮೇಲಕ್ಕೆತ್ತಿದನು. ಹಿರಣ್ಯಾಕ್ಷನೆಂಬ ಅಸುರನು ಇಡೀ ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರ ತಳಕ್ಕೆ ಒಯ್ಯುವನು. ನಾರಾಯಣನು ವರಾಹ ಅವತಾರವನ್ನು ತಾಳಿ ಆ ರಾಕ್ಷಸನನ್ನು ಕೊಂದು ತನ್ನ ಕೋರೆಗಳಿಂದ ಭೂಮಿಯನ್ನು ಮೇಲೆತ್ತಿ ತಂದನು. ಹರಿಭಕ್ತನಾದ ಬಾಲಕ ಪ್ರಹ್ಲಾದನ ಕರೆಗೆ ಕಿವಿಗೊಟ್ಟು ಕಂಬದಿಂದ ನರಸಿಂಹನಾಗಿ ಎದ್ದು ಬಂದು ಅ ಬಾಲಕನ ತಂದೆಯಾದ ಹಿರಣ್ಯಕಶ್ಯಪು ರಾಕ್ಷಸನನ್ನು ಕರುಳ ಬಗೆದು ಕೊಂದನು. ಭೂಮಿಯ ಮೇಲೆ ಬಲಿ ಚಕ್ರವರ್ತಿ ಬಹು ಗರ್ವದಿಂದ ಮೆರೆಯುತ್ತಿರಲು ಆತನ ಸೊಕ್ಕನ್ನು ಮುರಿಯಲು ಹರಿಯು ವಾಮನ ವೇಷದಿಂದ ಬಲಿಯಲ್ಲಿಗೆ ಬಂದು ಮೂರು ಪಾದ ಭೂಮಿಯನ್ನು ದಾನವಾಗಿ ಕೇಳಿದನು. ಮೊದಲ ಹೆಜ್ಜೆ ಭೂಮಿಯನ್ನು, ಎರಡನೆಯ ಹೆಜ್ಜೆ ಆಕಾಶವನ್ನು ಪೂರ್ಣ ಅವತರಿಸಿತು. ಮೂರನೆಯ ಹೆಜ್ಜೆಯನ್ನು ಬಲಿಯ ತಲೆಯ ಮೇಲಿಟ್ಟು ಪಾತಾಳಕ್ಕೆ ತುಳಿದನು. ಕ್ಷತ್ರಿಯರು ಈ ಭೂಮಿಯ ಮೇಲೆ ಅತೀ ಮದದಿಂದ ಮೆರೆಯುತ್ತಿದ್ದರು. ಆಗ ಶ್ರೀಹರಿಯು ಪರಶುರಾಮನಾಗಿ ಅವತರಿಸಿ ಈ ಧರಣಿಯನ್ನೆಲ್ಲ ಸುತ್ತಿ ಸಮಸ್ತ ಕ್ಷತ್ರಿಯ ಕುಲವನ್ನು ನಾಶಗೊಳಿಸಿದನು. ಸೀತೆಯನ್ನು ಅಪಹರಿಸಿದ ರಾವಣನ ಕೊಲ್ಲಲು ಲಂಕೆಗೆ ತೆರಳಲು ಸೇತುವೆ ನಿರ್ಮಿಸಿ ರಾಮನ ರೂಪದಲ್ಲಿ ನಿಂದು ರಾವಣನನ್ನು ಕೊಂದನು. ದುಷ್ಟರ ನಾಶಕ್ಕಾಗಿ ಹರಿಯು ಯಾದವ ಕುಲದಲ್ಲಿ ಜನಿಸಿ ವಿವಿಧ ಬಾಲ ಲೀಲೆಗಳನ್ನು ತೋರಿ ಪೂತನಿಯ ಮೊಲೆಯ ರಕ್ತ ಹೀರಿ ಕೊಲ್ಲುವನು. ತ್ರಿಪುರಾಸುರನನ್ನು ನಾಶಮಾಡಲು ಬೌದ್ಧನಾಗಿ ಅವತರಿಸಿದನು. ಕಲಿಯುಗದಲ್ಲಿ ಅನಾಚಾರಗಳು ಮಿತಿಮೀರಿದಾಗ ದುಷ್ಟರನ್ನು ಶಿಕ್ಷಿಸಲು ಕಲ್ಕಿಯಾಗಿ ಖಡ್ಗ ಧರಿಸಿ ಕುದುರೆಯನೇರಿದನು. ಹೀಗೆ ವಿವಿಧ ಅವತಾರಗಳನ್ನು ತೋರಿ ಬಳಲಿರುವ ತನ್ನ ಕಂದನನ್ನು ಯಶೋಧೆಯು ತೊಟ್ಟಿಲ ತೂಗಿ ಜೋಗಳ ಹಾಡಿ ಮಲಗಿಸುವುದು ಅತ್ಯಂತ ಹೃದ್ಯವಾಗಿದೆ.

ಶ್ರೀಹರಿಯನ್ನು ಭಕ್ತಿಯಿಂದ ಭಜಿಸಿ ನಮಿಸುವ ಸಂದರ್ಭದಲ್ಲಿಯೂ ದಶಾವತಾರಗಳನ್ನು ಜೀವಮ್ಮಳು ವರ್ಣಿಸಿ "ಬಾರೋ ಶ್ರೀಹರಿ ಬಾಲಕ ಶೌರಿ ಬಾರೋ ಶ್ರೀಹರಿ"[೧೦೩] ಎಂಬ ಕೀರ್ತನೆಯಲ್ಲಿ ವಿವಿಧ ರೂಪಗಳನ್ನು ತೋರುವಂತೆ ಸ್ಮರಿಸಿ ಸಿರಬಾಗಿರುವುದು ಕಂಡು ಬರುತ್ತದೆ.

ಅಪಾರ ಮಹಿಮೆಯನ್ನು ಹೊಂದಿದ ನಿನ್ನನ್ನು

"ಮರೆತು ಹೋದೆನೊ ದೇವ ರಂಗಯ್ಯ ರಂಗ
ಸಿರಿದೇವಿರಮಣನೆ ಪರನೆಂದು ತಿಳಿಯದೆ"[೧೦೪]

ಸ್ಮರಿಸಲಾರದೆ ಬಲು ತಪ್ಪು ಮಾಡಿರುವೆನು. ಪಾಶ್ಚಾತಾಪದಲ್ಲಿಯೂ ಹರಿಯ ದಶಾವತಾರಗಳನ್ನು ಸ್ಮರಿಸಿಕೊಂಡು, ಇಂಥ ಮಹಾಮಹಿಮ ರೂಪಾವತಾರಿಯನ್ನು ಸರಿಯಾಗಿ ತಿಳಿದುಕೊಳ್ಳದೆ ತಾನು ದೊಡ್ಡ ತಪ್ಪು ಮಾಡಿದೆನೆಂಬ ಭಾವದಲ್ಲಿಯೂ ಹರಿಯ ಅವತಾರಗಳ ವರ್ಣನೆ ಪ್ರಸ್ತಾಪಿತಗೊಂಡಿದೆ.

ಶ್ರೀ ಹರಿಯನ್ನೇಕೆ ಮೆಚ್ಚಿದೆ ಎಂದು ಲಕ್ಷ್ಮಿಯನ್ನು ಗೆಳತಿಯಂತೆ ಕೇಳುವಾಗ

"ನೀರೊಳು ಮುಳುಗಿ ಭಾರಹೊತ್ತು ಧರಣಿಯ
ಕೋರೆ ದಾಡೇಲಿ ತಂದ ಕ್ರೂರ ರೂಪನಿಗೆ
ಮೂರಡಿ ಭೂಮಿ ಬೇಡಿ ಕ್ಷಿತಿಪರ ಕೊಂದು
ನಾರು ವಸ್ತ್ರಗಳುಟ್ಟು ಸೀರೆ ಕದ್ದವಗೆ
ಶೂರತನದಲ್ಲಿ ತ್ರಿಪುರಗೆದ್ದು ವಿ
ಹಾರ ಮಾಡ್ದ ಏರ್ದ ಕುದುರೆಯ
ಮಾರಪಿತ ಮಧುಸೂಧನನ ವ್ಯಾ-
ಪಾರ ತಿಳಿಯದೆ ವಾರಿಜಾಕ್ಷಿ"[೧೦೫]

ಹರಿಯನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳದೆ ಆತನ ಪೂರ್ವಾಪರಗಳನ್ನು ತಿಳಿದುಕೊಳ್ಳದೆ ನೀನು ಆತನನ್ನು ಏಕೆ ಮೆಚ್ಚಿಕೊಂಡೆ. ಆತನು ಬಲು ಮೋಸಗಾರ, ಮಹಾಕಳ್ಳ, ಉಗ್ರರೂಪಿ, ಪಾಂಡವರ ಮನೆ ಊಳಿಗದವ, ಅರ್ಜುನನ ಸಾರಥಿ ಇಂಥ ಗುಣಕ್ರಿಯೆಯನ್ನು ಹೊಂದಿದ ಹರಿಯನ್ನು ಮೆಚ್ಚಿರುವುದು ಸರಿಯಾದುದಲ್ಲ. ಅಂದರೆ ಪ್ರತಿಯೊಂದು ಹೆಣ್ಣು ತಾನು ಮದುವೆಯಾಗುವ ಗಂಡಿನ ಎಲ್ಲ ಪೂರ್ವಾಪರ ವಿಷಯಗಳನ್ನು ತಿಳಿದುಕೊಂಡು ಮುಂದಿನ ಹೆಜ್ಜೆ ಇಡುವುದು ಅವಶ್ಯ. ಅಂತೆಯೇ ಇಲ್ಲಿ ಜೀವಮ್ಮಳು ಸಹ ಗೆಳತಿಯಂತೆ ಲಕ್ಷ್ಮಿಯ ಜೊತೆ ಮಾತನಾಡುತ್ತಾ ಇಂಥ ದಶಾವತಾರಿಯಾದ ಶ್ರೀಹರಿಯು ಮಹಾ ಲಂಪಟ ಎಂಬುದನ್ನು ವಿವರಿಸಿರುವಳು.

"ಹಸಿವು ಬಹಳಾಗುತ್ತಿದೆ ಕೇಳಮ್ಮಯ್ಯ
ಹಸನಾಗಿ ಉಣಬಡಿಸೆ

. . . . . . . .. . . . . . . . . .
ನೀರೊಳು ಮುಳುಗಿ ಬಂದೆ ಭಾರವ ಹೊತ್ತು
ಕೋರೆಲಿ ಧರಣಿ ತಂದೆ
ಘೋರನೊಡನೆ ವೈರಿಯಾದ ದೈತ್ಯನ ಕರು
ಳ್ಹಾರವ ಮಾಡುತ್ತ ಭಾಳ ಬಳಲಿ ಬಂದೆ

ಪೊಡವಿದಾನವ ಬೇಡಿದೆ ರಾಜರಗೆದ್ದು
ಕೊಡಲಿ ಕೈಯ್ಯಲಿ ಪಿಡಿದೆ
ಮಡದಿಯನರಸುತ ಅಡವಿಗಳ ಚರಿಸಿದೆ
ಬಿಡದೆ ದೈತ್ಯರ ಸದೆ ಬಡಿದು ದಣಿದು ಬಂದೆ"[೧೦೬]

ಬಾಲಕೃಷ್ಣನು ಆಟ ಅಡಿ ಬಂದು ಊಟಕ್ಕೆ ಕುಳಿತಾಗ ತಾಯಿ ಊಟ ಬಡಿಸುತ್ತಿರುವಳು. ಆಗ ಬಾಲಕನು ನಾನು ವಿವಿಧ ಅವತಾರಗಳನ್ನು ತಾಳಿ ಬಲು ದಣಿದು ಬಂದಿದ್ದೇನೆ. ಅತೀ ಹಸಿವಾಗಿದೆ ಚೆನ್ನಾಗಿ ಊಟಕ್ಕೆ ಬಡಿಸು ಎಂದು ಕೇಳುವನು. ಕೃಷ್ಣನೇ ಸ್ವತ: ತನ್ನ ಅವತಾರಗಳನ್ನು ಪ್ರಸ್ತಾಪ ಮಾಡುವ ಬಗೆ ಮಕ್ಕಳ ಕಾರ್ಯ ವೈಖರಿಯ ಸಾಹಸವನ್ನು ತಿಳಿಸುತ್ತದೆ.

ಬೀದಿಯಲ್ಲಿ ಹೆಜ್ಜೆ ಗುರುತುಗಳು ಪರಿಪರಿಯಾಗಿ ಆಕರ್ಷಕವಾಗಿ ಮೂಡಲು ಇವು ಯಾರ ಹೆಜ್ಜೆಗಳು ಎಂಬ ಸಂದೇಹ ಮೂಡಿದಾಗ

"ಹೆಜ್ಜೆಗಳಿವೆ ನೋಡಿರೆ ರಂಗಯ್ಯನ
ಹೆಜ್ಜೆಗಳಿವೆ ನೋಡಿರಿ"[೧೦೭]

ಈ ಕೀರ್ತನೆಯಲ್ಲಿ ದಶಾವತಾರಗಳನ್ನು ತಾಳಿದ ಶ್ರೀ ವಿಷ್ಣುವಿನ ಹೆಜ್ಜೆಗಳಿವೆಂದು ಜೀವಮ್ಮಳು ಸಂಕ್ಷಿಪ್ತವಾಗಿ ದಶಾವತಾರಗಳನ್ನು ನಿರೂಪಿಸಿದ್ದಾಳೆ. ಸಂಪ್ರದಾಯದ ಹಾಡುಗಳಲ್ಲಿ, ಜೋಗುಳ ಹಾಡುಗಳಲ್ಲಿಯೂ ದಶಾವತಾರ ನಿರೂಪಣೆ ಮೂಡಿ ಬಂದಿದೆ.

"ಮೀನ್ ಕೂರ್ಮ ಕ್ರೋಡ ನೃಹರಿಗೆ
ದಾನವ ಬೇಡಿದಗೆ
ಮಾನದಿ ಭೃಗು ಶ್ರೀರಾಮ ಶ್ರೀಕೃಷ್ಣಗೆ
ಸಾನುರಾಗದಿ ಬುದ್ಧ ಕಲ್ಕ್ಯನಿಗೆ ಜಯ"[೧೦೮]

ಹೀಗೆ ಮಂಗಳಾರತಿಯ ಹಾಡುಗಳಲ್ಲಿ ಸಂಕ್ಷಿಪ್ತವಾಗಿ ದಶಾವತಾರಗಳನ್ನು ಜೀವಮ್ಮ ಹೇಳಿರುವಳು. ಹರಿಯ ಎಲ್ಲ ರೂಪಗಳನ್ನು ಸ್ಮರಿಸಿ ಆರತಿ ಎತ್ತಿ ಧನ್ಯತೆ ಹೊಂದಿದ ಭಾವ ವ್ಯಕ್ತಗೊಂಡಿದೆ.

ನೀರು ಮನುಷ್ಯನಿಗೆ ಅಷ್ಟೇ ಅಲ್ಲ, ಭೂಮಿಯ ಮೇಲಿನ ಸಕಲ ಜೀವಿಗಳಿಗೆ, ಸರ್ವ ಕಾರ್ಯಗಳಿಗೆ ಅತ್ಯವಶ್ಯವಾದುದು. ಹರಿಯ ಎಲ್ಲ ಅವತಾರಗಳಿಗೂ ನೀರು ಮೂಲವೆಂದು ಜೀವಮ್ಮಳ ನಿಲುವು.

"ನೀರಜಾಸನನ ಪಡೆದಿರುವ ಮಹಿಮೆಯ ಕೇಳಿ
ನೀರಿನಲಿ ಹರಿಯ ಅವತಾರ ರೂಪಗಳುಂಟು"[೧೦೯]

ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವಳು. ಹರಿ ನೀರಿನಲ್ಲಿ ಮೀನನಾದದು, ಆಮೆಯಾದದ್ದು, ನೀರಲ್ಲಿ ಮುಳುಗಿದ್ದು, ನೀರೆಗಾಗಿ ಸಾಗರಕೆ ಸೇತುವೆ ಕಟ್ಟಿರುವುದು ಇವೆಲ್ಲಕ್ಕೆ ನೀರೆ ಮೂಲ. ಆದ್ದರಿಂದ ಹರಿಯ ಎಲ್ಲ ಅವತಾರಗಳಿಗೆ ನೀರು ಆಶ್ರಯವೆಂದಿದ್ದಾಳೆ. ಆದರೆ ಕೆಲ ಅವತಾರಗಳಿಗೆ ನೀರು ಮೂಲವಾಗಿಲ್ಲವೆಂಬುದನ್ನು ಜೀವಮ್ಮ ಮರೆತಿರುವಳು.

**೨. ಖಂಡ ಕಾವ್ಯಗಳಲ್ಲಿ ದಶಾವತಾರ ವರ್ಣನೆ.**

ಜೀವಮ್ಮ ಖಂಡಕಾವ್ಯಗಳಲ್ಲಿಯೂ ಹರಿಯ ಅವತಾರಗಳನ್ನು ವರ್ಣಿಸಿರುವಳು.

'ಸಮುದ್ರ ಮಥನ'ದಲ್ಲಿ

"ವೇದವನೆ ಕದ್ದ ಚೋರನ ತರಿದು
ಸಾದರದಿ ವೇದ ತಂದವನು
ಸಾಗರದಿ ಭಾರ ಪೊತ್ತಿಹನು ಬೇಗ
ನಾರು ಬೇರುಗಳುಮೆಲುತಿಹನು"[೧೧೦]

ಈ ಸಾಲುಗಳಲ್ಲಿ ಶ್ರೀಹರಿಯು ಮೋಹಿನಿ ರೂಪವನ್ನು ತಾಳಿದ ಸಂದರ್ಭದ ವರ್ಣನೆಯ ದಶಾವತಾರಗಳು ಪ್ರಸ್ತಾಪಿತವಾಗಿವೆ. ಇದೇ ಕಾವ್ಯದ ಕೊನೆಗೆ ಶ್ರೀ ಮಹಾಲಕ್ಷ್ಮಿಯು ನಾರಾಯಣನನ್ನು ವರಿಸಿ ಮಾಲೆಯನ್ನು ಹಾಕುವಾಗ

"ಸ್ವಚ್ಛ ಜಲನಿವಾಸಿಯಾದ ಮತ್ಸ್ಯನೊಲ್ಲೆ ನಾ
ಮುಚ್ಚಿ ಕೈಕಾಲು ನಡೆವ ಕೂರ್ಮನೊಲ್ಲೆನಾ"[೧೧೧]

ಲಕ್ಷ್ಮಿಯು ಹರಿಯ ಎಲ್ಲ ಅವತಾರಗಳನ್ನು ಹೇಳುವಳು. ಈ ಎಲ್ಲ ರೂಪಗಳನ್ನು ಬೇರೆ ಬೇರೆ ಕಾರಣಗಳನ್ನೇಳಿ ತಿರಸ್ಕರಿಸುವಳು. ಎಲ್ಲ ರೂಪಗಳಲ್ಲಿ ವಿವಿಧ ಕೊರತೆಗಳನ್ನು ಕಾಣುವಳು. ಕೊನೆಗೆ ಮೂಲ ನಾರಾಯಣನಿಗೆ ಮಾಲೆ ಹಾಕಿ ವರಿಸುವಳು. ಕೊನೆಯ ಮಂಗಲ ಪದ್ಯದ ಮೂರು ನುಡಿಗಳಲ್ಲಿ ದಶಾವತಾರ ವರ್ಣನೆ ಬಂದಿದೆ.

'ಪುರಂದರ ವಿಠ್ಠಲದಾಸರ ಚರಿತ್ರೆ' ಯಲ್ಲಿ

ದೇವಋಷಿ, ತ್ರಿಲೋಕ ಸಂಚಾರಿ ನಾರದರು ವೈಕುಂಠದಲ್ಲಿ ಶ್ರೀಪತಿಯ ಎದುರಿಗೆ ಹರಿಸ್ಮರಣೆಯನ್ನು ಮಾಡುವಾಗ

"ವೇದನಗೊದ್ಧಾರ ಹರಿನಾರಾಯಣಗೆ
ಕೋಲ ಶ್ರೀ ನರಹರಿ ನಾರಾಯಣಗೆ"[೧೧೨]

ಸ್ತುತಿ ರೂಪದಲ್ಲಿ ದಶಾವತಾರವು ಹೇಳಲ್ಪಟ್ಟಿದೆ. ಶ್ರೀ ಪುರಂದರದಾಸರು ಹರಿದರ್ಶನಕ್ಕೆ ಹಂಬಲಿಸುತ ಹಾಡುವ, ಉರುಳಾಡುತ್ತಿರುವ ಸನ್ನಿವೇಷದಲ್ಲಿ

"ವರ ಮತ್ಸ್ಯ ಕೂರ್ಮ ಸೂ
ಕರ ನೃಹರಿ ವಾಮನ

ವರ ಭಾರ್ಗವನೆ ರಾಮ

ಕೃಷ್ಣ ಹರಿಯೆ

ತರುಣಿಯರ ವೃತ ಭಂಗ

ಏರಿ ಮೆರೆದಿಯೊ ಕುದುರೆ

ಕರದಿ ಖಡ್ಗವ ಪಿಡಿದೆ

ಹರಿಯೆ ನೀನು"[೧೧೩]

ಅತೀ ಚಿಕ್ಕದಾಗಿ ಸರಳವಾಗಿ ಹರಿಯ ಅವತಾರಗಳನ್ನು ಪುರಂದರದಾಸರಿಂದ ಸ್ತುತಿಸುವಂದದಲಿ ನಿರೂಪಿತಗೊಂಡಿದೆ. ಈ ಧ್ವನಿಯ ಹಿಂದೆ 'ಇಂಥ ಮಹಾಮಹಿಮನೆ ನೀನು ನನಗೆ ದರ್ಶನವ ನೀಡು' ಎಂಬ ಆರ್ತಭಾವ ವ್ಯಕ್ತಗೊಂಡಿದೆ

'ಗಾಲವ ಚರಿತ್ರೆ' ಯಲ್ಲಿ

ಗಾಲವರು ತನ್ನ ಶಪಥ ಸತ್ಯವಾಗುವಂತೆ ಅಭಯ ನೀಡಿ ಸಲುಹಬೇಕೆಂದು ವೈಕುಂಠಕ್ಕೆ ನಾರದರೊಡನೆ ಹೋಗಿ ಶ್ರೀ ಹರಿಯ ಮುಂದೆ ನಿಂತು ವಂದಿಸಿ

"ಮೂರಡಿ ಭೂಮಿ ಬೇಡಿ ಕ್ರೂರದಿ ಕ್ಷತ್ರಿಯರ ತರಿದು

ಘೋರ ಕಲ್ಲಾದ ಅಹಲ್ಯೆಯ ಕಾಯ್ದ ಶ್ರೀ ರಾಮಚಂದ್ರ"[೧೧೪]

ಅವತಾರಿಯೇ ನನ್ನನ್ನು ವೃತಗೇಡಿಯನ್ನಾಗಿ ಮಾಡದೇ ರಕ್ಷಿಸೆನ್ನುವ ಹಿನ್ನೆಲೆಯಲ್ಲಿ ದಶಾವತಾರ ಸ್ತುತಿಸಲ್ಪಟ್ಟಿದೆ.

'ಮಹಾಲಕ್ಷ್ಮಿ' ಕತೆಯಲ್ಲಿ

ಶ್ರೀ ಲಕ್ಷ್ಮಿಗೆ ಆರತಿಯನ್ನು ಎತ್ತುವಾಗ ಲಕ್ಷ್ಮಿಯ ಮಹಿಮೆ ಹೊಗಳುವ ವೇಳೆ ಆಕೆಯ ಪತಿಯನ್ನು ವರ್ಣಿಸುವರು. ಲಕ್ಷ್ಮಿಯು ಎಂಥವನ ರಾಣಿ ಎಂಬುದನ್ನು ತಿಳಿಸುವಾಗ ದಶಾವತಾರಗಳನ್ನು ಹೇಳಿ ಇಂಥ ಮಹಿಮನ ರಾಣಿಗೆ ಆರತಿಯನೆತ್ತುವೆ ಎಂದು ಪತಿವ್ರತೆಯಾದ ಚಾರುಮತಿ ಹಾಡಿದ್ದಾಳೆ ( ಪು. ೪೪೨).

'ರಾಧಾ ಮಾಧವ ವಿಲಾಸ'ದಲ್ಲಿ

ಬಾಲಕೃಷ್ಣನು ಹಠಮಾಡಿ ಅಳುತ್ತಿರುವಾಗ ತೊಟ್ಟಿಲಲ್ಲಿ ಹಾಕಿ ತೂಗುತ್ತ ತಾಯಿ ಜೋಗುಳ ಪಾಡುವಳು. ಎಷ್ಟೇ ಹಾಡಿದರು ಬಾಲಗೋಪಾಲ ಹಠ ನಿಲ್ಲಿಸುವುದಿಲ್ಲ. ಆಗ ಗೋಪಿಯು

"ನೀರೊಳಗೆ ಮುಳುಗಿ ವೇದವ ತಂದಣುವಿಕೆಯೊ

ಭಾರ ಬೆನ್ನಲಿ ಪೊತ್ತಧಾವತಿಯೋ ಮಾಧವನೆ"[೧೧೫]

ಹತ್ತು ಅವತಾರಗಳ ತಾಳಿ ಬಲು ಬೇಸರಗೊಂಡಿರುವೆ. ಬಳಲಿ ನೊಂದಿರುವೆಯೋ ಕೃಷ್ಣ ಯಾಕೆ ನಿದ್ದೆ ಬರುತ್ತಿಲ್ಲ. ಭಕ್ತರ ಉದ್ಧರಿಸುವ ಚಿಂತೆಯೊ ಎಂದು ತಾಯಿಯು ಮಗುವಿನಲ್ಲಿ ಮಲಗುವಂತೆ ಬೇಡಿಕೊಳ್ಳವಳು. ಇಲ್ಲಿ ಗೋಪಿಯ ದೀನ ಭಾವ ವ್ಯಕ್ತವಾಗಿದೆ.

ಇಂಥ ಹತಮಾರಿಯಾದ ಕೃಷ್ಣನನ್ನು ರಾಧೆಯು ಎತ್ತಿಕೊಂಡು ಬಂದು ತೊಟ್ಟಿಲಲ್ಲಿ ಹಾಕಿ ಹರಿಯ ದಶಾವತಾರಗಳನ್ನು ಸ್ಮರಿಸಲು ಬಾಲಗೋಪಾಲನು ನಿದ್ರೆ ಮಾಡುವನು. ಇಲ್ಲಿಯ ದಶಾವತಾರಗಳ ವರ್ಣನೆಯು ರಾಧೆಯ ಸಖ್ಯ ಭಾವವನ್ನು ಬಿಂಬಿಸುತ್ತದೆ.

ಹೀಗೆ ಜೀವೂಬಾಯಿಯು ಬಿಡಿ ಕೀರ್ತನೆಗಳಲ್ಲಿ ಮತ್ತು ಖಂಡ ಕಾವ್ಯಗಳಲ್ಲಿ ಶ್ರೀಹರಿಯ ದಶಾವತಾರಗಳನ್ನು ಸ್ತುತಿ, ನಿಂದೆ, ಸಖ್ಯ, ಜೋಗುಳ, ದೂಷನೆ, ತಿರಸ್ಕಾರ, ವಾತ್ಸಲ್ಯ ಭಾವದಲ್ಲಿ ವರ್ಣಿಸಿದ್ದಾಳೆ. ಕೆಲವೊಮ್ಮೆ ಇಡಿಯಾಗಿ, ಒಮ್ಮೊಮ್ಮೆ ಬಿಡಿಬಿಡಿಯಾಗಿ ವರ್ಣಿಸಿರುವುದು ತಿಳಿದುಬರುತ್ತದೆ. ಒಂದು ನುಡಿಯಿಂದ ಹಿಡಿದು ಹತ್ತು ನುಡಿಗಳವರೆಗೆ ದಶಾವತಾರವನ್ನು ಬಣ್ಣಿಸಿರುವಳು. ರಾಮಾಯಣ ಮತ್ತು ಮಹಾಭಾರತಗಳ ವಿವಿಧ ಸನ್ನಿವೇಷಗಳನ್ನು ದಶಾವತಾರ ವರ್ಣನೆಗಳಿಗೆ ಬಳಸಿಕೊಂಡಿದ್ದಾಳೆ. ಪ್ರಹ್ಲಾದ, ಅಹಲ್ಯ, ಶಬರಿ, ಅರ್ಜುನರ ಉದ್ಧಾರ, ವೇದ, ಭೂಮಿಯ ರಕ್ಷಣೆ, ಕಂಸ, ಹಿರಣ್ಯಕಶಪು, ದುಷ್ಟ ಶಕ್ತಿಗಳ ಸಂಹಾರಗಳ ಹಿನ್ನೆಲೆಯಲ್ಲಿ ಎಲ್ಲ ಅವತಾರಗಳನ್ನು ಜೀವಮ್ಮ ವರ್ಣಿಸಿರುವಳು. ಹರಿಸ್ತುತಿಯಲ್ಲಿ, ಬಾಲಲೀಲೆಗಳಲ್ಲಿ, ಮಂಗಳಾರತಿ ಹಾಡುಗಳಲ್ಲಿ ದಶಾವತಾರ ಸ್ತುತಿ ಕಂಡು ಬಂದಿದೆ. ಬಾಲಕೃಷ್ಣನು 'ಹಸಿವು ಬಹಳವಾಗುತ್ತಿದೆ ಕೇಳಮ್ಮಯ್ಯ' ಹಾಡಿನಲ್ಲಿ ದಶಾವತಾರ ಹೇಳಿ 'ದಣಿದು ಬಂದಿದ್ದೇನೆ ಬಿಸಿ ಬಿಸಿ ಕಡುಬು ಕಜ್ಜಾಯ ದೋಸೆ ಬಡಿಸಮ್ಮ' ಎಂದು ಕೇಳುವ ಸನ್ನಿವೇಷವು ಬಹು ಸುಂದರವಾಗಿದೆ. ಖಂಡ ಕಾವ್ಯಗಳಲ್ಲಿಯೂ ಅಲ್ಲಲ್ಲಿ ದಶಾವತಾರದ ವರ್ಣನೆ ಕಂಡುಬರುತ್ತದೆ.

**೪.೫. ಲೋಕನೀತಿ:–**

ಹರಿದಾಸರು ಮತ್ತೊಬ್ಬರನ್ನು ಮೆಚ್ಚಿಸಲು ಸಾಹಿತ್ಯವನ್ನು ರಚಿಸಿದವರಲ್ಲ. ಸಾಹಿತ್ಯವನ್ನು ನಿರ್ಮಿಸಲೇಬೇಕೆಂಬ ಉದ್ದೇಶವನ್ನು ಹೊಂದಿದವರಲ್ಲ. ಶಿವಶರಣರು ತಮ್ಮ ಅನುಭವ ಮತ್ತು ಅನುಭಾವಗಳನ್ನು ಸಾಹಿತ್ಯ ರೂಪದಲ್ಲಿ ಅಭಿವ್ಯಕ್ತಗೊಳಿಸಿದ ಹಾಗೆಯೇ ಹರಿದಾಸರೂ ತಮ್ಮ ಬದುಕಿನಲ್ಲಿ ಕಂಡ ಸುತ್ತಮುತ್ತಲಿನ ಸಂಗತಿಗಳಿಗೆ ನೀಡಿದ ತಕ್ಷಣದ ಪ್ರತಿಕ್ರಿಯೆಯೆ ದಾಸಸಾಹಿತ್ಯವಾಗಿ ರೂಪತಾಳಿತು. ಇಲ್ಲಿಯವರೆಗೆ ಸಾಹಿತ್ಯವು ಪ್ರೌಢವಾದ ಸಂಸ್ಕೃತವನ್ನು ಬಳಸಿರುವುದನ್ನು ತಿರಸ್ಕರಿಸಿದ ಕೀರ್ತನಕಾರರು ಜನಸಾಮಾನ್ಯರ ಆಡುನುಡಿಯ ಕನ್ನಡ ಭಾಷೆಯನ್ನು ಸಾಹಿತ್ಯ ಭಾಷೆಯಾಗಿ ಬಳಸಿಕೊಂಡರು. ಇದಕ್ಕೆ ಶಿವಶರಣರ ವಚನಸಾಹಿತ್ಯ ಪ್ರೇರಣೆ ನೀಡಿದೆ. ಆಧ್ಯಾತ್ಮಿಕ ಮತ್ತು ನೈತಿಕ ವಿಷಯಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಲು ಅತ್ಯಂತ ಸರಳೀಕರಣಗೊಳಿಸಿ ಹೇಳಿರುವುದು ದಾಸರ ಹಿರಿಮೆಯಾಗಿದೆ.

ದಾಸಸಾಹಿತ್ಯದ ಮುಖ್ಯ ಗುರಿ ವ್ಯಕ್ತಿಯ ಆತ್ಮೋದ್ಧಾರ. ಆ ಮೂಲಕ ಸಾಮಾಜಿಕ ವ್ಯವಸ್ಥೆಯ ಪಾವಿತ್ರ್ಯತೆಯನ್ನು ಸಾಧಿಸುವುದು. ಕೇವಲ ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳನ್ನು ಮಾತ್ರ ವ್ಯಕ್ತಪಡಿಸದೆ, ಲೋಕನೀತಿ, ಜನರ ಗುಣ, ಮನೋದೌರ್ಬಲ್ಯ ವಿಡಂಬನೆ, ಅನುಭಾವದ ನುಡಿಗಳನ್ನು, ಚಿಂತನೆಗಳನ್ನು ನಿರರ್ಗಳಗವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಏನೇ ಹೇಳಿದರೂ ಅದನ್ನು ತಾವು ಅನುಭವಿಸಿಯೇ ಹೇಳಿರುವರು.

ಲೋಕನೀತಿಯನ್ನು ಹೊಂದಿರುವ ಕೀರ್ತನೆಗಳನ್ನು ಅತೀ ಹೆಚ್ಚು ರಚಿಸಿದವರಲ್ಲಿ ಪುರಂದರದಾಸರಿಗೆ ಮೊದಲ ಪ್ರಾಸಸ್ತ್ಯ. ಅವರು ಪ್ರಸ್ತಾಪಿಸಿರುವಷ್ಟು ಲೋಕನೀತಿಗಳನ್ನು ಬೇರೆ ಯಾವ ಹರಿದಾಸರು ಬಳಸಿಲ್ಲ. ತಮ್ಮ ಗಮನಕ್ಕೆ ಬಂದ ತಪ್ಪನ್ನು ಯಾವ ಮುಲಾಜಿಗೆ ಒಳಗಾಗದೆ ಹೇಳಿರುವುದು ಪುರಂದರದಾಸರ ಎದೆಗಾರಿಕೆ. ವೇಷ ಲಂಪಟರನ್ನು ವ್ಯಂಗ್ಯಪೂರ್ಣವಾಗಿ ಟೀಕಿಸಿ ತಿರಸ್ಕರಿಸಿದ್ದಾರೆ. ಇವರ ಪ್ರಭಾವ ಇನ್ನುಳಿದ ಹರಿದಾಸರ ಮೇಲೆಯೂ ಆಗಿರುವುದು ಕಂಡು ಬರುತ್ತದೆ.

ಜೀವೂಬಾಯಿಯೂ ತನ್ನ ಕಿರ್ತನೆಗಳಲ್ಲಿ ಭಗವಂತನ ಸಂಕೀರ್ತನೆಗೆ ಮೊದಲ ಆದ್ಯತೆ ನೀಡಿರುವಳು. ನಂತರದು ಆತ್ಮನಿವೇದನೆ. ಲೋಕನೀತಿಗೆ ಅಷ್ಟೊಂದು ಪ್ರಾಸಸ್ತ್ಯ ಕೊಡದ ಜೀವೂಬಾಯಿಯು ಕೇವಲ ಏಳು ಕೀರ್ತನೆಗಳಲ್ಲಿ ಲೋಕನೀತಿಯನ್ನು ಕುರಿತು ವಿವೇಚಿಸಿದ್ದಾಳೆ.

"ಏನು ಮಾಡಿದರೇನು ಹಾನಿಯಾಗದು ಪಾಪ
ಶ್ರೀನಿಕೇತನ ದಿವ್ಯನಾಮ ನೆನೆ ಮನವೆ"[೧೧೬]

ನಾವು ಎಷ್ಟೆ ಪರಿಪರಿಯಾಗಿ ಪ್ರಯತ್ನಿಸಿದರೂ ಅರ್ಜಿತ ಪಾಪವು ಪರಿಹಾರವಾಗದು. ಮನದ ಪಾಪವನ್ನು ತೊಳೆಯಲು ಯಂತ್ರ, ಮಂತ್ರಗಳ ಮೊರೆ ಹೋದರೆ ಆಗದು. ನಾವು ಮಾಡಿದ ಪಾಪವ ಕಳೆದುಕೊಳ್ಳಲು ನಾಮಸ್ಮರಣೆಯೊಂದೇ ದಿವ್ಯ ಸಾಧನ. ಆದ್ದರಿಂದ ಪ್ರತಿಯೊಬ್ಬರು ಶ್ರೀಹರಿಯ ದಿವ್ಯನಾಮವನ್ನು ನೆನೆಯಬೇಕೆಂದು ಹೇಳಿದ್ದಾಳೆ. ದೇವರು ಜಗತ್ತಿನ ಪ್ರತಿಯೊಂದು ವಸ್ತುವಿನೊಳಗೂ ನೆಲೆಸಿರುವನು. ಮಾನವ ಚಪಲಬುದ್ಧಿಯನ್ನು ಬಿಟ್ಟು ಅತ್ಯಂತ ಶ್ರದ್ಧೆ ಮತ್ತು ಭಕ್ತಿಯಿಂದ ಹರಿನಾಮವನ್ನು ನಿತ್ಯ ನೆನೆದು ಪಾಪವನ್ನು ಪರಿಹರಿಸಿಕೊಳ್ಳಬೇಕು.

"ದಾನಧರ್ಮಗಳಿಂದ ಧನ್ಯನಾದೆನು ಎನಲು
ಹಾನಿಯಾಗೋದು ಆಯು ಪ್ರತಿ ನಿಮಿಷದಿ
ಸ್ನಾನ ಜಪದೊಳಗೆ ಯಾರೆನೆಗೆ ಸರಿ ಎನದೆ
ಮೌನದಿಂದ ನಾಮವ ಧ್ಯಾನಿಸುವ ತವಕ"[೧೧೭]

ದಿವ್ಯ ನಾಮವನ್ನು ನೆನೆಯದೆ, ದಾನಧರ್ಮಗಳನ್ನು ಮಾಡಿ ಪಾಪ ಕಳೆಯುತ್ತೇನೆನಲು ಆಯುಷ್ಯ ಹಾನಿಯಾಗುವುದು. ಜಪತಪಗಳಲ್ಲಿ ನನಗಾರು ಸರಿಯಿಲ್ಲವೆಂದು ಗರ್ವಿತನಾಗದೆ ಮೌನವಾಗಿದ್ದುಕೊಂಡು ಹರಿನಾಮವನ್ನು ನೆನೆಯಬೇಕು. ಜೀವನದಲ್ಲಿ ಎಲ್ಲ ರೀತಿಯಿಂದ ಸುಖಿಯಾಗಿರಬೇಕಾದರೆ ರಾತ್ರಿ-ಹಗಲು ಶ್ರೀಹರಿಮೂರ್ತಿಯನ್ನು ನೆನೆಯುತ್ತ ಜೀವಿಸಬೇಕು. ಇದನ್ನು ಬಿಟ್ಟು ಹಲವು ರೀತಿಯಲ್ಲಿ ನಾವು ಮಾಡಿದ ಪಾಪವನ್ನು ಕಳೆದುಕೊಳ್ಳಲು ಎಷ್ಟೇ ಪ್ರಯತ್ನ ಪಟ್ಟರೂ ಸಾಧ್ಯವಿಲ್ಲ. ಈ ಮೂಲಕ ಜೀವೂಬಾಯಿಯು ಲೋಕದ ಜನತೆಗೆ ತಮ್ಮ ತಮ್ಮ ಪಾಪಗಳನ್ನು ಹರಿಸ್ಮರಣೆ ಮಾಡುವ ಮೂಲಕ ಪರಿಹರಿಸಿಕೊಳ್ಳಬೇಕೆಂಬ ಮಾತನ್ನು ಹೇಳಿದ್ದಾಳೆ. ಇದನ್ನು ಬಿಟ್ಟು ಮಾಡುವ ಉಳಿದ ಪ್ರಯತ್ನಗಳೆಲ್ಲವೂ ವ್ಯರ್ಥವೆಂದು ತಿಳಿಸಿರುವಳು.

ಈ ದೇಹ ಭವಸಾಗರದಲ್ಲಿ ಬಿದ್ದು ಹೊರಳಾಡಿ ಬಹು ಮಲಿನವಾಗಿದೆ. ಮಲಿನಗೊಂಡ ದೇಹವನ್ನು ಹಾಗೂ ಮನಸ್ಸನ್ನು ತೊಳೆಯುವುದು ಮುಖ್ಯ. ಎಲ್ಲಿಯವರೆಗೆ ನಾವು ಈ ಭವಕೂಪದಲ್ಲಿ ಬಿದ್ದು ಹೊರಳಾಡುವೆವೋ ಅಲ್ಲಿಯವರೆಗೆ ನಮ್ಮ ಬದುಕು ಸಾರ್ಥಕಗೊಳ್ಳದು. ವಿವಿಧ ಜಲ, ಪರಿಮಳಗಳಿಂದ ಇದನ್ನು ತೊಳೆದರೆ ಶುದ್ಧಿಯಾಗದು. ಬಹಿರಂಗವನ್ನು ತೊಳೆಯುವುದು ಸರಳ; ಆದರೆ ಅಂತರಂಗದ ಮಲಿನವನ್ನು ತೊಳೆಯುವುದು ಬಲು ಕಷ್ಟ.

"ತೊಳೆಯಲೆ ಬೇಕಿದನು ಮನುಜ
ಭವಕೂಪದಿ ಬಿದ್ದು ತೊಳಲಿ ಬಳಲಿ
ಮಲಿನವಾಗಿಹ ಮನ ಹರಿಧ್ಯಾನ ಜಲದಲಿ"[೧೧೮]

ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರಗಳೆಂಬ ಆರು ವಿಧದ ತಾಪಗಳಿಂದ ಹದಗೆಟ್ಟಿರುವ ಮನಸ್ಸನ್ನು, ಇಂದ್ರೀಯ ಸುಖಗಳಲ್ಲಿ ಮುಳುಗಿ ತೊಳಲಾಡುತ್ತಿರುವ ದೇಹ ಮತ್ತು ಮನವನ್ನು ಹರಿಧ್ಯಾನವೆಂಬ ಜಲದಿಂದ ತೊಳೆಯಬೇಕು. ದುರ್ಜನ ಸಂಗದಿಂದ ಮನ ವಿಕಾರಗೊಂಡಿರಲು ಅದನ್ನು ದಿವ್ಯನಾಮದ ಬಲದಿಂದ ನಿರ್ಮಲಗೊಳಿಸಬೇಕು. ಮನದೊಳಗೆ ತುಂಬಿರುವ ವಿಷಯವಾಸನೆಯನ್ನು ಕಳೆದುಕೊಳ್ಳವವರೆಗೆ ಮನುಷ್ಯನು ಆಂತರಿಕ ಶುದ್ಧಿಯನ್ನು ಹೊಂದಲಾರನು. ಆದ್ದರಿಂದ "ಎಲೆ ಮಾನವನೆ ಭವರೂಪದಲ್ಲಿ ಬಿದ್ದು ಹೊರಳಾಡಿ ಬಳಲಿ ಹೊಲಸಾಗಿರುವ ನಿನ್ನ ಮನಸ್ಸನ್ನು ಹರಿನಾಮ ಜಲದಿಂದ ತೊಳೆದುಕೋ" ಎಂದು ಜೀವಮ್ಮ ಲೋಕದ ಜನತೆಗೆ ತಿಳಿಸಿರುವಳು.

ಈ ಜಗದಲ್ಲಿ ಎಲ್ಲ ಕಡೆಗೆ ನಿಂದಕರು ತುಂಬಿರುವರು. ಪ್ರತಿಯೊಂದು ಸಂದಿ-ಸಂದಿಯಲ್ಲಿ ಹಂದಿಗಳಿರುವಂತೆ; ನಿಂದೆ ಮಾಡುವ ಜನರಿರುವರು. ಸಮಾಜದಲ್ಲಿ ಎಲ್ಲ ಕಾಲಗಳಲ್ಲಿಯೂ ಒಳ್ಳೆಯ ಜನರನ್ನು, ಸಮಾಜ ಸುಧಾರಕರನ್ನು, ಧಾರ್ಮಿಕ ನಾಯಕರನ್ನು, ಅನುಭಾವಿಗಳನ್ನು, ಸಾಮಾನ್ಯ ಜನತೆ ನಿಂದಿಸುತ್ತಾ ಬಂದಿದ್ದಾರೆ. ರಾಮಾಯಣದಲ್ಲಿ 'ಓಡಿಹೋದ ಸೀತೆಯನ್ನು ಮರಳಿ ತರಲು ನಾನೇನು ಸೊಟ್ಟ

ರಾಮನಲ್ಲ' ಎಂದು ರಾಮನನ್ನು ಒಬ್ಬ ಅಗಸ ನಿಂದಿಸಿರುವುದು ಪ್ರಸ್ತಾಪಿತವಾಗಿದೆ. ಜ್ಞಾನಿಗಳು ಎಂದಿಗೂ ನಿಂದೆಯನ್ನು ಮಾಡುವುದಿಲ್ಲ. ಅಲ್ಪಜ್ಞಾನಿಗಳು ಯಾವಾಗಲೂ ನಿಂದನೆಯಲ್ಲಿ ತೊಡಗಿರುವರು.

"ದಾಸರ ದೂಷಿಪರೊ ಕುಜನರು ಹರಿ
ದಾಸರ ನಿಂದಿಪರೊ"[೧೧೯]

ಎಂಬ ವಾಸ್ತವಿಕ ಸ್ಥಿತಿಯನ್ನು ಜೀವಮ್ಮ ನಿರೂಪಿಸಿರುವಳು. ನಿಂದನೆಯಿಂದ ಮುಂದೇನಾಗುವುದೆಂಬ ಅರಿವು ಇಲ್ಲದೇ, ತೊಂದರೆಗಳನ್ನು ಲಕ್ಷಿಸದೇ ಮಂದಮತಿಗಳು ತಮ್ಮ ಇಡೀ ಬದುಕನ್ನು ಮತ್ತೊಬ್ಬರನ್ನು ನಿಂದಿಸುವುದರಲ್ಲಿಯೇ ಕಳೆಯುತ್ತಿದ್ದಾರೆ. ದಾಸರು ಅಪಾರ ಭಕ್ತಿಯನ್ನು ಹೊಂದಿದ ಶ್ರೀಹರಿಯ ಪರಮ ಸೇವಕರು; ಅವರ ಮಹಿಮೆ ಅಪಾರವಾದುದು. ಇಂಥ ಅಪಾರ ಮಹಿಮೆಯನ್ನು ಹೊಂದಿರುವ ಹರಿದಾಸರನ್ನು ನಿಂದಿಸುವುದರಿಂದ ಹಲವು ರೀತಿಯ ತೊಂದರೆಗಳಿಗೆ ಒಳಗಾಗಬೇಕಾಗುತ್ತದೆ. ಈ ಮೂಲಕ ಮಾನವನು ಯಾರೊಬ್ಬರನ್ನು ನಿಂದಿಸಬಾರದೆಂಬ ನೀತಿಯನ್ನು ತೀಳಿಸಿದ್ದಾಳೆ.

"ಬೆಳಗಾಗಲು ಅರಘಳಿಗೆ ಇರುತಿರೆ"[೧೨೦]

ಕೀರ್ತನೆಯಲ್ಲಿ ತನ್ನ ದಿನಚರಿಯನ್ನು ತಿಳಿಸಿರುವಳು. ಪ್ರಾರ್ಥರ್ವಿಧಿಗಳನ್ನು ಮುಗಿಸಿ ಮುಖ ತೊಳೆದು ಹರಿಧ್ಯಾನದಲ್ಲಿ ತಲ್ಲೀನಳಾಗಿ ಶ್ರೀ ತುಳಸಿಯ ಪೂಜಿಸುವಳು. ದೇವರ ಮನೆಗೆ ಹೋಗಿ ಜಯ-ವಿಜಯರಿಗೆ ನಮಿಸುವಳು. ಶ್ರೀಪತಿಯನ್ನು ಮನದಲ್ಲಿ ಧ್ಯಾನಿಸಿ ದೇವರ ಮನೆ ಸಾರಿಸಿ ರಂಗವಲ್ಲಿ ಇಡುವಳು. ಗೋವುಗಳ ಕಡೆ ಹೋಗಿ ಗೋವಿಂದನನ್ನು, ಗಜೇಂದ್ರನನ್ನು ಸ್ಮರಿಸುವಳು. ಕೃಷ್ಣನ ಬಾಲಲೀಲೆ ಕೇಳಿ ಬ್ರಾಹ್ಮಣರಿಗೆ ಹಾಗೂ ಹಿರಿಯರಿಗೆ ವಂದಿಸುವಳು. ನದಿಯ ಸ್ನಾನಕೆ ಹೋಗಿ ಶ್ರೀ ಹರಿಸ್ಮರಣೆ ಮಾಡಿ ಭಾಗೀರತಿಯಲ್ಲಿ ಮೀಯ್ಯುವಳು. ಜಲದಲ್ಲಿರುವ ಕಮಲವ ಕಂಡು ಬ್ರಹ್ಮನನ್ನು ಸ್ಮರಿಸುವಳು. 'ದೇವರ ರಥವನು ತೊಳೆಯುವೆ' ಎಂಬ ಭಾವದಿಂದ ಸ್ನಾನ ಮಾಡಿ ಮುದ್ರೆಗಳನ್ನು ಹಚ್ಚುವಳು. ಗಂಧಾಕ್ಷತೆಗಳಿಂದ ಹರಪೂಜೆಗೆ ಸಿದ್ಧಳಾಗುವಳು. ಬಹುಭಕ್ತಿಯಿಂದ ಬ್ರಹ್ಮಪಿತನನ್ನು ಪೂಜಿಸುವಳು. ತಿಳಿದವರೆಲ್ಲರೂ ಪರಮಾತ್ಮನನ್ನು ಈ ರೀತಿಯಾಗಿ ಸೇವೆಗೈಯ್ದು ಪಾಪವನ್ನು ಕಳೆದುಕೊಳ್ಳಬೇಕೆಂಬ ಭಾವ ಇಲ್ಲಿ ವ್ಯಕ್ತಗೊಂಡಿವೆ. ತನ್ನ ದಿನಚರಿಯ ಮೂಲಕ ಜೀವೂಬಾಯಿಯು ಪ್ರತಿಯೊಬ್ಬ ವ್ಯಕ್ತಿಯು ಶ್ರೀಹರಿಯನ್ನು ಆರಾಧಿಸಬೇಕು. ಇದರಿಂದ ಭವ ಬಂಧನದಿಂದ ಬಿಡುಗಡೆ ಹೊಂದಬೇಕೆಂದು ತಿಳಿಸಿದ್ದಾಳೆ.

ಪ್ರತಿಯೊಬ್ಬರೂ 'ಹರಿನಾರಾಯಣ' ನ ಸ್ಮರಿಸುವುದರಿಂದ ಪಾಪಗಳು ಪರಿಹಾರವಾಗುತ್ತವೆ.

"ಹರಿ ಎಂದ ಮಾತ್ರದಲಿ ಹತ್ತಿದ ಪಾಪ
ಪರಿಹಾರವಾಗುವುದು ಕೇಳಿ"[೧೨೧]

ಯಾರು ಹರಿದಾಸರೊಂದಿಗೆ ಒಡನಾಟವನ್ನು ಸದಾಕಾಲ ಹೊಂದಿರುತ್ತಾರೆಯೋ ಅಂಥವರನ್ನು ಹರಿ ಕರುಣಿಸಿ ವಿವಿಧ ಸೌಭಾಗ್ಯಗಳನ್ನು ದಯಪಾಲಿಸುವನು. ಸಜ್ಜನ ಸಂಗದಿಂದಾಗುವ ಲಾಭವನ್ನು ಜೀವಮ್ಮ ಇಲ್ಲಿ ತಿಳಿಸಿದ್ದಾಳೆ. ಇದರ ಮೂಲಕ ಲೋಕದ ಎಲ್ಲ ಜನರಿಗೆ ಸಜ್ಜನ ಸಂಗದಲ್ಲಿರಬೇಕೆಂದು ಕಿವಿಮಾತು ಹೇಳಿದ್ದಾಳೆ.

ತಾವೊಬ್ಬರೇ ಹರಿಸ್ಮರಣೆ ಮಾಡದೆ ತಂದೆ-ತಾಯಿ, ಬಂಧು-ಬಳಗ, ಹೆಂಡತಿ-ಮಕ್ಕಳೆಲ್ಲ ಒಂದೆಡೆ ಕುಳಿತು ಪರಮಾತ್ಮನನ್ನು ಭಜಿಸಬೇಕು. ವ್ಯಕ್ತಿ ತಾನೊಬ್ಬನೇ ಮುಕ್ತನಾದರೆ ಸಾಲದು. ತನ್ನೊಂದಿಗೆ ತನ್ನ ಸಮೂಹವೂ, ಲೋಕವೂ ಮುಕ್ತಿಯನ್ನು ಗಳಿಸಬೇಕೆಂಬುದು ಶಿವಶರಣರ ಮತ್ತು ಹರಿದಾಸರ ಮುಖ್ಯ ಆಶಯ. ಅವರ ಕೀರ್ತನೆಯೇ ಇದಕ್ಕೆ ನಿದರ್ಶನ.

"ಬಂಧುಬಳಗ ಮಂದಿ ಮಕ್ಕಳೆಲ್ಲರೂ ಕೂಡಿ
ಒಂದೆ ಸ್ಥಳದಿ ಭಜನೆಯ ಮಾಡಿ
ಇಂದಿರಾರಮಣನ ಚಂದದಿ ಪೊಗಳಲು
ಬಂದ ದುರಿತಗಳ ಪೊಂದಿಸನೆಂದೆಂದು"೧೨

ಪುರಾಣ, ಕೀರ್ತನ, ಹರಿಕಥೆಗಳನ್ನು ಎಲ್ಲರೂ ಕೂಡಿ ಕೇಳುವ, ಹೇಳುವ ಸತ್ಕಾರ್ಯದಲ್ಲಿ ತೊಡಗುವುದರಿಂದ ನಾವು ಮಾಡಿದ ಪಾಪ ಪರಿಹಾರವಾಗುವುದು. ಆದ್ದರಿಂದಲೆ ಹರಿದಾಸರು ನಿರಂತರವಾಗಿ ತಮ್ಮನ್ನು ಭಗವಂತನ ಸಂಕೀರ್ತನೆಯಲ್ಲಿ ತೊಡಗಿಸಿಕೊಂಡರು. ಹರಿಸಂಕೀರ್ತನೆಯಲ್ಲಿ ಮೈಮರೆತು ಕುಣಿದಾಡಿ ಧನ್ಯತೆಯನ್ನು ಹೊಂದಿದರು. ಈ ರೀತಿಯ ಧನ್ಯತೆಯನ್ನು ಲೋಕದ ಸಕಲ ಜನತೆ ಹೊಂದಿ ಭವ ಬಂಧನದಿಂದ ಬಿಡುಗಡೆ ಹೊಂದಬೇಕೆಂಬುದು ಜೀವಮ್ಮಳ ಮನೀಷೆ.

ಇಷ್ಟೆಲ್ಲ ತಿಳಿಹೇಳಲು ಕೆಲವು ಜನರು ಬದುಕಿನಲ್ಲಿ ಬಹು ವ್ಯಾಕುಲತೆಯಿಂದ ಪರಮಾತ್ಮನ ಮೇಲೆ ವಿಶ್ವಾಸವಿಲ್ಲದಂತಿರುವರು. ಅಂಥವರಿಗೆ

"ಯಾಕೆ ಮನದಲಿ ಶೋಕಿಸುತ್ತಿರುವೆ ಜಗ
ದೇಕನಾಥನು ಸಾಕುತಿರುವನು ನೀ ತಿಳಿಯದಿರುವೆ
ಲೋಕನಾಥನ ವಿವೇಕದಿ ಸ್ತುತಿಸದೆ
ವ್ಯಾಕುಲದಿಂ ಮನ ಕಳವಳಗೊಳುತಲಿ

ಸೃಷ್ಟಿ ಕರ್ತನು ರಕ್ಷಿಸುತ್ತಿರುವ
ದುರಿತಂಗಳ ರಾಸಿಯ
ಬೆಟ್ಟಗಳ ತಂದೊಟ್ಟುತಿರುವ

ಅದು ತಿಳಿಯದು ನೀ ಬಲು
ಕಷ್ಟಗಳ ಪಡುತಿರ್ಪ ವಿಷಯಗಳ
ನೋಡುತ ನಗುತಿರುವ
ಇಷ್ಟು ಈತನ ಪ್ರಭಾವವು ತಿಳಿಯದೆ
ಲಕ್ಷ್ಮಿರಮಣ ರಕ್ಷಿಸೆನ್ನುತ ಸ್ಮರಿಸದೆ

ನಾನು ನನ್ನದು ಎಂಬ ಅಭಿಮಾನ
ಅದು ಹೋಗುವ ತನಕ
ಜ್ಞಾನಮಾರ್ಗಕೆ ಇಲ್ಲ ಸಾಧನ
ವೆಂದರಿಯುತ ಮನದಲಿ
ಧ್ಯಾನಿಸುತ್ತಿರು ಶ್ರೀನಿಧಿ ಗುಣಗಳನು
ಹೀಗಿರುವುದೇ ಪ್ರಧಾನ
ಧ್ಯಾನ ಗಾನ, ಮೌನಾದಿ ವ್ರತಗಳನು
ಶ್ರೀನಿಧಿಗರ್ಪಿಸಿ ಮನ ಹರುಷಿಸದಲೆ"[೧೨೩]

ಎಲೆ ಮನುಜನೆ ಏಕೆ ದು:ಖಪಡುತ್ತಿರುವೆ "ಇಡೀ ಜಗತ್ತನ್ನು ಶ್ರೀಹರಿ ಸಾಕಿ ಸಲುಹುತ್ತಿದ್ದಾನೆ" ಎಂದರಿಯದೆ, ಈ ಲೋಕದೊಡೆಯನನ್ನು ಸುಜ್ಞಾನದಿಂದ ಸ್ತುತಿಸದೆ, ವ್ಯಾಕುಲತೆಗೊಳಗಾಗಿ ಕಳವಳ ಪಡುತ್ತಿರುವೆ. ಬೆಟ್ಟದಷ್ಟು ಪಾಪಗಳ ರಾಶಿಯನ್ನು ಪರಿಹರಿಸುತ್ತಿರುವನು. ನೀನು ಪಡುತ್ತಿರುವ ಬಲು ಕಷ್ಟಗಳನ್ನು ನೋಡಿ ನಗುತ್ತಿರುವನು. ಶ್ರೀಹರಿಯ ಈ ರೀತಿಯ ಪ್ರಭಾವ ಮತ್ತು ಮಹಿಮೆಯನ್ನು ಅರಿಯದೇ ನೀನು ಮನದಲ್ಲಿ ದು:ಖಿಸುತ್ತಿರುವಿ. 'ನಾನು-ನನ್ನದು' ಎಂಬ ಅಭಿಮಾನ ಶೂನ್ಯಗೊಳ್ಳುವತನಕ ಜ್ಞಾನ ಮಾರ್ಗ ದೊರೆಯಲಾರದು. ಇದನ್ನು ಅರಿತು ಶ್ರೀಹರಿಯ ಗುಣಗಳ ಸ್ತುತಿ ಮುಖ್ಯವೆಂದು ಅದರಲ್ಲಿ ತನ್ಮಯನಾಗು. ಧ್ಯಾನ, ಗಾನ, ಮೌನಗಳನ್ನು ಶ್ರೀನಿಧಿಗೆ ಅರ್ಪಿಸಿ ಧನ್ಯತೆಯನ್ನು ಹೊಂದು, ಎಂದು ಜೀವಮ್ಮ ಕಷ್ಟದಲ್ಲಿ ಸಿಲುಕಿಕೊಂಡ ಹರಿಯ ಮೇಲೆ ವಿಶ್ವಾಸವಿಡದ ಮನುಷ್ಯರಿಗೆ ಅತಿ ಪ್ರೀತಿಯಿಂದ ಹೇಳಿದ್ದಾಳೆ. ಇಡೀ ಜಗತ್ತು ಪರಮಾತ್ಮನ ಮನಸ್ಸಿನಂತೆ ಸಾಗುತ್ತದೆ. ಎಲ್ಲರನ್ನೂ ಆತನು ತನ್ನ ಮಕ್ಕಳಂತೆ ಅಪಾರ ಮಾತೃವಾತ್ಸಲ್ಯದಿಂದ ಸಾಕಿ ಸಲುಹುವನು. ಅವನೇ ಎಲ್ಲರಿಗೂ ತಂದೆ-ತಾಯಿ, ಬಂಧು-ಬಳಗ ಎಂಬ ಸತ್ಯಾಂಶವನ್ನು ಜೀವಮ್ಮ ಲೋಕಕ್ಕೆ ತೋರಿದ್ದಾಳೆ.

ಹೀಗೆ ಜೀವಮ್ಮಳು ಕೆಲವೇ ಕೀರ್ತನೆಗಳಲ್ಲಿ ಲೋಕನೀತಿಯ ವಿಚಾರಗಳನ್ನು ತಿಳಿಸಿರುವಳು. ಅವಳ ಎಲ್ಲ ವಿಚಾರಗಳಲ್ಲಿ ಪ್ರತಿಯೊಬ್ಬರು ತಮ್ಮ ಮನಸ್ಸನ್ನು ಹರಿಜಲದಿಂದ ತೊಳೆದುಕೊಳ್ಳಬೇಕು. ಹರಿನಾಮ

ಸ್ಮರಣೆ ಮಾಡದೆ ಪಾಪವು ಪರಿಹಾರವಾಗದು. ಪ್ರತಿನಿತ್ಯ ಹರಿಸಂಕೀರ್ತನೆಯಲ್ಲಿ ತನ್ಮಯರಾಗಿರಬೇಕು. ಸುಮ್ಮನೆ ಕಾಲಕಳೆಯಬಾರದು. ಎಲ್ಲರೂ ಕೂಡಿಕೊಂಡು ಭಜನೆ ಮಾಡಬೇಕು. "ಇಡೀ ಜಗತ್ತನ್ನು ಪರಮಾತ್ಮನು ರಕ್ಷಿಸುತ್ತಾನೆ" ಎಂಬ ಲೋಕನೀತಿಯ ವಿಚಾರಗಳನ್ನು ಅಭಿವ್ಯಕ್ತಗೊಳಿಸಿದ್ದಾಳೆ.

**೪.೬. ಸಂಪ್ರದಾಯದ ಹಾಡುಗಳು**

ದಾಸಸಾಹಿತ್ಯ ಪರಂಪರೆಯಲ್ಲಿ ಸಂಪ್ರದಾಯದ ಹಾಡುಗಳನ್ನು ಕೇವಲ ಮಹಿಳಾ ಕೀರ್ತನಕಾರ್ತಿಯರು ಮಾತ್ರ ರಚಿಸಿರುವುದು ಕಂಡುಬರುತ್ತದೆ. ವಿಶೇಷ ಪೂಜೆ, ಹಬ್ಬ-ಹರಿದಿನಗಳು, ಮದುವೆ, ಸೀಮಂತ, ನಾಮಕರಣ, ಶೋಭನದ ಸಂದರ್ಭದಲ್ಲಿ ಹಾಡುವ ಹಾಡುಗಳನ್ನು ಸಂಪ್ರದಾಯದ ಹಾಡುಗಳು ಎಂದು ಗುರುತಿಸುತ್ತೇವೆ. ಇಂಥ ಹಾಡುಗಳು ನಮ್ಮ ಜನಪದ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯತ್ತವೆ. ಗ್ರಾಮೀಣ ಬದುಕಿನ ಹಿನ್ನೆಲೆಯು ಈ ಹಾಡುಗಳಿಗಿದೆ. ಇದೇ ರೀತಿಯಾದ ರಚನೆಗಳನ್ನು ಗಲಗಲಿ ಅವ್ವ, ಹರಪನಹಳ್ಳಿ ಭೀಮವ್ವ, ಹೆಳವನಕಟ್ಟೆ ಗಿರಿಯಮ್ಮನವರು ರಚಿಸಿದ್ದಾರೆ. ಅವರ ಪ್ರಭಾವಕ್ಕೊಳಗಾಗಿ ಜೀವೂಬಾಯಿಯೂ ಸಹ ಸಂಪ್ರದಾಯದ ಹಾಡುಗಳನ್ನು ರಚಿಸಿರುವಳು. ಶ್ರೀಮಂತ ಗ್ರಾಮೀಣ ಸಂಪ್ರದಾಯ ಸಂಸ್ಕೃತಿಯ ನಡುವೆ ಬೆಳೆದಿರುವ ಜೀವೂಬಾಯಿಯು ತನ್ನ ಮನದ ನೆಮ್ಮದಿಗೆ, ಧೈರ್ಯ ಸಂಪಾದನೆಗೆ ಮನೆಯಲ್ಲಿ ವಿವಿಧ ವ್ರತ-ನೇಮ, ಪೂಜೆಗಳನ್ನು ಬಹು ಭಕ್ತಿಯಿಂದ ನಡೆಸುತ್ತಾ ಬದುಕಿದ್ದವಳು. ಬಾಲ್ಯದಿಂದಲೇ ತನ್ನ ಸುತ್ತಲಿನ ಪರಿಸರದಲ್ಲಿ ನಡೆಯುವ ಹಲವಾರು ಆಚರಣೆಗಳನ್ನು ಕಣ್ತುಂಬ ನೋಡಿದ್ದಾಳೆ. ಮುಂದೆ ಬೆಳೆದಂತೆ ಅವುಗಳನೆಲ್ಲಾ ಹಾಡುಗಳಾಗಿ ರೂಪಿಸಿದ್ದಾಳೆ. ರಚನೆಗಳನ್ನು ರಾಗಬದ್ಧವಾಗಿ ಹಾಡಿರಲೂ ಸಾಧ್ಯವಿದೆ.

ಹಸೆಗೆ ಕರೆಯುವುದು, ಬಾಗಿಲು ಕಟ್ಟುವುದು, ಉಡಿ ತುಂಬುವುದು, ಜೋಗುಳ, ಮಂಗಳ, ಶೋಭಾನ, ಆರತಿ ಎತ್ತುವುದು ಈ ರೀತಿಯ ಹಾಡುಗಳು ಜೀವಮ್ಮಳಿಗೆ ಇರುವ ಸಂಪ್ರದಾಯದ ಅರಿವು ಮತ್ತು ಶ್ರದ್ಧಾ ಭಕ್ತಿಗಳನ್ನು ತಿಳಿಸುತ್ತವೆ.

**ಜೋಗುಳ ಹಾಡು:-** 'ಜೋಗುಳ' ಎಂದರೆ ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು, ಲಾಲಿಪದ, ನಾಮಕರಣದ ವೇಳೆ ಹಾಡುವ ಪದಗಳು ಎಂಬರ್ಥವಿದೆ. ಜೀವುಬಾಯಿಯು ಐದು ಜೋಗುಳ ಹಾಡುಗಳನ್ನು ಬರೆದಿರುವಳು.

"ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ಜೋ
ವಾಸುದೇವ ನಾರಾಯಣ ಜೋ ಜೋ
. . . . . . . . . . . . . . . . . . .

ಕುಂದಣಮಯವಾದ ಚಂದ ತೊಟ್ಟಿಲಲಿ
ಚಂದ್ರ ಸೂರ್ಯರ ಗೆಲುವ ಮುಖ ಕಾಂತೆಯಲಿ
ಇಂದಿರಾಪತಿ ಶ್ರೀಶ ಇಭರಾಜವರದ
ಮೂಕಾಂಬಿಕೆ ಮಲಗೆ ತೂಗುವೆ ಹರುಷದಲಿ"[೧೨೪]

ಕುಂದಣದಿಂದ ಆವೃತ್ತವಾದ ಸುಂದರ ತೊಟ್ಟಿಲ್ಲಲ್ಲಿ ಮಲಗಿರುವ ಸೂರ್ಯಚಂದ್ರರ ಮುಖಕಾಂತಿಯನ್ನು ಮೀರಿಸುವ ಇಂದಿರಾಪತಿಯಂತಹ ಕೆನ್ನೆ, ನಗುಮುಖದ ಹೊಳಪು, ಚಿಕ್ಕ ಮೂಗುತಿಯನ್ನಿಟ್ಟುಕೊಂಡು ನಲಿದಾಡುವ ಮೋಹಿನ ರೂಪದ ಹರಿಯನ್ನು ಮಲಗಿಸಿ ಲಾಲಿ ಹಾಡಿರುವಳು.

"ಕುಂದಣ ಕೆತ್ತಿದ ಚಂದದ ತೊಟ್ಟಿಲ
ಮಂದಗಮನೆಯರು ತಂದಿರಿಸಿದರು
ಸುಂದರಾಂಗಿ ವೈದೇಹಿಯನೆತ್ತುವ ಆ
ನಂದದಿ ಜೋಗುಳ ಪಾಡ್ವರು ಜೋ ಜೋ"[೧೨೫]

ಜನಕರಾಜನ ಮಗಳಾದ ಸೀತೆಯನ್ನು ಕುಂದಣದಿಂದ ಕೆತ್ತಿದ ಅಂದದ ತೊಟ್ಟಿಲಲ್ಲಿ ನಿಧಾನವಾಗಿ ತಂದಿರಿಸಿ, ಸುಂದರಾಂಗಿಯರು ಸೀತೆಯನ್ನು ಎತ್ತುತ ಸಂತೋಷದಿಂದ ಜೋಗುಳು ಹಾಡುವರು. ಇಲ್ಲಿ ಜೀವೂಬಾಯಿಯು ಬಾಲಕಿ ಸೀತೆಯ ಸೌಂದರ್ಯವನ್ನು ಹೇಳುವುದರೊಂದಿಗೆ ಕೌಸಲ್ಯ ಕಂದನ ರಮಣಿ, ಕಂಬುಕಂಠಿ ಕೋಕಿಲವಾಣಿ ಎಂದು ಕೊಂಡಾಡಿ ಲಾಲಿ ಹಾಡಿರುವಳು.

ಶ್ರೀ ತಂದೆ ಮುದ್ದುಮೋಹನ ವಿಠ್ಠಲದಾಸರ ಶಿಷ್ಯರು ಶ್ರೀ ಉರಗಾದ್ರಿ ವಿಠ್ಠಲದಾಸರು. ಇವರು ಕ್ರಿ.ಶ.೧೮೭೧ ರಿಂದ ೧೯೬೪ರ ವರೆಗೆ ಬದುಕಿದ್ದರು. ಇವರೇ ಜೀವೂಬಾಯಿಗೆ ಅಂಕಿತವನ್ನು ನೀಡಿದ ಗುರುಗಳು. ಜೀವಮ್ಮಳ ಹಾಗೆ ಉರಗಾದ್ರಿ ವಿಠ್ಠಲದಾಸರು ಅನೇಕ ಶಿಷ್ಯರಿಗೆ ಅಂಕಿತ ನೀಡಿದ್ದಾರೆ. ಅ ಎಲ್ಲ ಅಂಕಿತವನ್ನು

"ಜೋಜೋ ಜೋಜೋ ಜೋ ವೆಂಕಟೇಶ
ಜೋಜೋ ಜೋಜೋ ಜೋ ಶ್ರೀನಿವಾಸ"[೧೨೬]

ಎಂಬ ಹಾಡಿನಲ್ಲಿ ಸೇರಿಸಿಕೊಂಡು ಲಾಲಿ ಹಾಡಿದ್ದಾಳೆ. ತಂದೆ ಮುದ್ದುಮೋಹನ ವಿಠ್ಠಲರಿಂದ ಆರಂಭಗೊಂಡು ವೆಂಕಟೇಶ ವಿಠ್ಠಲ ಅಂಕಿತದವರೆಗೆ ೫೩ ಅಂಕಿತಗಳ ಪಟ್ಟಿ ಇಲ್ಲಿದೆ. ಇದು ಬಹು ಅಪರೂಪದ ದಾಖಲೆ

"ಚಿನ್ನದ ತೊಟ್ಲಗೆ ರನ್ನದ ಮಲಕು
ಕನ್ನಡಿ ಹೊಳೆವೂ ಮೇಲ್ಕಟ್ಟಿನ ಬೆಳಕು
ಸ್ವರ್ಣ ಮಂಟಪದಿ ರಾಜಿಪ ದಿವ್ಯ ಹೊಳಪು
ಕರ್ನೇರಲಂಕರಿಸಿ ನಲಿಯುವ ಕುಲುಕು ಜೋ ಜೋ"[೧೨೭]

ಬಾಲ ಗೋಪಾಲನನ್ನು ಬಂಗಾರದ ತೊಟ್ಟಿಲಲ್ಲಿ ಮಲಗಿಸಿರುವರು. ಅದಕ್ಕೆ ರತ್ನದ ಹಗ್ಗ, ಸುತ್ತಲ ಕನ್ನಡಿಯ ಹೊಳಪು ತುಂಬಿದೆ. ಪೂರ್ಣ ಮಂಟಪದಲಿ ಶೋಭಿಸುವ ಮಗುವನ್ನು ಕನ್ಯೆಯರು ಅಲಂಕರಿಸಿ ನಲಿದಾಡುತ್ತ ತೂಗುವರು. "ಬಂಗಾರದ ತೊಟ್ಟೀಲ ಬೆಳ್ಳಿಯ ಹುಡಿಹಗ್ಗ" ಎಂಬ ಜಾನಪದದ ಸಾಲುಗಳಿಗೆ ಇದು ಹತ್ತಿರವಿದೆ.

"ಜೋ ಜೋ ಶ್ರೀಹರಿ ಮಲಗೊ ಜೋಗುಳಪಾಡಿ
ಪಾಡಿ ತೂಗುವೆ ಮುದದಿ
ಯೋಗಿಗಳರಸನೆ ನಾಗರಶಯನನೆ
ಭಾಗವತರ ಪ್ರೀಯ ಬಾಗಿ ಸ್ತುತಿಪರೊ ನಿನ್ನ"[೧೨೮]

ಯೋಗಿಗಳರಸನಾದ ಕೃಷ್ಣನನ್ನು ಹಾಡಿ ಮಲಗಿಸುವ ಮಾತೃವಾತ್ಸಲ್ಯ ಭಾವ ಇಲ್ಲಿ ಮಡುಗಟ್ಟಿದೆ.

**ಆರೋಗಣೆ :–** ಶ್ರೀ ಕೃಷ್ಣನನ್ನು ಊಟ ಮಾಡುವಂತೆ ಪ್ರೇರೇಪಿಸುವ ಹಾಡುಗಳನ್ನು ಜೀವಮ್ಮ ಬರೆದಿರುವಳು. ಸಣ್ಣ ಮಕ್ಕಳು ಅಳುವಾಗ ಹಾಡು, ಕಥೆ ಹೇಳಿ, ಗೊಂಬೆಯನ್ನು ಕೊಟ್ಟು, ಬೇರೆ ಔಚಿತ್ಯದ ವಸ್ತುವನ್ನು ತೋರಿ ಊಟ ಮಾಡಿಸುವುದು ವಿಶೇಷವಾದುದು.

ಶ್ರೀ ಹರಿಯ ಪೂಜೆಯಲ್ಲಿ ಹಾಡುವ ಹಾಡುಗಳನ್ನು ಸಹ ಜೀವಮ್ಮ ಬರೆದಿದ್ದಾಳೆ.

"ಅಪ್ರಮೆಯನೆ ನಿನಗೆ ಅಪ್ಪಾಲು ಅತಿರಸ
ವಪ್ಪಾದ ವಡೆದೋಸೆ ಚಿತ್ರಾನ್ನವೊ
ಸತ್ಯಮೂರುತಿ ನಿನಗೆ ಮುತ್ತಿನಂಥಾ ಲಾಡು ಓಗರ
ಮತ್ತೆ ಪಾಯಸ ಮೊಸರು ಬುತ್ತಿ ವಿ
ಚಿತ್ರದಲಿ ತಂದರ್ಪಿಸಿಹರು"[೧೨೯]

ಇದೆಲ್ಲವನ್ನು ನೀನು ಸ್ವೀಕರಿಸಬೇಕು. ಅತಿ ಭಕ್ತಿಯಿಂದ ಬಗೆಬಗೆಯ ರುಚಿಕಟ್ಟಾದ ಆಹಾರ ಪದಾರ್ಥಗಳನ್ನು ತಯಾರಿಸಿ ಶ್ರೀಹರಿಗೆ ಅರ್ಪಿಸುವ ಅರ್ಪಣ ಭಕ್ತಿ ಭಾವ ಇಲ್ಲಿ ವ್ಯಕ್ತಗೊಂಡಿದೆ.

**ಉಡಿಯನ್ನು ತುಂಬುವುದು** :- ಇದು ಜಾನಪದ ಸಂಪ್ರದಾಯದಲ್ಲಿ ಬಹು ವಿಶಿಷ್ಟವಾದ ಕಾರ್ಯಕ್ರಮ. ಮದುವೆ, ಸೀಮಂತ, ಗಂಡನ ಮನೆಗೆ ಮೊದಲ ಬಾರಿ ಹೋಗುವಾಗ ಹೆಣ್ಣು ಮಕ್ಕಳಿಗೆ ಮುತ್ತೈದೆಯರು ಉಡಿಯನ್ನು ತುಂಬುವರು. ಇದಕ್ಕೆ ಮಡಿಲು ತುಂಬುವುದು ಎಂದೂ ಕರೆವರು. ಇಂದಿಗೂ ಈ ಪದ್ಧತಿ ರೂಢಿಯಲ್ಲಿದೆ. ಈ ಸಂಪ್ರದಾಯವನ್ನು ಜೀವಮ್ಮ ತನ್ನ ಹಾಡುಗಳಲ್ಲಿ ಪ್ರಸ್ತಾಪಿಸಿರುವಳು.

"ಉಡಿಯ ತುಂಬಿರೆ ಕಡಲೊಡೆಯನ
ಮಡದಿಗ್ಹರುಷದಿ
ಬಿಡಿಯ ಮುತ್ತು ಬಿಗಿದ ತಟ್ಟೆಯ
ಪಿಡಿದು ಬೇಗದಿ"[೧೩೦]

ಹಸಿರು ಸೀರೆಯನುಟ್ಟು, ಅಪಾರ ಆಭರಣಗಳನ್ನು ತೊಟ್ಟು, ಸದಾ ಶ್ರೀಹರಿಯ ಎದೆಯ ಮೇಲೆ ನೆಲೆಸಿರುವ ಲಕ್ಷ್ಮಿಗೆ ಮುತ್ತು, ಅರಿಶಿಣ, ಉತ್ತತ್ತಿ, ನಿಂಬೆ, ನೇರಳೆ, ಜಂಬು ನೇರಳೆ, ದ್ರಾಕ್ಷಿ, ಕದಳಿ, ದಾಳಿಂಬೆ, ತೆಂಗು, ಮಾದಳ, ಮಾವು, ಪನ್ನೀರಲುಗಳಿಂದ ಉಡಿಯ ತುಂಬುವ ಸುಮಂಗಲೆಯರ ವಿಧಿವಿಧಾನಗಳು ಬಲು ಸೊಗಸಾಗಿ ಮೂಡಿ ಬಂದಿವೆ.

**ಹಸೆಗೆ ಕರೆಯುವುದು:-** ಮದುವೆ, ಸೀಮಂತ, ಮುಂತಾದ ಶುಭ ಕಾರ್ಯಗಳಲ್ಲಿ ಹೆಣ್ಣನ್ನು ಕೂಡ್ರಿಸಲು ಹಸೆಯನ್ನು (ಹಸೆಮಣೆ) ಹಾಕಿರುತ್ತದೆ. ಈ ಹಸೆಗೆ ಹಾಡಿನ ಮೂಲಕ ಹೆಣ್ಣು ಮತ್ತು ಗಂಡನ್ನು ಕರೆಯುವ ಒಂದು ಸಂಪ್ರದಾಯದ ಆಚರಣೆಯಿದೆ.

"ಜಯಲಕ್ಷ್ಮಿ ಬಾ ಹಸೆಗೆ
ಜಯಜಯ ಜಗನ್ಮಾತೆ ತ್ರೈಲೋಕ ವಿಖ್ಯಾತೆ
ಮುತ್ತಿನ ಮಂಟಪದಿ ರತ್ನಪೀಠವಿರಿಸಿ
ಮುತ್ತೈದೆಯರು ನಿನ್ನ ಅರ್ಥಿಯಲಿ ಕರೆವರು"[೧೩೧]

ಕಾಲಿನಲ್ಲಿ ನಾದಗೈವ ಗೆಜ್ಜೆಗಳನ್ನು ಹಾಕಿಕೊಂಡು, ಹಸಿರು ಪೀತಾಂಬರವನ್ನುಂಟುಕೊಂಡು, ಮುತ್ತಿನಹಾರ, ಪದಕ ಕೈಗಡಗಗಳಿಂದ ಸಿಂಗಾರಗೊಂಡ ಹೆಣ್ಣನ್ನು ಮುತ್ತೈದೆಯರು ಕರೆದು ತರುವರು. ಹೀಗೆ ಬರುವಾಗ ಆ ಹೆಣ್ಣು ನಾಚಿಕೊಳ್ಳುವಳು. ಇಂಥ ಸಂದರ್ಭಗಳಲ್ಲಿ ಹಸೆಯ ಹಾಡನ್ನು ಹಾಡುವರು.

ಹೆಣ್ಣನ್ನು ಕರೆದಂತೆ ಗಂಡನ್ನು ಹಸೆಮಣೆಗೆ ಕರೆಯುವಾಗ ಹಾಡುಗಳನ್ನು ಹೇಳುವುದುಂಟು

"ಇಂದಿರೆ ರಮಣ ಬಾ
ಕಂದರ್ಪಜನಕ ಬಾ

ಸುಂದರಾಂಗನೇ ಬಾ ಹಸೆಗೆನ್ನುತ
ಚಂದದಿ ಕರೆವರು
ಮುತ್ತಿನ ಮಂಟಪದಿ
ರತ್ನಪೀಠವ ನಿರಿಸಿ
ಅರ್ಥಿಯಲಿ ಬಾ ಹಸೆಗೆನ್ನುತ ಕರೆವರು
ಮುತ್ತೈದೆಯರುಗಳು"[೧೩೨]

ಕೆಲವು ಸಂದರ್ಭದಲ್ಲಿ ಕರಿಯ ಕಂಬಳಿಯನ್ನು ಹಾಸಿ ಅದರ ಮೇಲೆ ಅಕ್ಕಿಕಾಳಿನಿಂದ ಚೌಕಾಕಾರದ ಹಸೆಯನ್ನು ಬರೆದು ಹೆಣ್ಣುಗಂಡನ್ನು ಕೂಡ್ರಿಸುವರು. ಹರಿಯ ಮಹಿಮೆಯನ್ನು ಹೊಗಳುತ್ತಾ ಗಂಡುಮಕ್ಕಳನ್ನು ಹಸೆಗೆ ಕರೆಯುವ ರೀತಿ ಮನೋಹರವಾಗಿದೆ. ಇಂಥ ಹಾಡುಗಳು ಶುಭ ಕಾರ್ಯದ ಸಂದರ್ಭದಲ್ಲಿ ಇಡೀ ವಾತಾವರಣವನ್ನು ಆನಂದಗೊಳಿಸುತ್ತದೆ; ಎಲ್ಲರನ್ನು ಆಹ್ಲಾದಕರಗೊಳಿಸುತ್ತವೆ. ಆದರೆ ಇಂದು ಈ ಹಾಡುಗಳು ಕ್ಯಾಸೆಟ್ ಸಂಸ್ಕೃತಿಯಿಂದ ಮರೆಯಾಗುತ್ತಿವೆ; ಮರೆಯಾಗಿ ಹೋಗಿವೆ.

**ಕದ ತೆಗೆಸುವ ಹಾಡುಗಳು:–** ಮನೆಯೊಳಗಿರುವ ಹೆಂಡತಿಯನ್ನು ಕರೆದು ಕದ ತೆರೆಯುವಂತೆ ಗಂಡನು ಕೇಳುವುದೇ ಕದ ತೆಗೆಸುವ ಹಾಡುಗಳು.

ಕದವನ್ನು ತೆರೆಯುವಂತೆ ಮಡದಿ ರುಕ್ಮಿಣಿಯನ್ನು ಶ್ರೀಕೃಷ್ಣನು ಕೇಳುವನು, ಆಗ ರುಕ್ಮಿಣಿಯು

"ಯಾರು ನಿನ್ನಯ ಹೆಸರು ಏನೆಂದು ತಿಳಿಯದೆ
ಹೇಗೆ ತೆಗೆಯಲಿ ಕದವ
ಘೋರ ರಾತ್ರಿಯ ವೇಳೆಯಲಿ ಬಂ
ದೀಗ ಬಾಗಿಲು ಬಡಿಯ ನಿಂದಿರೆ
ನಾರಿಯರು ಏನೆಂದು ಕೇಳ್ವರು
ದ್ವಾರ ಬಿಡುಬಿಡುತಲಿ ಸಾಗು ಮುಂದಕೆ"[೧೩೩]

ಇಂಥ ಸರಿ ರಾತ್ರಿಯಲಿ ಬಂದು ಬಾಗಿಲು ತೆರೆ ಎಂದರೆ ಹೆಣ್ಣುಮಕ್ಕಳು ಏನು ತಿಳಿದಾರು. ನಾನು ಕದವನ್ನು ತೆರೆಯುವುದಿಲ್ಲ ಹೋಗು ಎನ್ನುವಳು. ಆಗ ಕೃಷ್ಣ ತನ್ನ ಪರಿಚಯ ಹೇಳಲು ಆರಂಭಿಸುವನು. 'ಚಕ್ರಿ' ಬಂದಿದ್ದೇನೆ ಬಾಗಿಲು ತೆಗೆ ಎನ್ನಲು. ನಿನಗೆ ಹೇಳುವವರು ಕೇಳುವವರಿಲ್ಲ ಮನಬಂದಂತೆ ಮಾತನಾಡಬೇಡ (ಕುಲಾಲ – ಕುಂಬಾರ) ಇದು ಕುಂಬಾರ ಮನೆಯಲ್ಲ ನಡೆ ಮುಂದೆ ಎನ್ನುವಳು. ಭೂಮಿ ಹೊತ್ತವನು ಬಂದಿರುವೆ ಎನಲು, ಉರಗರಾಜ ನೀನು ಹಾವುಗಳ ಜೊತೆ ಹೋಗು ಎನ್ನುವಳು. ಹರಿ ಬಂದಿರುವೆ ಬಾಗಿಲು ತೆಗೆಯೆ ಎಂದಾಗ (ಹರಿ – ಕೋತಿ) ಕೋತಿಯಾದರೆ ಇದು ರೂಪವತಿಯರಿರುವ ಸ್ಥಳ ಕೋತಿ

ಗುಂಪಲಿ ಸೇರು ಹೋಗು ಎನ್ನುವಳು. ಕೊನೆಗೆ ಕೃಷ್ಣನು ನಿನ್ನ ಪ್ರೀತಿಯ ಗಂಡ ಬಂದಿರುವೆ ಬಾಗಿಲ ತೆಗೆಯೆ ಎನ್ನಲು ರುಕ್ಮಿಣಿಯು ಹರುಷದಿಂದ ಶ್ರೀಗೆ ವಂದಿಸಿ ಬರಮಾಡಿಕೊಂಡು ಒಳಗೆ ಕರೆದೊಯ್ದಳು.

ಈ ಹಾಡು ಕೃಷ್ಣ ರುಕ್ಮಿಣಿಯರ ಸಂಭಾಷಣೆಯ ಮೂಲಕ ಮೂಡಿ ಬಂದಿದೆ. ಕೃಷ್ಣ ಹೇಳುವ ಹೆಸರುಗಳಿಗೆ ರುಕ್ಮಿಣಿಯು ಬೇರೆ ಅರ್ಥವನ್ನು ಗ್ರಹಿಸಿಕೊಳ್ಳುವಳು.

ಇದೇ ರೀತಿಯಾಗಿ ಶಿವಪಾರ್ವತಿಯರ ನಡುವೆ ನಡೆಯುವ ಸಂವಾದ ಶಬ್ದಗಳಿಗಿರುವ ದ್ವಂದ್ವಾರ್ಥಗಳಿಂದ ಶಿವ ಬಾಗಿಲು ತೆಗೆಯುವಂತೆ ಪಾರ್ವತಿಯನ್ನು ಕೇಳಿಕೊಳ್ಳುವ ಹಾಡು ಕೂಡ ಬಲು ಸ್ವಾರಸ್ಯವಾಗಿದೆ.

"ಬಾಗಿಲು ತೆಗೆಯಲೆ ಭಾನುಮತಿ ರನ್ನಳೆ
ಈಗ ನಾ ಬಂದೆನು ಇಂದುಮುಖಿ"[೧೩೪]

ಎಂದು ಶಿವ ಕೇಳಲು. ಪಾರ್ವತಿಯು ಇಂಥ ರಾತ್ರಿಯಲ್ಲಿ ಬಂದವರಾರು ನನಗೆ ಗೊತ್ತಾಗುತ್ತಿಲ್ಲ. ನಿಮ್ಮ ಹೆಸರು ಹೇಳಿದರೆ ಬಾಗಿಲು ತೆರೆಯುವೆನು ಎನ್ನುವಳು. ನನ್ನನ್ನು 'ನೀಲಕಂಠ' ಎನ್ನುವರು ಎಂದಾಗ ನೀಲಕಂಠವೆಂದರೆ ನವಿಲಿನ ಮರಿಬಂತೆಂದು ನಾರಿಯರು ಅಪಹಾಸ್ಯ ಮಾಡುವರು ಎನ್ನುವಳು. 'ಸ್ಥಾಣು' ಬಂದಿರುವೆ ಎನ್ನಲು, ಜಗದಲ್ಲಿ ಚಿಕ್ಕಮರಕ್ಕೆ ಸ್ಥಾಣು ಎಂಬ ಹೆಸರೆನ್ನುವಳು. ಪಶುಪತಿ ಬಂದಿರುವೆ ಎನಲು, ವೃಷಭ ನೀನಾದರೆ ಪಶುಗಳ ಗುಂಪು ಸೇರಲು ಹೇಳುವಳು. 'ಶೂಲಿ' ಬಂದಿರುವೆ ಎನಲು. ನಿನ್ನ ನೋವು ಕಳೆಯಲು ಯಾರಿಂದಲೂ ಸಾಧ್ಯವಿಲ್ಲ ವೈದ್ಯರ ಬಳಿ ಹೋಗೆನ್ನುವಳು. ನಂತರ ಪಾರ್ವತಿ ಕದವನ್ನು ತೆರೆದು ಪ್ರೀತಿಯಿಂದ ಮನೆಯೊಳಗೆ ಕರೆದು ಕೊಳ್ಳುವಳು.

ಇಲ್ಲಿಯೂ ಕೂಡ ಶಿವನ ಹೆಸರುಗಳಾದ ನೀಲಕಂಠ, ಸ್ಥಾಣು, ಪಶುಪತಿ, ಶೂಲಿ ಇವುಗಳಿಗೆ ನವಿಲುಮರಿ, ಚಿಕ್ಕಮರ, ವೃಷಭರಾಜ, ಬಾಧೆಗೊಳಗಾದವ ಎಂಬ ದ್ವಂದ್ವಾರ್ಥವನ್ನು ಪಾರ್ವತಿ ಕಲ್ಪಿಸಿಕೊಳ್ಳವಳು. ಈ ಎರಡೂ ಹಾಡುಗಳು ಹಾಸ್ಯಮಯ ಭಾವವನ್ನು ಒಳಗೊಂಡಿರುತ್ತವೆ.

**ಬುದ್ಧಿಮಾತುಗಳನ್ನು ಹೇಳುವ ಹಾಡುಗಳು:–** ಮದುವೆಯಾಗಿ ಹೊರಟ ಮೊದಲಗಿತ್ತಿಗೆ ತವರು ಮನೆಯವರು, ಹಿರಿಯರು, ಗುರುಗಳು ಬುದ್ಧಿಮಾತುಗಳನ್ನು ಹೇಳಿ ಕಳುಹಿಸುವುದು ಇಂದಿಗೂ ನಡೆದುಕೊಂಡು ಬಂದಿದೆ. ಹುಟ್ಟಿ ಬೆಳೆದು ಓಡಾಡಿದ ಪರಿಚಿತರನ್ನು, ಪರಿಚಿತ ಮನೆಯನ್ನು ಬಿಟ್ಟು ಅಪರಿಚಿತವಾದ ಮನೆಗೆ ತೆರಳುವಾಗ ಅಲ್ಲಿ ಗಂಡನೊಂದಿಗೆ, ಅತ್ತೆ–ಮಾವಂದಿರ ಜೊತೆಗೆ, ಭಾವ–ಮೈದುನರ ಜೊತೆಗೆ, ನಾದಿನಿ–ನೆಗೆಣ್ಣೆಯರ ಕೂಡ ಹೇಗೆ ಇರಬೇಕೆಂಬ ತಿಳುವಳಿಕೆಯ ಮಾತುಗಳನ್ನು ಹಿರಿಯರು ಹೇಳುವರು. ಇಂಥ ಬುದ್ಧಿ ಮಾತುಗಳನ್ನು ಜೀವೂಬಾಯಿಯು ತನ್ನ ಹಾಡುಗಳ ಮೂಲಕ ಹೇಳಿರುವಳು.

ಮೊದಲಗಿತ್ತಿಯನ್ನು ಕೃಷ್ಣನ (ಗಂಡನ) ಮನೆಗೆ ಕಳುಹಿಸುತ್ತಿರುವಾಗ ತಾಯಿ ಹೇಳುವ ಬುದ್ಧಿ ಮಾತುಗಳಿವು

ಪತಿ ಮಂದಿರದಲಿ ನೀ ಸುಖವಾಗಿ ಬಾಳು ನಿನ್ನ
ಪತಿಗಹಿತಕರ ಸಂಗ ತ್ಯಜಿಸಮ್ಮ ಮಗಳೆ"[೧೩೫]

ಎಂದಿಗೂ ಗಂಡನಿಗೆ ಕೇಡನ್ನು ಬಯಸಬೇಡ. ಕೇಡನ್ನು ಬಯಸುವವರ ಜೊತೆ ಗೆಳೆತನ ಮಾಡಬೇಡ. ಬೆಳಿಗ್ಗೆ ಎದ್ದು ಗಂಡನಿಗೆ ಗುರು–ಹಿರಿಯರಿಗೆ ನಮಿಸು.

"ರತ್ನಾಕರನು ತಂದೆ ಎನುತ ಗರ್ವಿಸಬೇಡ
ಮತ್ತೆನಗೆ ಸರಿಯಾರು ಎಂದೆನಲು ಬೇಡ
ಚಿತ್ತಜನಯ್ಯನ ಮನವರಿತು ನಡೆಯಮ್ಮ
ಹೊತ್ತು ಹೊತ್ತಿಗೆ ಪತಿಯ ಸೇವೆ ನಿರತಳಾಗಿ"[೧೩೬]

ನಾನು ಸಮುದ್ರ ರಾಜನ ಮಗಳೆಂದು ಗರ್ವದಿಂದಿರಬೇಡ. ನನಗೆ ಸರಿಯಾರೆಂದು ವರ್ತಿಸಬೇಡ. ಗಂಡನ ಮನಸ್ಸನ್ನು ಅರಿತುಕೊಂಡು ನಡೆ. ಇಲ್ಲಿ ಜೀವೂಬಾಯಿಯು ಹೆಣ್ಣಮಕ್ಕಳು ತವರು ಮನೆಯವರು ಎಷ್ಟೇ ಶ್ರೀಮಂತರಿದ್ದರೂ ಗಂಡನ ಮನೆಯಲ್ಲಿ ಆ ಶ್ರೀಮಂತಿಕೆಯನ್ನು ತೋರಿಸಿಕೊಂಡು ಸೊಕ್ಕಿನಿಂದಿರಬಾರದು ಎಂದು ಹೇಳಿರುವಳು. ಮನೆಯ ಗುಟ್ಟನ್ನು ಎಂದಿಗೂ ಬೇರೆಯವರ ಮುಂದೆ ಹೇಳಬೇಡ. ಗಂಡಹೆಂಡಿರ ನಡುವಿನ ಮಾತುಗಳು ಬಹು ರಹಸ್ಯವಾಗಿರಬೇಕು. ಅವು ಇನ್ನೊಬ್ಬರ ಕಿವಿ ತಲುಪಿದರೆ ಇಡೀ ಸಂಸಾರವೆಲ್ಲ ಹಾಳಾಗಿ ಹೋಗುತ್ತದೆ.

ಇದೇ ರೀತಿ ಪಾರ್ವತಿಗೆ ಬುದ್ಧಿ ಹೇಳುವ ಹಾಡಿನಲ್ಲಿ ಜೀವಮ್ಮ

"ಪತಿಯ ಮಂದಿರದಲಿ ಸುಖವಾಗಿ ಬಾಳಮ್ಮ
ಮತಿವಂತೆ ಎನಿಸಿ ಸನ್ಮತಿ ಪಡೆದು"[೧೩೭]

ಜೀವನ ಸಾಗಿಸುವಂತೆ ಹೇಳಿದ್ದಾಳೆ. ಅತೀ ಬುದ್ಧಿವಂತಿಕೆಯಿಂದ ಸಂಸಾರವನ್ನು ನಿಭಾಯಿಸಬೇಕು. ಶ್ರೀಮಂತಿಕೆಯ ಗರ್ವ ಮನದಲ್ಲಿದ್ದರೆ ಸಂಸಾರ ಸುಖಕರವಾಗಿರುವುದಿಲ್ಲ ಎಂಬುದು ಜೀವಮ್ಮಳ ಅಭಿಮತ. ನಿನ್ನ ಗೆಳತಿಯರೆಲ್ಲರೂ ಶಿವನನ್ನು ಕುರಿತು ವಸತಿ ಇಲ್ಲದವ, ಸ್ಮಶಾನವಾಸಿ, ವಸ್ತ್ರ ಪೀತಾಂಬರ ಧರಿಸದವನು, ಅಸಮನೇತ್ರನು, ಜಡೆಯಲ್ಲಿ ಸವತಿ ಇರುವಳು, ಆಭರಣಗಳನ್ನು ಅರಿಯನು, ರುಂಡಗಳ ಮಾಲೆಯನ್ನು ಧರಿಸಿದವ, ಎಂದು ಅಸಹ್ಯ ಮಾಡುವರು. ನೀನು ಅವರ ಮಾತುಗಳಿಗೆ ಕಿವಿಗೊಡಬೇಡ. ಈ ಮೂಲಕ ಜೀವಮ್ಮ ಹೆಣ್ಣುಮಕ್ಕಳು ಮುದುವೆಯಾದ ಮೇಲೆ ತನ್ನ ಗಂಡನ ಬಗ್ಗೆ ಮತ್ತೊಬ್ಬರು ಹೇಳುವ ಚಾಡಿ

ಮಾತುಗಳಿಗೆ ಮತ್ತು ಅಪಹಾಸ್ಯದ ನುಡಿಗಳಿಗೆ ತಲೆಕೆಡಿಸಿಕೊಳ್ಳಬಾರದು. ಅವುಗಳನ್ನು ನಂಬಬಾರದು ಎಂಬುದನ್ನು ಪಾರ್ವತಿಗೆ ಹೇಳುವ ಮೂಲಕ ತಿಳಿಸಿರುವಳು.

**ಮಂಗಳ ಹಾಡುಗಳು:-** ಪೂಜೆ, ವ್ರತ ಆಚರಣೆಯ ಕೊನೆಗೆ ಮಂಗಳಾರತಿಯನ್ನು ಎತ್ತುವುದು ಒಂದು ಪದ್ಧತಿ. ಮಂಗಳದ ಜೊತೆಗೆ ಆರತಿ ಎತ್ತುವುದು ಎಲ್ಲೆಡೆಗೆ ಕಂಡುಬರುತ್ತದೆ. ಈ ಮಂಗಳ ಹಾಡುಗಳಲ್ಲಿ ದೈವಸ್ತುತಿ, ಪವಾಡಗಳು, ಜೀವನ ಚಿತ್ರಣಗಳು ಒಡಗೂಡಿರುತ್ತವೆ.

ರಾಮಾಯಣ ಮಹಾಭಾರತದಲ್ಲಿ ಬರುವ ಶ್ರೀಹರಿಯ ಮಹಿಮೆಗಳನ್ನು, ಪವಾಡಗಳನ್ನು ಹಾಗೂ ಘಟನೆಗಳನ್ನು ಒಳಗೊಂಡ ಮಂಗಳಾರತಿಗಳನ್ನು ಜೀವಮ್ಮ ಬರೆದಿರುವಳು. ಶ್ರೀ ಮಹಾಲಕ್ಷ್ಮಿಯ ಮಹಿಮೆಯನ್ನೊಳಗೊಂಡ ಮಂಗಲ ಹಾಡುಗಳು ಇವೆ.

"ಮಂಗಳಂ ಸಪ್ತ ಋಷಿಗಳು ಪರ್ಣಶಾಲೆಯೊಳು
ಗಾಂಗೇಯನುತನ ಪೂಜಿಸಿ ಹರುಷದಿ
ಸಂಗೀತ ಲೋಲನಿಗೆ ಶೃಂಗಾರ ಪುರುಷನಿಗೆ
ರಂಗಿನಾರತಿಯೆತ್ತಿ ಬೆಳಗಿದರು
ಜಯಮಂಗಳಂ ನಿತ್ಯ ಶುಭ ಮಂಗಳಾ"[೧೩೮]

ಕಶ್ಯಪ ಋಷಿಗಳು ಹೆಂಡತಿ ಜೊತೆಗೂಡಿ ಶ್ರೀಹರಿಗೆ ರತನದಾರತಿಯನ್ನು, ಸತಿ ಅನುಸೂಯಾಸಹಿತ ಅತ್ರಿಯರು ಪದುಮದಾರತಿಯನ್ನು, ಶೀಲವತಿಯಾದ ಸುಶೀಲೆ ಒಡಗೂಡಿ ಭಾರದ್ವಜ ಋಷಿಗಳು ಗೋಮೇಧಿಕದಾರತಿಯನ್ನು, ಕುಮುದ್ವತಿ ಜೊತೆಸೇರಿ ವಿಶ್ವಾಮಿತ್ರರು ಕನಕದಾರತಿಯನ್ನು, ಅಹಲ್ಯೆಯೊಂದಿಗೆ ಗೌತಮ ಋಷಿಗಳು ಚಲ್ವನವರತ್ನದಾರತಿಯನ್ನು, ರೇಣುಕಸಹಿತ ಜಮದಗ್ನಿ ಋಷಿಗಳು ನೀಲ ಮಾಣಿಕ್ಯದಾರತಿಯನ್ನು, ಅರುಂಧತಿ ಸಹಿತ ವಶಿಷ್ಠ ಋಷಿಗಳು ನವರತ್ನದಾರತಿಯನ್ನು ಹೀಗೆ ಸಪ್ತ ಋಷಿಗಳು ಶ್ರೀಹರಿಯ ಅತೀಶಯವಾದ ಮಹಿಮೆಗಳನ್ನು ಹೊಗಳುತ್ತ ಮಂಗಳಾರತಿಯನ್ನು ಎತ್ತಿ ಬೆಳಗಿದರು. ಇದನ್ನು ಬರೆದು ಜೀವಮ್ಮ ಕೃತಾರ್ಥಳಾದಳು.

**ಶೋಭಾನ** – ಇದು ಸಂಪ್ರದಾಯದ ಹಾಡುಗಳಲ್ಲಿಯೆ ವಿಶಿಷ್ಠವಾದ ಪ್ರಕಾರ. ಪ್ರತಿ ನುಡಿಯನ್ನು ಹಾಡಿ ಕೊನೆಗೆ ಶೋಭಾನೆ ಸೊಲ್ಲು ಹಿಮ್ಮೇಳದವರಿಂದ ಜೊತೆಗೂಡಿ ಕೇಳಲು ಸುಶ್ರಾವ್ಯವಾಗಿರುತ್ತದೆ.

"ಶೋಭನವೆನ್ನಿರಿ ಶೀಹರಿಗೆ
ಶೋಭನವೆನ್ನಿರಿ ಮಾಧವಗೆ

ಶೋಭನವೆನ್ನಿರಿ ಸೊಬಗುಳ್ಳ ದೇವನಿಗೆ ಶೋಭಾನೆ
ಸಿರಿಯರಸಗೆ ದಿವ್ಯ ಶೋಭಾನೆ
ಪರಮ ಪುರುಷನಿಗೆ ಶೋಭಾನೆ
ಶೋಭನ ಗರುಡಗಮನಗೆ
ಶೋಭನವೆನ್ನಿರಿ ಶೋಭಾನೆ[೧೩೯]

ಹರಿಯ ಗುಣಗಾನ ಮಾಡುತ್ತ ಲಕ್ಷ್ಮಿಯ ಜೊತೆಗೂಡಿ ತಮ್ಮ ಮಂದಿರಕೆ ಬಾ ಎಂದು ಸಪ್ತ ಋಷಿಗಳು ಸತಿಯರೊಡಗೂಡಿ ಆಶ್ರಮದ ಎಲ್ಲ ಸೇವಕರು ಸೇರಿ ಆಹ್ವಾನಿಸುವ ಪರಿ ಇಲ್ಲಿ ವರ್ಣಿತವಾಗಿದೆ.

ಶ್ರೀರಾಮನಿಗೆ ಮಂಗಳವನ್ನು (ಕೀ. ೧೩೧, ೧೩೨) ಹಾಡುವ ಹಾಡುಗಳಲ್ಲಿ ರಾಮಾಯಣದ ವಿಷಯ ವರ್ಣಿತಗೊಂಡಿದೆ. ಶ್ರೀಹರಿಗೆ ಮಂಗಳವನ್ನು (ಕೀ ೧೩೩, ೧೩೪, ೧೩೮, ೧೪೧) ಹಾಡುವ ಹಾಡುಗಳಲ್ಲಿ ಅವತಾರಗಳು ವರ್ಣಿತಗೊಂಡಿವೆ. ಶ್ರೀ ಕೃಷ್ಣಗೆ ಮಂಗಳಾರತಿ ಎತ್ತುವ ಹಾಡುಗಳಲ್ಲಿ (ಕೀ. ೧೩೬, ೧೩೯) ಆತನ ಬಾಲಲೀಲೆಗಳು, ಇನ್ನಿತರ ಲೀಲೆಗಳು ತುಂಬಿಕೊಂಡಿವೆ. ಶ್ರೀಲಕ್ಷ್ಮಿಗೆ ಮಂಗಳಾರತಿ ಎತ್ತುವ (ಕೀ. ೧೩೫, ೧೩೭) ಹಾಡುಗಳಲ್ಲಿ ಆಕೆಯ ವೈಭವ, ವೇಷಭೂಷಣಗಳು ಸೇರಿಕೊಂಡಿವೆ.

ಹೀಗೆ ಜೀವೂಬಾಯಿಯು ರಚಿಸಿದ ಸಂಪ್ರದಾಯದ ಹಾಡುಗಳಲ್ಲಿ ಹಸೆಗೆ ಕರೆಯುವುದನ್ನು, ಬಾಗಿಲು ತೆರೆಯುವುದನ್ನು, ಉಡಿತುಂಬುವುದನ್ನು, ಲಾಲಿ ಜೋಗುಳಗಳನ್ನು, ಮಂಗಳ, ಶೋಭಾನೆ, ಆರತಿ ಪದಗಳು ಸೇರಿಕೊಂಡಿವೆ, ಈ ಮೂಲಕ ಜನಪದೀಯ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಜೀವಮ್ಮ ತನ್ನ ರಚನೆಗಳಲ್ಲಿ ಜಾಗರಗೊಳಿಸಿರುವಳು; ತನ್ನಲ್ಲಿರುವ ದೇಶಿಯ ಸಂಸ್ಕೃತಿಯ ಪ್ರೇಮವನ್ನು ಮೆರೆದಿರುವಳು.

**೪.೭ ಯುಗಾದಿಯಂದು ರಚಿತವಾದ ಹಾಡುಗಳು**

ಕೀರ್ತನೆಗಳ ರಚನೆಯ ಜೊತೆಗೆ ಜೀವಮ್ಮಳು ತನ್ನ ಬದುಕಿನಲ್ಲಿ ಒಂದು ವಿಶೇಷವಾದ ಸಂಪ್ರದಾಯವನ್ನು ರೂಢಿಸಿಕೊಂಡು ಬಂದಿದ್ದಳು. ಪ್ರತಿ ಯುಗಾದಿಯಂದು ಆ ಸಂವತ್ಸರವನ್ನು ಮುಖ್ಯವಾಗಿಟ್ಟುಕೊಂಡು ಶ್ರೀಹರಿಯನ್ನು ಸ್ತುತಿಸುವ ಹಾಡುಗಳನ್ನು ಬರೆದು ಅರ್ಪಿಸುತ್ತಿದ್ದಳು. ಈ ಪದ್ಧತಿಯು ಕನ್ನಡಸಾಹಿತ್ಯ ಪರಂಪರೆಯಲ್ಲಿ ಮೂಡಿಬಂದಿರುವ ಉದಾಹರಣೆಗಳನ್ನು ಕಾಣುತ್ತೇವೆ. ಹರಿಹರ, ರಾಘವಾಂಕ, ಕುಮಾರವ್ಯಾಸ ಮುಂತಾದವರು ತಮ್ಮ ಕೃತಿಗಳನ್ನು ಪರಮಾತ್ಮನಿಗೆ ಅರ್ಪಿಸಿ ಧನ್ಯತೆ ಪಡೆದಿದ್ದಾರೆ. ಅದೇ ರೀತಿಯಾಗಿ ಜೀವಮ್ಮಳು ತನ್ನ ರಚನೆಗಳನ್ನು ಶ್ರೀಹರಿಗೆ ಅರ್ಪಿಸುವ ಮೂಲಕ ಸಾಹಿತ್ಯ ಪೂಜೆ ನೆರವೇರಿಸಿದ್ದಾಳೆ.

ಜೀವಮ್ಮಳು ಯುಗಾದಿಯಂದು ರಚಿಸಿದಳೆಂದು ತಿಳಿದುಬರುವ ೨೨ ಹಾಡುಗಳು (ಕೀರ್ತನೆ) ಮತ್ತು ೨ ಖಂಡ ಕಾವ್ಯಗಳು ಇವೆ. ಖಂಡಕಾವ್ಯಗಳ ಬಗೆಗೆ ಮುಂದೆ ಸುದೀರ್ಘ ವಿಶ್ಲೇಷಣೆ ಇರುವುದರಿಂದ ಇಲ್ಲಿ ಕೇವಲ ೨೨ ಹಾಡುಗಳನ್ನು ಮಾತ್ರ ವಿವೇಚನೆಗೆ ಎತ್ತಿಕೊಳ್ಳಲಾಗಿದೆ.

"ವಿವಿಧ ಭಕುತರು ಕೂಡಿ ಹರುಷದಿ
ಪ್ಲವನಾಮ ಸಂವತ್ಸರದಲಿ
ಸವಿನಯದಿ ಭಜನೆಗಳ ಮಾಳ್ಪರು
ಹರಿಯ ಗುಣಕಾರ್ಯಗಳ ಸ್ಮರಣೆಯ"[೧೪೦]

ಕೀರ್ತನೆಯನ್ನು ಪ್ಲವನಾಮ ಸಂವತ್ಸರದಂದು ರಚಿಸಿದ್ದಾಳೆ. ಅಂದರೆ ಮಾರ್ಚ ೧೭, ೧೯೬೧ರ ಯುಗಾದಿಯಂದು ಬರೆದು ಅರ್ಪಿಸಿರುವಳು. ಇದರಲ್ಲಿ ಶ್ರೀಹರಿಯು ರಾಕ್ಷಸರನ್ನು ಸದೆಬಡೆದು ದೇವತೆಗಳನ್ನು ರಕ್ಷಿಸಲು ಮೋಹಿನಿ ರೂಪಧರಿಸಿದ ಬಗೆ, ಮೋಹಿತಗೊಂಡು ಚಂದ್ರಶೇಖರನು ಮೋಹಿನಿಯ ಕೈ ಹಿಡಿಯಲು ಹೋಗಲು ಮೋಹಿನಿ ಕಣ್ಮರೆಯಾದ ಸ್ಥಿತಿ, ಶಿವ ಭಸ್ಮಾಸುರನಿಗೆ ವರಕೊಟ್ಟು ಭಯಭೀತನಾಗಿ ಹರಿಯ ಮೊರೆ ಇಡಲು ಮತ್ತೇ ಮೋಹಿನಿಯಗಿ ಭಸ್ಮಾಸುರನನ್ನು ಕೊಂದು, ಶಿವನನ್ನು ಭಯದಿಂದ ಮುಕ್ತಗೊಳಿಸಿದ ವಿಷಯವು ಸಂಕ್ಷಿಪ್ತವಾಗಿ ಮೂಡಿಬಂದಿದೆ.

"ವಿಶ್ವವ್ಯಾಪಕ ನೀನೆ ವಿಶ್ವ ಮೂರುತಿ ನೀನೆ
ವಿಶ್ವಕರ್ತನು ನೀನೆ ವಿಶ್ವ ನೀನೆ ಶ್ರೀ
ವಿಶ್ವ ವಸುನಾಮ ಸಂವತ್ಸರದೊಳು ಮೆರೆವ
ವಿಶ್ವ ಮೂರುತಿ ಶ್ರೀ ಸರ್ವೇಶ್ವರ ನೀನೆಂದು"[೧೪೧]

ಸ್ಮರಿಸುವ ಹಾಡನ್ನು ವಿಶ್ವನಾಮ ಸಂವತ್ಸರದೊಳು ಅಂದರೆ ಎಪ್ರೀಲ್ ೨, ೧೯೬೫ ರಂದು ರಚಿಸಿರುವಳು. ಇದರಲ್ಲಿ ಕೋಟಿಮನ್ಮಥರ ಲಾವಣ್ಯ ಹೊಂದಿರುವ ಮನ್ಮಥಯ್ಯನನ್ನು ಹಾಡಿಹೊಗಳಿದ್ದಾಳೆ. ಶ್ರೀಹರಿಯು ಸರ್ವಾಂತರಯಾಮಿ, ವಿಶ್ವಕರ್ತನು, ವಿಶ್ವರೂಪನು ಎಂದು ಬಣ್ಣಿಸಿರುವಳು. ಸಕಲ ವಿಶ್ವವನ್ನು ಉದರದಲ್ಲಿಟ್ಟುಕೊಂಡ ಮಹಿಮನು, ಮುಖದೊಳಗೆ ಇಡೀ ಲೋಕವನ್ನು ತೋರಿದ ವಿಶ್ವಮುಖನೆಂದು, ಕಮಲೆಯನ್ನು ಕೈಹಿಡಿದು ಜಗದಲ್ಲಿ ವಿಶ್ವ ಮೂರುತಿಯಂತಿರುವ ಶ್ರೀಹರಿಯನ್ನು ಸ್ಮರಿಸಿದ್ದಾಳೆ.

"ಪರಿಪರಿ ವಿಧದಲಿ ಹರಿಸ್ಮರಣೆಯ ಮಾಡೆ
ಪದುಮನಾಮ ಸಂವತ್ಸರದಿ
ದುರಿತಗಳೆಲ್ಲವ ಪರಿಹರಿಸುತ ಕಾಯ್ವ

ಸಿರಿವರ ಕಮಲನಾಭ ವಿಠ್ಠಲನಿಗೆ"[೧೪೨]

ಎಂದು ಅರ್ಪಿತಗೊಳ್ಳುವ ಹಾಡು ಪದುಮನಾಮ ಸಂವತ್ಸರದಂದು ಅಂದರೆ, ೨೩ನೇ ಮಾರ್ಚ ೧೯೬೬ ರಂದು ರಚಿಸಲ್ಪಟ್ಟಿದೆ. ಇದು ಮಂಗಳದ ಹಾಡು. ಅತಿ ಸುಂದರನಾದ ಅಪಾರ ಪರಾಕ್ರಮವ ತೋರಿದ ವಿಭಿನ್ನ ಲೀಲೆಯನ್ನು ತೋರಿದ ದೇವನಿಗೆ ಮಂಗಳ ಸಲ್ಲಿಸಲಾಗಿದೆ.

ಶ್ರೀಹರಿಯ ದಶಾವತಾರಗಳ ವರ್ಣನೆಯನ್ನೊಳಗೊಂಡಿರುವ ಮಂಗಳಾರತಿಯ ಹಾಡನ್ನು ಜೀವಮ್ಮಳು ಪದುಮನಾಮ ಸಂವತ್ಸರದಲ್ಲಿಯೇ (೨೩.೩.೧೯೬೬) ರಚಿಸಿದ್ದಾಳೆ.

"ನೀರೊಳಗಾಡಿದವಗೆ ಬೆನ್ನಿಲಿ ಗಿರಿ
ಭಾರಪೊತ್ತಿಹ ದೇವಗೆ ಮಣ್ಣಿನಲ್ಲಿದ್ದ
ಬೇರುಗಳನೆ ಮೆದ್ದಗೆ ಶ್ರೀಹರಿಗೆ
ಮೂರೆರಡರಿಯದ ಪೋರನ ಮಾತಿಗೆ
ಕ್ರೂರ ದೈತ್ಯನ ಕರುಳ್ಹಾರವ ಮಾಡಿದಗೆ"[೧೪೩]

ಹೀಗೆಯೆ ಹರಿಯ ಅವತಾರಗಳನ್ನು ಕವಯಿತ್ರಿ ಸಂಕ್ಷಿಪ್ತವಾಗಿ ತಿಳಿಸಿರುವಳು.

"ರಂಗನಾಥ ನಿನ್ನಂಘ್ರಿ ಕಮಲಗಳ ಭಜಿಸುವವರ ಭವ
ಹಿಂಗಿಸುತ ಪೊರೆದಂಥ ಚರಿತೆಗಳ
ಸಂಗ ರಹಿತನೆ ಬಿಡಿಸು ಬಂಧಗಳ ಸಲಹೆಂದು ಪ್ರಾರ್ಥಿಪೆ
ಅಂಗಜಪಿತ ತರಿದೆನ್ನಪರಾಧ
ಮಂಗಲಾಂಗ ಪ್ಲವಂಗ ವತ್ಸರ
ಗಂಗಾಜನಕ ನಿನ್ನಂಘ್ರಿ ಭಜಕರ
ಹಿಂಗದಲೆ ಪಾಲಿಸುತ ಪೊರೆ ಕೃಪಾ
ಪಾಂಗ ಕಮಲನಾಭ ವಿಠ್ಠಲನೆ"[೧೪೪]

ಈ ಹಾಡು ಆತ್ಮ ನಿವೇದನೆಯನ್ನು ಒಳಗೊಂಡಿದೆ. ಅಪರಾಧಗಳನ್ನೆಲ್ಲ ಪರಿಹರಿಸಿ ದಾಸರ ಸಂಗವ ಪಾಲಿಸುವಂತೆ ಕೇಳಿಕೊಳ್ಳುವ ಭಾವ ವ್ಯಕ್ತಗೊಂಡಿದೆ. ಪ್ಲವಂಗ ವತ್ಸರ ಅಂದರೆ ೧೦.೪.೧೯೬೭ರಂದು ಇದು ರಚಿತವಾಗಿದೆ. ಮಡುವಿನಲ್ಲಿ ಸಂಕಟಪಡುತ್ತಿರುವ ಗಜೇಂದ್ರನನ್ನು, ಬಡ ಬ್ರಾಹ್ಮಣ ಸುಧಾಮನನ್ನು, ತಪಸ್ಸಿನಲ್ಲಿರುವ ಪುಟ್ಟ ಹುಡುಗನನ್ನು, ಮೊರೆಯಿಟ್ಟ ಪಂಚವಲ್ಲಭಗೆ ಅಕ್ಷಯ ಪಾತ್ರೆ ನೀಡಿರುವುದು ಮುಂತಾದ ಸಂಗತಿಗಳನ್ನು ಸ್ಮರಿಸುತ್ತಾ ತನ್ನನ್ನೂ ಸಹ ನೀನು ರಕ್ಷಿಸಬೇಕೆಂದು ಜೀವಮ್ಮ ಹರಿಯಲ್ಲಿ ನಿವೇದಿಸಿ

ಕೊಂಡಿದ್ದಾಳೆ. ಮತ್ತೊಂದು ಹರಿಯ ಸ್ತುತಿಪರವಾದ ಹಾಡನ್ನು (ಕೀ ೧೪೮) ಕೂಡ ಜೀವಮ್ಮ ಪ್ಲವಂಗ ವತ್ಸರದೊಳು ರಚಿಸಿದ್ದಾಳೆ.

"ಸೌಮ್ಯನಾಮ ಸಂವತ್ಸರದಂದು
ನೇಮದಿಂದ ಭಜಿಪ ಭಕುತರ
ಕಾಮ್ಯಕರ್ಮವ ತರಿದು ಪೊರೆಯುವ
ಕಮಲನಾಭ ವಿಠ್ಠಲನ ಪ್ರತಿದಿನ"[೧೪೫]

ಇದು ಸೌಮ್ಯ ಸಂವತ್ಸರದಂದು ಅಂದರೆ ಮಾರ್ಚ ೧೯ರ ೧೯೬೯ ರಂದು ಗುರು ಕಾಣಿಕೆಯಾಗಿ ರಚನೆಗೊಂಡು ಅರ್ಪಿತವಾಗಿದೆ. ಇದರಲ್ಲಿ

"ಭುವನ ಮೋಹನ ಸುಮನಸರ ಪ್ರಿಯ
ಕವಿಜನರ ಹೃದ್ಗೃಹ ನಿವಾಸಗೆ
ನವ ನವ ಲೀಲೆಗಳ ತೋರ್ದನೆ
ನವರತುನದಾರತಿಯ ಬೆಳಗಿರೆ"[೧೪೬]

ಎಂಬ ಭಕ್ತಿ ಭಾವದ ಮಂಗಳವನ್ನು ಅರ್ಪಿಸುವ ನುಡಿಗಳು ಮಿಳಿತಗೊಂಡಿವೆ. ಶ್ರೀಹರಿಯನ್ನು ಕರುಣಾಪಾಲಕ, ಭಂಗರಹಿತ, ಪರಮಪುರುಷ, ಪುಣ್ಯಚರಿತ ಎಂದು ಗುಣಗಾನ ಮಾಡುತ್ತ ಮಂಗಳಕರವಾದ ನವರತುನದಾರತಿಯನ್ನು ಎತ್ತಿ ಬೆಳಗಿರುವಳು. ಇದೇ ಸಂವತ್ಸರದಂದು.

"ಅನಾಥ ರಕ್ಷಕ ಅಪದ್ಬಾಂಧವ
ಶ್ರೀಪತಿ ಕೇಶವ ಮಾಧವನೆ"[೧೪೭]

ಎಂಬ ಹಾಡನ್ನು ಬರೆದಿದ್ದಾಳೆ. ಇದರಲ್ಲಿ ಮೂರು ನುಡಿಗಳು ಹರಿಯ ದಶಾವತಾರಗಳ ವರ್ಣನೆ ಒಳಗೊಂಡಿವೆ.

"ಸಾಧಾರಣ ವತ್ಸರದಲಿ ಸಲಹುವ
ಶ್ರೀ ಕಮಲನಾಭ ವಿಠ್ಠಲ ಸುಜನರ"[೧೪೮]

ಹಾಡಿನಲ್ಲಿ ಹರಿಯನ್ನು ವಿವಿಧ ನಾಮಗಳಿಂದ ಬಣ್ಣಿಸುತ್ತಾ ಜೋಗುಳದ ಮೂಲಕ ಮಾತೃ ಪ್ರೇಮವನ್ನು ಕವಯಿತ್ರಿ ತೋರಿಸಿದ್ದಾಳೆ. ಈ ಹಾಡು ಸಾಧಾರಣ ವತ್ಸರದಲ್ಲಿ ಅಂದರೆ ಎಪ್ರಿಲ್ ೪, ೧೯೭೦ರಂದು ರಚಿತಗೊಂಡು ಗುರುಕಾಣಿಕೆಯಾಗಿ ಅರ್ಪಿತಗೊಂಡಿದೆ.

"ವಿರೋಧಿಕೃತು ಸಂವತ್ಸರ ಬರುತಿರೆ
ಪರೋಪಕಾರವ ಮಾಡುತ ಸುಜನರು
ವಿರೋಧಿಗಳ ದೂರಿಡುತಲಿ ಶ್ರೀಹರಿ
ಸರೋಜದಳನೇತ್ರನ ಸ್ತುತಿಸುವರು"[೧೪೯]

ಇದು ಭಕ್ತ ವತ್ಸಲನಾದ ಶ್ರೀಹರಿಯನ್ನು ಕರೆಯುವ ರೀತಿಯನ್ನು ಒಳಗೊಂಡಿದೆ. ಭಕ್ತರು, ತಾಳಮೇಳದವರು, ನಾರದ ತುಂಬೂರರು, ಅಂಬರದ ದೇವಗಣ, ಸಪ್ತ ಋಷಿಗಳು, ಮಹಾಕವಿಗಳೆಲ್ಲ ಸೇರಿಕೊಂಡು, ಸುಜನರು ಪರೋಪಕಾರವನ್ನು ಮಾಡುತ ಬದುಕಬೇಕು ಎಂದು ಹಾಡುತ್ತಿರುವರು. ಪ್ರತಿಯೊಬ್ಬರು ವಿರೋಧಿಗಳನ್ನು ದೂರವಿಟ್ಟು ಬದುಕಬೇಕೆಂಬುದನ್ನು ತಿಳಿಸುತ್ತದೆ.

"ವಿಶ್ವರೂಪಕ ವಿಶ್ವನಾಯಕ
ವಿಶ್ವತೋಮುಖ ವಿಶ್ವನಾಟಕ
ವಿಶ್ವವ್ಯಾಪಕ ವಿಶ್ವಧಾರಕ
ವಿಶ್ವಕುಟುಂಬಿಯೆ ವಿಶ್ವಾಸದಿ ಬಾ"[೧೫೦]

ಎನ್ನುತಾ ಪ್ರಾರ್ಥಿಸಿಕೊಳ್ಳುವರು. ಶ್ರೀಹರಿಯನ್ನು 'ವಿಶ್ವಕುಟುಂಬಿ' ಎಂದು ಕರೆದಿರುವುದು ಬಹು ಅರ್ಥಪೂರ್ಣವಾಗಿದೆ. ಶ್ರೀಹರಿಗೆ ಕಮಲಾಕ್ಷಿಸಮೇತ ಬಾ ಎಂದು ಕವಯಿತ್ರಿಯರು ಅತಿ ಭಕ್ತಿಯಿಂದ ಪ್ರಾರ್ಥಿಸಿರುವಳು. ಇದೇ ಸಂವತ್ಸರದಂದು ರಚಿಸಿರುವ ಮತ್ತೊಂದು ಹಾಡಿನಲ್ಲಿ (ಕೀ ೧೫೩) ಶ್ರೀಲಕ್ಷ್ಮಿಯ ಹೆಜ್ಜೆಯ ಮಹಿಮೆಯನ್ನು, ಪಾವಿತ್ರ್ಯತೆಯನ್ನು, ದಿವ್ಯತೆಯನ್ನು ಸ್ಮರಿಸಿರುವರು.

"ಹೆಜ್ಜೆ ತೊರೆ ಕಾಲಗೆಜ್ಜೆ ತೋರೆ
ಅರ್ಜುನ ಸಾರಥಿ ಪಟ್ಟದರಾಣಿ ಹೆಜ್ಜೆ ತೋರೆ"[೧೫೧]

ಲಕ್ಷ್ಮಿಯ ಶುಭದಾಯಕ ಪಾದವನ್ನು ಹಾಡಿಹೊಗಳಿ 'ವಿರೋಧಿಗಳನ್ನು ದೂರ ಓಡಿಸುವ ದಿವ್ಯವಾದ ಹೆಜ್ಜೆ ತೋರೆ' ಎಂದು ವಂದಿಸಿರುವಳು.

ಈ ಜಗದಲ್ಲಿ ಗೋವಿಂದನಾಮದ ಬಲದಿಂದ ಎಲ್ಲೆಡೆಗೆ ಆನಂದವು ತುಂಬಿಕೊಂಡಿದೆ. ಈ ನಾಮಸ್ಮರಣೆ ಮಾಡುವ ಸದ್ಭಕ್ತರಿಗೆ ಅಪಾರ ಸಂತೃಪ್ತಿಯನ್ನು ನೀಡುವುದು. ಇಂಥ ಆನಂದ ವತ್ಸರದಲ್ಲಿ ಬಂಧು-ಬಾಂಧವರೆಲ್ಲರೂ ಒಂದೆಡೆ ಕೂಡಿ ಏಕಭಾವದಿಂದ ಕುಣಿದಾಡುತ್ತಾ ಗೋವಿಂದನಾಮ ಭಜಿಸಬೇಕು.

"ಪಕ್ಷಿವಾಹನ ಪುರುಷೋತ್ತಮ ಹರಿಯು ಆನಂದ ವತ್ಸರದಿ
ರಕ್ಷಿಸಿ ಪೊರೆವನು ಭಕ್ತರ ತ್ವರದಿ"[೧೫೨]

ಎಂಬ ವಿಷಯವನ್ನು ನಿರೂಪಿಸುತ್ತದೆ, ಇದನ್ನು ಆನಂದ ವತ್ಸರದಿ, ಅಂದರೆ ಮಾರ್ಚ ೨೪, ೧೯೭೪ ರಂದು ಜೀವಮ್ಮ ರಚಿಸಿರುವಳು.

"ಪಕ್ಷಿವಾಹನ ಕಮಲಾಕ್ಷನ ಮಹಿಮೆಯ
ವೀಕ್ಷಿಸಿ ಮನದಿ ಹಿಗ್ಗುವ ಜನನಿ
ರಾಕ್ಷಸನಾಮ ವತ್ಸರದಲಿ ಭಕುತರ
ಮೋಕ್ಷದಾತನು ಸಲಹುವ ಜನರನು"[೧೫೩]

ಹರಿಸಿರಿಯ ರಾಣಿಯನ್ನು ಕೈಮುಗಿದು ವಿವಿಧ ವರಗಳನ್ನು ಮತ್ತು ಸನ್ಮತಿಯನ್ನು ನೀಡುವಂತೆ ಪ್ರಾರ್ಥಿಸಿದ್ದಾಳೆ.

"ಗಂಗಾಜನಕ ಪಾಂಡುರಂಗ ನಿಜ ಸತಿ
ಭೃಂಗಕುಂತಳೆ ಭಾಗ್ಯದ ಖಣಿಯೆ
ಅಂಗಜನಕ ವಿಹಂಗವಾಹನನ ಪಾ
ದಂಗಳ ಸ್ಮರಣೇಲಿ ನಲಿವ ಮನವಕೊಡು"[೧೫೪]

ಈ ಪರಿಯಲ್ಲಿ ಲಕ್ಷ್ಮಿಯನ್ನು ಮನತುಂಬಿ ಸ್ಮರಿಸಿದ್ದಾಳೆ. ಈ ಹಾಡನ್ನು ರಾಕ್ಷಸನಾಮ ವತ್ಸರ ಅಂದರೆ, ಎಪ್ರೀಲ್ ೪, ೧೯೭೫ ರಂದು ರಚಿಸಿದ್ದಾಳೆ

ಶ್ರೀರಂಗನನ್ನು ಮನಮಂದಿರಕ್ಕೆ ಆಹ್ವಾನಿಸುವ ಹಾಡಿನಲ್ಲಿ ಬಗೆಬಗೆ ಕ್ರೀಡೆಗಳನ್ನು ತೋರುತ, ಹೊಳೆಯುವ ಪೀತಾಂಬರವನ್ನುಟ್ಟು ಪಕ್ಷಿವಾಹನನನ್ನು ಕರೆಯುವ ಬಗೆ ಅಪ್ಯಾಯಮಾನವಾಗಿದೆ.

"ಗಂಗಾಜನಕಂಗೆ ಭೃಂಗ ಕುಂತಳೆಯರು
ರಂಗು ಮಾಣಿಕದಾರುತಿ ಬೆಳಗಿ
ಪೈಂಗಳನಾಮ ಸಂವತ್ಸರದಲಿ ಭವ
ಭಂಗವ ಮಾಡಲು ಬಾ ಹರಿಯೆ"[೧೫೫]

'ಈ ಭವಬಂಧನವನ್ನು ನಾಶಗೊಳಿಸಲು ಶ್ರೀಹರಿಯೆ ದಯಪಾಲಿಸು' ಎನುತ ಭೃಂಗಕುಂತಳೆಯರು ಮಾಣಿಕ್ಯದಾರುತಿಯನ್ನು ಎತ್ತಿ ಬಹು ಭಕ್ತಿಯಿಂದ ಬೇಡಿಕೊಳ್ಳುವರು. ಇದು ಪೈಂಗಳನಾಮ ಸಂವತ್ಸರ ಅಂದರೆ ಮಾರ್ಚ ೩, ೧೯೭೭ ರಂದು ರಚಿತಗೊಂಡಿದೆ.

"ಏನು ಮಾಯವೊ ಹರಿಯೆ ಶ್ರೀನಿವಾಸನೆ ನಿನ್ನ
ಧ್ಯಾನಿಸುವವರನು ಪೊರೆವೆ ಸಾನುರಾಗದಲಿ"[೧೫೬]

ಈ ಹಾಡಿನಲ್ಲಿ ಹರಿಯನ್ನು ಧ್ಯಾನಿಸುವವರನ್ನು ಆತ ಹೇಗೆ ಪೊರೆದ ಎಂಬ ಸಂಗತಿಗಳು ಒಡಮೂಡಿ ಬಂದಿವೆ. ಸುಧಾಮನ ಅವಲಕ್ಕಿಗೆ ಅಪಾರ ಸೌಭಾಗ್ಯವನ್ನು ನೀಡಿದನು, ದುಶ್ಯಾಸನನಿಂದ ವಸ್ತ್ರಾಪಹರಣಕ್ಕೊಳಗಾದ ದ್ರೌಪದಿಗೆ ಅಕ್ಷಯಾಂಬರ ನೀಡಿ ರಕ್ಷಿಸಿದನು. ಮೊಸಳೆಯಿಂದ ಗಜೇಂದ್ರನನ್ನು ರಕ್ಷಿಸಿದನು, ದುರ್ವಾಸ ಮುನಿಗಳು ಶಿಷ್ಯರಸಹಿತ ಹಸಿವೆಂದು ಊಟಕ್ಕೆ ಬಂದಾಗ ದ್ರೌಪದಿ ಪ್ರಾರ್ಥಿಸಲು ಒಂದೆಲೆಯ ಶಾಖದಿಂದ ಹಸಿವು ನೀಗಿಸಿದನು. ಅಜಮಿಳೆಯನ್ನು ಪೊರೆದದ್ದು, ಭಕ್ತ ಪ್ರಹ್ಲಾದನನ್ನು ರಾಕ್ಷಸ ತಂದೆಯಿಂದ ರಕ್ಷಿಸಿದ್ದು ಇಂಥ ಸರ್ವ ರಕ್ಷಕನ ಪಾದಕ್ಕೆರಗುವಳು.

"ಕಾಳಯುಕ್ತಿನಾಮ ಸಂವತ್ಸರದಿ ಸುಜನರಿಗೆ
ಬಾಳ ಸುಖ ಹರುಷಗಳ ಲೀಲೆ ತೋರಿಸುವ"[೧೫೭]

ಕೀರ್ತನೆಯನ್ನು ಕಾಳಯುಕ್ತಿನಾಮ ಸಂವತ್ಸರದಲಿ ಅಂದರೆ ಎಪ್ರಿಲ್ ೪, ೧೯೭೮ ರಂದು ರಚಿಸಿ ಜೀವಮ್ಮ ಶ್ರೀಗುರುಗಳಿಗೆ ಕಾಣಿಯಾಗಿ ಅರ್ಪಿಸಿರುವಳು.

ಹರಿಸ್ಮರಣೆಯಲ್ಲಿ ತೊಡಗುವವರನು ಕೈಬಿಡದೆ ರಕ್ಷಿಸುವನು. ಆದ್ದರಿಂದ ಮನದ ಎಲ್ಲ ಚಿಂತನೆಗಳನ್ನು ಮರೆತು ನಿಷ್ಠುರ ಮನೋಭಾವದಿಂದ ಲಕ್ಷ್ಮಿಕಾಂತನನ್ನು ಬಹು ವಿಧದಲಿ ಸ್ಮರಿಸಿದವರಿಗೆ ಹರಿ ಲಕ್ಷ್ಮಿಸಹಿತದಿ ಕೃಪೆದೋರುವನು, ಅಭಯ ನೀಡುವನು. ಇದನ್ನು (ಕೀ ೧೫೮) ಸಿದ್ಧಾರ್ಥನಾಮ ಸಂವತ್ಸರದಲ್ಲಿ ರಚಿಸಿರುವಳು.

"ವಧುವಾದೆ ಯಾರಿಗೆ ಮದನ ಗೋಪಾಲಗೊ
ಸುರತಿ ಯಶೋಧೆ ನಂದ ಕಂದನಿಗೊ"[೧೫೮]

ಇಲ್ಲಿ ಜೀವಮ್ಮ ಲಕ್ಷ್ಮಿಗೆ ನೀನು ವಧುವಾಗುವೆ ಯಾರಿಗೆಂದು ಹರಿಯ ಎಲ್ಲ ನಾಮಗಳನ್ನು ಕೇಳಿ ನಿನ್ನ ದೊರೆಯಾರೆಂದು ಪ್ರಶ್ನಿಸುವಳು.

"ಶ್ರದ್ಧೆಯಿಂದಲಿ ತನ್ನ ಭಜಿಪ ಭಕ್ತರ ಕಾಯ್ವ
ರೌದ್ರಿನಾಮ ಸಂವತ್ಸರದಿ
ಮುದ್ದು ಮೂರುತಿ ಕಮಲನಾಭ ವಿಠ್ಠಲನಿಗೆ
ಪದ್ಮಾಕ್ಷಿ ವನಮಾಲೆ ಹಾಕಿದೆಯಾ"[೧೫೯]

ಕೊನೆಗೆ ಪದ್ಮಾಕ್ಷಿಯು 'ಕಮಲನಾಭ ವಿಠ್ಠಲನಿಗೆ ಮಾಲೆ ಹಾಕಿದಳು' ಎಂದು ತಿಳಿಸಿರುವಳು. ಇದನ್ನು ಮಾರ್ಚ ೧೭, ೧೯೮೦ ರಂದು ಬರೆದಿರುವಳು.

"ಕೃಷ್ಣ ಎನ್ನ ಕಷ್ಟ ಹರಿಸೊ ವಿಷ್ಣುಸಾರಥಿಯೆ"[೧೬೦]

ಈ ಹಾಡಿನಲ್ಲಿ ಆತ್ಮ ನಿವೇದನಾ ಭಾವ ವ್ಯಕ್ತಗೊಂಡಿದೆ. ಅಹಲ್ಯೆ, ಗಜೇಂದ್ರ, ಅಜಮಿಳನನ್ನು ಉದ್ಧರಿಸಿದ ವಿಶ್ವೋದ್ಧಾರನನ್ನು ವಿನಮ್ರತೆಯಿಂದ ವಿನಂತಿಸಿಕೊಂಡಿರುವಳು. ಈ ಹಾಡನ್ನು ಮತ್ತು

"ಆರತಿ ಎತ್ತಿರೆ ವೈಯ್ಯಾರಿಯರರಸಗೆ
ಶ್ರೀ ರಮಾಕಾಂತ ಶ್ರೀ ಶ್ರೀನಿವಾಸನಿಗೆ"[೧೬೧]

ಇವೆರಡನ್ನು ಶ್ರೀ ದುರ್ಮತಿ ನಾಮಸಂವತ್ಸರದಂದು ಅಂದರೆ ಎಪ್ರಿಲ್ ೫, ೧೯೮೧ರಂದು ರಚಿಸಿರುವುದಾಗಿ ದಾಖಲಿಸಿರುವಳು.

"ಬಂದಾ ಗೋವಿಂದನು ಗೋಕುಲದಿಂದ
ಆನಂದ ಮುಕುಂದನು"[೧೬೨]

ಈ ಹಾಡಿನಲ್ಲಿ ಶ್ರೀಹರಿಯು ಗೋಕುಲದಿಂದ ಬಂದ ರೀತಿಯು, ಆತನ ವೇಷಭೂಷಣಗಳು, ನಡಿಗೆಯ ರೀತಿ, ತ್ರಿಲೋಕ ಸುಂದರಿಯರು ಗೋವಿಂದನನ್ನು ನರ್ತಿಸುತ್ತಾ ಬರಮಾಡಿಕೊಳ್ಳುವ ದೃಶ್ಯವನ್ನು ಸುಮನೋಹರವಾಗಿ ಚಿತ್ರಿಸಿರುವಳು. ಇದನ್ನು ಕೂಡ ದುರ್ಮತಿನಾಮ ಸಂವತ್ಸರದಲ್ಲಿ ರಚಿಸಿರುವಳು.

ಸೀಸಪದ್ಯವೆಂದು ಸೂಚಿಸಿರುವ –

"ಸುಂದರಾಂಗನ ಪಾದಕೊಂದಿಸುತ ಭಕ್ತಿಯಲಿ
ಮಂದರರೋದ್ಧಾರ ಮುಚುಕುಂದ ವರದ
ನೆಂದು ಸ್ತುತಿಸುತ ಭಕ್ತ ವೃಂದವನು ರಕ್ಷಿಸುವ
ಕುಂದೆಣಿಸಿದಲೆ ನಾರಸಿಂಹ ಹರಿಯು"[೧೬೩]

ಶ್ರೀ ಹರಿಸ್ತುತಿಯನ್ನೊಳಗೊಂಡಿರುವ ಇದನ್ನು ದುಂದುಭಿ ಸಂವತ್ಸರದಲಿ ರಚಿಸಿರುವುದಾಗಿ ಹಾಡಿನಲ್ಲಿ ಸೂಚಿಸಿರುವಳು. ಇದರಂತೆ ದೀರ್ಘ ಹಾಡುಗಳಾದ ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ ಹಾಗೂ ಶ್ರೀ ಹರಿಲೀಲಾ ಖಂಡ ಕಾವ್ಯಗಳನ್ನು ಕೂಡಾ ಯುಗಾದಿಯಂದು ರಚಿಸಿರುವಳೆಂಬುದು ತಿಳಿದುಬರುತ್ತದೆ.

ಒಟ್ಟಿನಲ್ಲಿ ಜೀವೂಬಾಯಿಯವರು ಯುಗಾದಿಯಂದು ರಚಿತವಾದ ವಿಶಿಷ್ಟ ಹಾಡುಗಳಲ್ಲಿ ಹರಿಸ್ತುತಿ, ಸಂಪ್ರದಾಯದ ಹಾಡುಗಳಾದ ಆರತಿ, ಮಂಗಳ ಮತ್ತು ಜೋಗುಳ ಪದಗಳು ಹಾಗೂ ಆತ್ಮ ನಿವೇದನ ಭಾವನೆಗಳು ಅಭಿವ್ಯಕ್ತಗೊಂಡಿವೆ. ಪ್ರತಿ ಯುಗಾದಿಯಂದು ಒಂದೊಂದು ಕೆಲವೊಮ್ಮೆ ಎರಡು ಮೂರು ಹಾಡುಗಳನ್ನು ಬರೆದು ಶ್ರೀಗುರುಗಳಿಗೆ ಅರ್ಪಿಸಿರುವಳು. ೧೯೬೧ ರ ಯುಗಾದಿಯಿಂದ ೧೯೮೨ರ ಯುಗಾದಿಯವರೆಗೆ ಇಂಥ ವಿಶೇಷ ಹಾಡುಗಳನ್ನು ಜೀವಮ್ಮ ರಚಿಸಿರುವುದು ತಿಳಿದುಬರುತ್ತದೆ. ಒಟ್ಟು ೨೨

ಹಾಡುಗಳು ಹಾಗೂ ಎರಡು ಖಂಡ ಕಾವ್ಯಗಳು ವಿವಿಧ ಸಂವತ್ಸರದಂದು ರಚಿಸಲ್ಪಟ್ಟಿವೆ. ಈ ಮೂಲಕ ಕವಯಿತ್ರಿ ಒಂದು ಸತ್ಸಸಂಪ್ರದಾಯವನ್ನು ಹಾಕಿಕೊಂಡು ಜೀವಿತದ ಕೊನೆಯವರೆಗೂ ಅದನ್ನು ಮುಂದುವರೆಸಿಕೊಂಡು ಬಂದಿರುವುದು ಗೊತ್ತಾಗುತ್ತದೆ.

**೪.೮ ವಿಶೇಷ ಕೀರ್ತನೆಗಳು**

ಜೀವಮ್ಮ ರಚಿಸಿರುವ ಕೀರ್ತನೆಗಳಲ್ಲಿ ಯಾವುದೇ ರೀತಿಯ ನಿರ್ದಿಷ್ಠ ವಿಭಾಗಕ್ಕೆ ಸೇರದ ಒಂದೇ ವಿಷಯವನ್ನು ಹೊಂದದ ಹಾಡುಗಳನ್ನು ಲೀಲಾವತಿ ಎಸ್. ರಾವ್. ಅವರು ವಿಶೇಷ ಕೀರ್ತನೆಗಳೆಂದು ಗುರುತಿಸುವರು. ಇಂತಹ ರಚನೆಗಳಲ್ಲಿ ಜೀವಮ್ಮ ತನ್ನದೇ ಆದ ವಿಶಿಷ್ಠ ಛಾಪನ್ನು ಮೂಡಿಸಿರುವಳು.

ಜೀವಮ್ಮ ರಚಿಸಿರುವ ವಿಶೇಷ ಹಾಡುಗಳಲ್ಲಿ ಬಹು ವಿಶಿಷ್ಠವಾದ ಹಾಡು "ಆ ಹಣ್ಣು ಈ ಹಣ್ಣು ನೆನೆಸಿ ಫಲವೇನು" ಎಂಬುದು. ಈ ಹಾಡಿನಲ್ಲಿ ಎಲ್ಲ ಹಣ್ಣುಗಳಲ್ಲಿ ಹುಣಸೇ ಹಣ್ಣು ಶ್ರೇಷ್ಠವಾದುದು. ಬೇರೆ ಬೇರೆ ಹಣ್ಣುಗಳ ಉಪಯೋಗವನ್ನು ತಿಳಿಸುವಳು. ಉತ್ತತ್ತಿ ಹಣ್ಣು, ಬಾಳೆಹಣ್ಣು, ಚಕ್ಕೋತಿ ಹಣ್ಣು, ಅನಾನಸ ಹಣ್ಣು, ಹೀಗೆ ವಿವಿಧ ಹಣ್ಣುಗಳು ಹೇಗೆ? ಯಾರಿಗೆ? ಉಪಯುಕ್ತ ಎಂಬುದನ್ನು ಒಂದೊಂದು ಸಾಲಿನಲ್ಲಿ ತಿಳಿಸಿರುವಳು. ಈ ಹಣ್ಣುಗಳು ಕೇವಲ ಕೆಲವರಿಗೆ ಮಾತ್ರ ಉಪಯೋಗಕ್ಕೆ ಬರುತ್ತವೆ. ಆದರೆ ಹುಣಸೆ ಹಣ್ಣು ಎಲ್ಲರಿಗೂ ಪ್ರಯೋಜನಕ್ಕೆ ಬರುತ್ತದೆ ಎಂಬುದನ್ನು

"ಬಡವರಿಗೂ ಈ ಹುಣಸೇ ಹಣ್ಣಿರಬೇಕು
ಬಲ್ಲಿದರಿಗೂ ಹುಣಸೇ ಹಣ್ಣಿರಬೇಕು
ಬಲ್ಲಿದರಿದರ ರುಚಿ ಎಲ್ಲ ಜನರುಗಳು
ಎಲ್ಲರಿಗೂ ಬೇಕಾದ ಈ ಹುಣಸೇಹಣ್ಣು"[೧೬೪]

ಈ ಮೂಲಕ ತಿಳಿಸಿರುವಳು. ಬಡವ-ಬಲ್ಲಿದರಿಗೂ ಈ ಹಣ್ಣುಬೇಕು. "ಪ್ರಾಯಶ: ಬಾಲ್ಯದಲ್ಲಿ ಕಂಡುಂಡ ಹುಣಸೆಮರ, ಹುಣಸೆಕಾಯಿ, ಹುಣಸೆ ಹಣ್ಣುಗಳು 'ಆ ಹಣ್ಣು ಈ ಹಣ್ಣು ನೆನಸಿ ಫಲವೇನು, ಈ ಹುಣಸೇ ಹಣ್ಣಿಗೆ ಸಮ ಬಾಹೋದೇನೆ' ಎಂಬ ಹಾಡು ರಚಿಸಲು ಪ್ರೇರಣೆ ನೀಡಿರಬೇಕು" ಎಂದು ಲೀಲಾವತಿ ಎಸ್. ರಾವ್. ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಇಂದು ನಿಡಗುರಕಿಯಲ್ಲಿ ಜೀವಮ್ಮಳ ಬರಹಕ್ಕೆ ಪ್ರೇರಣೆ ನೀಡಿದ ಹುಣಸೇ ಮರಗಳು ಮರೆಯಾಗಿ ಬಯಲು ಮಾತ್ರ ಉಳಿದುಕೊಂಡಿದೆ.

"ಹುಣಸೇ ಹಣ್ಣಿಲ್ಲದೆ ಭಾಂಡ ಶುದ್ದಿಗಳಿಲ್ಲ
ಹುಣಸೇ ಇಲ್ಲದೆ ಸ್ವಯಂ ಪಾಕ ರುಚಿಯು ಇಲ್ಲ
ಹುಣಸೇ ಮರಕ್ಕಿಂತ ಗಟ್ಟಿ ಮರಗಳಿಲ್ಲ"[೧೬೫]

ಜೀವಮ್ಮಳು ಹೀಗೆ ಹುಣಸೆ ಹಣ್ಣಿನ ಉಪಯೋಗವನ್ನು ತಿಳಿಸಿರುವಳು. ಪಾತ್ರೆಗಳನ್ನು ಚೆನ್ನಾಗಿ ಶುಚಿಗೊಳಿಸಬೇಕಾದರೆ ಹುಣಸೆ ಹಣ್ಣು ಬೇಕು. ಇಂದಿಗೂ ಗ್ರಾಮೀಣ ಭಾಗದಲ್ಲಿ ಹಿತ್ತಾಳೆ ಮತ್ತು ತಾಮ್ರದ ಪಾತ್ರೆಗಳನ್ನು ತೊಳೆಯಲು ಹುಣಸೆ ಹಣ್ಣನ್ನು ಬಳಸುವರು. ಇದರಿಂದ ಪಾತ್ರೆ ತಿಕ್ಕಿ ತೊಳೆದರೆ ಪಾತ್ರೆಗಳು ಥಳಥಳಿಸುತ್ತವೆ. ವಿಶೇಷ ವ್ರತ ಇಲ್ಲವೆ ಸಂದರ್ಭಗಳಲ್ಲಿ ತಮ್ಮ ಆಹಾರವನ್ನು ತಾವೇ ಸಿದ್ಧಪಡಿಸಿಕೊಳ್ಳುವ ಸಂದರ್ಭದಲ್ಲಿ ಹುಣಸೆ ಹಣ್ಣು ಅವಶ್ಯ. ಅದಿಲ್ಲದಿದ್ದರೆ ಅಡುಗೆ ರುಚಿಯನ್ನು ಕೊಡದು. ಅಂದರೆ ಎಲ್ಲ ಅಡುಗೆಗಳಲ್ಲಿ ಹುಣಸೆ ಹಣ್ಣು ಕಡ್ಡಾಯವಾಗಿ ಬೇಕೆ ಬೇಕು. ಹುಣಸೆ ಇದ್ದರೆ ಅಡುಗೆಗೆ ಒಂದು ವಿಶೇಷ ರುಚಿ. ಭೂಮಿಯ ಮೇಲಿನ ಎಲ್ಲ ಮರಗಳಲ್ಲಿ ಹುಣಸೆ ಮರ ಅತ್ಯಂತ ಗಟ್ಟಿಯಾದ ಮರ. 'ಹುಣಸೆ ಮುಪ್ಪಾದರೂ ಹುಳಿ ಮುಪ್ಪಾಗದು' ಎಂಬಂತೆ ಅದು ತನ್ನ ಸತ್ವವನ್ನು ಎಂದೂ ಕಳೆದುಕೊಳ್ಳದು. ರಸವನ್ನಾಗಿ, ಚಟ್ನಿಯನ್ನಾಗಿ ಮಾಡಿಕೊಂಡು ಹುಣಸೆ ಹಣ್ಣನ್ನು ಬಳಸುವರು. ಹುಣಸೇ ಹಣ್ಣಿನ ಬೆಲೆ ಎಷ್ಟೇ ಏರಿದರು ಎಲ್ಲರಿಗೂ ಬೇಕೆಬೇಕು.

"ಹರಿಯ ಅಪ್ಪಣೆಯಂತೆ ಹುಣಸೆಯ ಮರಹುಟ್ಟಿ
ಪರರಿಗೆ ಉಪಕರಿಸುವುದಿದು ಹರಿಯಾಜ್ಞೆ"[೧೬೬]

ಈ ಭುಮಿಯ ಮೇಲೆ ಹರಿಯ ಆಜ್ಞೆಯ ಮೇರೆಗೆ ಹುಣಸೆ ಮರ ಹುಟ್ಟಿದೆ ಎಂಬುದು ಜೀವಮ್ಮಳ ಅಭಿಮತ. ಇದು ಯಾವಾಗಲೂ ಪರೋಪಕಾರಿಯಾಗಿ ಬದುಕುವುದು. ಈ ಮೂಲಕ ಪ್ರತಿಯೊಬ್ಬ ಮಾನವರು ಈ ಭೂಮಿಯ ಮೇಲೆ ಜನಿಸಬೇಕಾದರೆ ಹರಿಯ ಕೃಪೆಯಿದೆ. ಇಂಥ ಹರಿಕೃಪೆಯಿಂದ ಜನಿಸಿದ ಮನುಜರೆಲ್ಲರೂ ಪರೋಪಕಾರ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂಬುದನ್ನು ತಿಳಿಸಿರುವಳು.

ಹುಣಸೆ ಹಣ್ಣಿನಂತೆ ನೀರು ಸಹ ಜೀವೂಬಾಯಿಯ ದೃಷ್ಟಿಯಲ್ಲಿ ಬಹು ಮಹತ್ವಪೂರ್ಣವಾದುದು, ಉಪಯುಕ್ತವಾದುದು ನೀರು. "ನೀರಿಲ್ಲದಲೆ ಯಾವ ಸಾಧನವು ನಡೆಯದು"[೧೬೭] ಎಂಬುದು ಜೀವಮ್ಮಳ ಸ್ಪಷ್ಟ ಅಭಿಪ್ರಾಯ. ಯೋಗ, ಸ್ನಾನ, ದೇವಾರ್ಚನೆ, ಮುಖವ ತೊಳೆಯಲು, ಮನೆ ಸಾರಿಸಲು, ಮಡಿ ತೊಳೆಯಲು, ನೆಲ ಶುದ್ಧಿಗೆ, ಗೋಸೇವೆಗೆ, ತುಳಸಿಗೆರೆಯಲು, ಹರಿಪೂಜೆಗೆ, ಪಾಕ ತಯಾರಿಸಲು, ಅತಿಥಿ ಪೂಜೆಗೆ, ಪಾದ ತೊಳೆಯಲು, ಬೆಳೆಗಳಿಗೆ, ತೆಪ್ಪೋತ್ಸವಕ್ಕೆ, ಕಮಲ ಬೆಳೆಯಲು ಮುಂತಾದ ಕ್ರಿಯೆಗಳಿಗೆ ನೀರು ಅವಶ್ಯವಾಗಿ ಬೇಕೆಂಬ ವಾಸ್ತವಿಕತೆಯನ್ನು, ಅನಿವಾರ್ಯತೆಯನ್ನು ಜೀವಮ್ಮ ತಿಳಿಸಿರುವಳು. ಅವಳ ದೃಷ್ಠಿಯಲ್ಲಿ 'ನೀರು ಕೇವಲ ನೀರಲ್ಲ'

ಜೀವಮ್ಮಳ ಪ್ರಕಾರ ನೀರು ಬರೇ ಜಡವಸ್ತುವಲ್ಲ. ಅದಕ್ಕೆ ಕಾರಣವನ್ನು ಹೀಗೆ ಕೊಡುವಳು; ನೀರಜಾಕ್ಷನು ಜಲದಲಿ ವಾಸವಾಗಿಹನು, ನೀರಿನೊಳು ಹೊಕ್ಕು ವೇದವ ತಂದನು. ನೀರಿನಲ್ಲಿ ಮುಳುಗಿ ಭಾರವ ಹೊತ್ತು ನಿಂತನು. ನೀರ ನಡುವೆ ದ್ವಾರಕಾಪುರ ನಿರ್ಮಿಸಿದನು. ಚಂದ್ರ, ಕಾಮಧೇನು, ಐರಾವತ, ಕಮಲಗಳು ನೀರಿನಲ್ಲಿ ಹುಟ್ಟಿರುತ್ತವೆ. ಅಷ್ಟೇ ಅಲ್ಲ ಕಮಲಾಕ್ಷಿ ಹುಟ್ಟಿರುವ ಕಮಲವೂ ಜಲದಲ್ಲಿಯೇ

ಹುಟ್ಟಿರುವುದು. ಆದ್ದರಿಂದ ನೀರು ಸಾಮಾನ್ಯವಾದ ಪದಾರ್ಥವಲ್ಲವೆಂಬುದನ್ನು ಬಹು ಅರ್ಥಪೂರ್ಣವಾಗಿ ನಿದರ್ಶನಗಳ ಮೂಲಕ ತಿಳಿಸಿರುವಳು.

"ನೀರಿನೊಳು ಗಜದ ಶಾಪಕಳೆದು ಪೊರೆವನು
ನೀರೆ ದ್ರೌಪದಿಯ ಅಭಿಮಾನವನ್ನು ಕಾಯ್ದ"[೧೬೮]

ಇಂಥ ರಚನೆಯ ಮೂಲಕ 'ನೀರು' ಮತ್ತು 'ನೀರೆ' ಎಂಬ ಶಬ್ದಗಳನ್ನು ಅತ್ಯಂತ ಚಮತ್ಕಾರಿಕವಾಗಿ ಕವಯಿತ್ರಿ ಬಳಸಿ ಜಾಣ್ಮೆ ತೋರಿದ್ದಾಳೆ.

ಮನೋಹರನು ಮುರಳಿಯನೂದುವ ಪರಿ ಹಾಗೂ ಅವನ ಮನಮೋಹಕವಾದ ಪರಿಣಾಮ ತೀವ್ರತೆಯನ್ನು 'ಒಂದು ದಿನದಲಿ ಇಂದಿರೇಶನು' ಎಂಬ ಹಾಡಿನಲ್ಲಿ ನಿರೂಪಿಸಿರುವಳು.

ಗೋಪಾಲನು ಗೋಪರ ಸಮೂಹದಲ್ಲಿ ನಿಂತುಕೊಂಡು ಮನಸ್ಸಿಗೆ ಬಹು ಆಕರ್ಷಕವಾಗುವಂತೆ ಕೊಳಲ ನಿನಾದವನು ಗೈಯ್ಯುವನು. ಇದನ್ನು ಕೇಳಿ ಅಲ್ಲಿಯ ಪ್ರಾಣಿ ಪಕ್ಷಿಗಳು, ಅವುಗಳ ಜೊತೆ ತರುಣಿಯರು ತಮ್ಮ ತಮ್ಮ ಕಾರ್ಯವನ್ನು ಮರೆತು ಗೋಪಾಲನ ಬಳಿಬಂದು ನಿನಾದವನಾಲಿಸುತ ಮೈಮರೆತು ನಿಂತರು. ಆಗ ಕೃಷ್ಣನು 'ನಾರಿಮಣಿಯರೆ ರಾತ್ರಿವೇಳೆಯು ಈಗ ಇಲ್ಲಿ ಬಂದಿರೇತಕೆ' ಎಂದು ಪ್ರಶ್ನಿಸುವನು. 'ಬಾಲಕೃಷ್ಣನೇ ನಿನ್ನ ಕೊಳಲಿನ ನಾದ ಕೇಳುತ ಓಡಿಬಂದೆವು. ಈಗಲೆಮ್ಮಯ ಮನವು ಹರುಷಿಸೆ ಬೇಗ ನಿನ್ನನ್ನು ಬೇಡಿಕೊಂಬೆವು' ಎಂದು ನಾರಿಮಣಿಯರು ಪ್ರಾರ್ಥಿಸುವರು. ಆಗ ಕೃಷ್ಣನು ನಾರಿಮಣಿಯರ ಜೊತೆ ವಿವಿಧ ರೀತಿಯಲ್ಲಿ ಸರಸವಾಡುತ್ತಿರುವನು. ಇದನ್ನು ಕಂಡ ನಾರಿಯರು ಎಲ್ಲ ಚಿಂತೆಯ ಮರೆತು 'ಏನು ಪುಣ್ಯವೋ ನಮ್ಮದೆನುತಲಿ ದಾನವಾರಿಯ ಸ್ಮರಿಸುತ್ತಿದ್ದರು' ಅಷ್ಟರೊಳಗೆ ಕೃಷ್ಣನು ಮಾಯವಾದನು. ಆಗ ಅತಿ ಕಾತುರದಿಂದ ಗೋಪಿಯರು.

"ಜಾಜಿ ಸಂಪಿಗೆ ಸೂಜಿಮಲ್ಲಿಗೆ
ರಾಜೀವಾಕ್ಷನ ಕಾಣಲಿಲ್ಲವೆ
ಬಿಳಿಯ ಮಲ್ಲಿಗೆ ಎಳೆಯ ತುಳಸಿಯೆ
ನಳಿನಾಭನ ಸುಳಿವು ಕಾಣಿರಾ
ಸರಸದಿಂದಲಿ ಹರಿವ ಯಮುನೆಯೆ
ಸರಸಿಜಾಕ್ಷನ ಪಾದ ಕಾಣೆಯಾ
ಚಿಗರಿ ಮರಿಗಳೆ ನಿಮ್ಮ ಕಂಗಳ
ನಳಿನನಾಭನ ಸುಳಿವು ಕಾಣಿರಾ"[೧೬೯]

ಸುತ್ತಮುತ್ತಲಿನ ಎಲ್ಲ ಪ್ರಾಣಿ–ಪಕ್ಷಿ, ಹೂ–ಮರ, ನದಿ–ವನಗಳನ್ನು ಶ್ರೀಹರಿಯನ್ನು ನೋಡಿರುವಿರೆ? ಎಂದು ಕೇಳುವಳು. ಇದೇ ರೀತಿಯಾಗಿ ಅಕ್ಕಮಹಾದೇವಿಯೂ ಕೂಡ ತನ್ನೊಡೆಯ ಚನ್ನಮಲ್ಲಿಕಾರ್ಜುನನನ್ನು ಹುಡುಕುತ್ತಾ ಹುಡುಕುತ್ತಾ ಸಂಚರಿಸುವಾಗ ಎಲ್ಲಿಯೂ ಕಾಣದಿದ್ದಾಗ

"ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ ನೀವು ಕಾಣಿರೆ
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ ನೀವು ಕಾಣಿರೆ
ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ
ಗಿರಿಗಹ್ವರದೊಳಾಡುವ ನವಿಲುಗಳಿರಾ ನೀವು ಕಾಣಿರೆ
ಚನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೆ"[೧೭೦]

ಚನ್ನಮಲ್ಲಿಕಾರ್ಜುನನನ್ನು ಕಾಣಬೇಕೆಂಬ ತೀವ್ರ ಹಂಬಲದಿಂದ ಎಲ್ಲೆಡೆಗೆ ಹುಡುಕುತ್ತಾ ತಿರುಗುತ್ತಿರಲು ಗಿಳಿಗಳನ್ನು, ಕೋಗಿಲೆಗಳನ್ನು, ತುಂಬಿಗಳನ್ನು, ಹಂಸಗಳನ್ನು, ನವಿಲುಗಳನ್ನು, ಕಂಡ ಪ್ರಾಣಿ–ಪಕ್ಷಿಗಳನ್ನು ಕೇಳುವಳು. ಜೀವೂಬಾಯಿಯೂ ಕೂಡ ಇದೇ ಭಾವವನ್ನು ವ್ಯಕ್ತಪಡಿಸಿರುವಳು.

"ಸುಂದರಾಂಗನೆ ಮಂದ ಹಾಸನೆ
ಮಂದರೋದ್ಧರ ಬಾರೋ ಬೇಗನೆ
ಇಂದಿರೇಶನೆ ಇಭರಾಜನೆ
ರಂಗನಾಥನೆ ಬಾರೊ ಬೇಗನೆ"[೧೭೧]

ಎನುತ ಗೋಪಿಯರು ಪರಿಪರಿಯಾಗಿ ಶ್ರೀಹರಿಯನ್ನು ದಯಮಾಡುವಂತೆ ಬೇಡಿಕೊಳ್ಳುವರು, ಮೊರೆಯಿಡುವರು.

"ಹೀಗೆ ಗೋಪೇರು ಮೊರೆಯನಿಡುತಿರೆ
ಮಂಗಳಾಂಗನು ಬಂದನೆದುರಿಗೆ"[೧೭೨]

ತತ್‌ಕ್ಷಣ ಪ್ರತ್ಯಕ್ಷನಾದ ಕೃಷ್ಣನನ್ನು ಕಂಡು ಗೋಪಿಯರೆಲ್ಲರೂ ಸಂತೋಷ ಪಡುವರು; ಕುಣಿದಾಡುವರು. ಈ ಗೀತೆಯಲ್ಲಿ ಕೃಷ್ಣ ಮತ್ತು ಗೋಪಿಯರ ನಡುವಿನ ಮಧುರವಾದ ಬಾಂಧವ್ಯ ಬಹು ಸೊಗಸಾಗಿ ಮೂಡಿ ಬಂದಿದೆ. ಸಖ್ಯ ಭಕ್ತಿಯ ಭಾವವು ಅಭಿವ್ಯಕ್ತಗೊಂಡಿದೆ.

"ತಿರುಪತಿ ಯಾತ್ರೆಯ ಮಾಡಿ ತಿರುಪತಿ" ಹಾಡಿನಲ್ಲಿ ತಿರುಪತಿ ಬೆಟ್ಟದ ದರ್ಶನದ ಫಲ, ಮೆಟ್ಟಿಲನು ಏರಿ ಗೋವಿಂದನೆಡೆಗೆ ಸಾಗುವ ರೀತಿ, ಪುಷ್ಕರಣಿಯ ಸ್ನಾನ, ಮೂರು ದ್ವಾರಗಳನ್ನು ದಾಟಿ, ಶ್ರೀವೆಂಕಟೇಶ

ದರ್ಶನ, ಕೊಪ್ಪರಿಗೆಯಲ್ಲಿ ಹಣ ತಪ್ಪದೆ ಸುರಿಯುವ ಕ್ರಿಯೆ, ಹೇಮದ್ವಾರದಲ್ಲಿ ನಿಂತು ಸ್ವಾಮಿಯ ಶೃಂಗಾರ ಕಾಣುವ ಪರಿಯನ್ನು ಜೀವಮ್ಮ ಕಣ್ಣು ಕಟ್ಟುವಂತೆ ಚಿತ್ರಿಸಿದ್ದಾಳೆ.

"ತಿರುಪತಿ ಯಾತ್ರೆಯ ಮಾಡಿ ಮನದ
ದುರಿತ ತಾಪಗಳ ನೀಡಾಡಿ. . . . ."[೧೭೩]

ಈ ಮೂಲಕ ತಿರುಪತಿ ಯಾತ್ರೆಯ ಪ್ರಯೋಜನ ಮತ್ತು ಅದರಿಂದ ದೊರೆಯುವ ಆನಂದ, ನೆಮ್ಮದಿಯನ್ನು ತಿಳಿಸಿರುವಳು. ಹರಿದಾಸರ ನೆಲೆಗಳಲ್ಲಿ ತಿರುಪತಿಯೂ ಒಂದು. ಪಂಡರಪುರ ಮತ್ತು ಉಡುಪಿಗಳು ಇನ್ನುಳಿದ ಹರಿದಾಸರ ಕೇಂದ್ರ ಸ್ಥಳಗಳು.

"ವಾದಿರಾಜಾಶ್ರಮ ನೋಡಲು ಸಂಭ್ರಮ
ಪಾಡಿ ಪೊಗಳುವರಿಗಾಹುದು ಪ್ರೇಮ"[೧೭೪]

ಈ ಹಾಡಿನಲ್ಲಿ ಜೀವೂಬಾಯಿಯು ವಾದಿರಾಜರ ಆಶ್ರಮದಲ್ಲಿ ಪುರಂದರದಾಸರ ಪುಣ್ಯ ದಿನವನ್ನು ಆಚರಿಸಿದ ಸಂಭ್ರಮವನ್ನು ವರ್ಣಿಸಿದ್ದಾಳೆ. "ಬಸವಣ್ಣನವರ ನಂತರದ ವಚನಕಾರರು ಅವರನ್ನು ಗೌರವದಿಂದ ಸ್ಮರಿಸಿದಂತೆ ಪುರಂದರ ದಾಸರನ್ನು ಅವರ ಮುಂದಿನ ಹರಿದಾಸರು ಗೌರವಾದರಗಳಿಂದ ಸ್ಮರಿಸಿದ್ದಾರೆ"[೧೭೫] ತನ್ನ ಹಿಂದಿನ ಹರಿದಾಸರು ಪುರಂದರದಾಸರನ್ನು ಆರಾಧಿಸಿದ ಹಾಗೆ ಜೀವೂಬಾಯಿಯು ಅತೀ ಶ್ರದ್ಧೆ ಮತ್ತು ಭಕ್ತಿಯಿಂದ ತನ್ನ ರಚನೆಗಳಲ್ಲಿ ವರ್ಣಿಸಿದ್ದಾಳೆ; ವಂದಿಸಿದ್ದಾಳೆ. 'ಶ್ರೀಪುರಂದರ ವಿಠ್ಠಲದಾಸರ ಚರಿತ್ರೆ' ಖಂಡ ಕಾವ್ಯದಲ್ಲಿಯೂ ಸಹ ಜೀವಮ್ಮ ಪುರಂದರದಾಸರ ಚರಿತ್ರೆಯನ್ನು ಸುದೀರ್ಘವಾಗಿ ಚಿತ್ರಿಸಿರುವಳು.

ಹೀಗೆ ಜೀವೂಬಾಯಿಯು ಬಿಡಿ ಕೀರ್ತನೆಗಳಲ್ಲಿ ವಿಭಿನ್ನ ವಿಷಯ, ಭಾವಗಳನ್ನು ಅಭಿವ್ಯಕ್ತ ಪಡಿಸಿರುವಳು. ಭಗವಂತನ ಸಂಕೀರ್ತನೆಗೆ ಮೊದಲ ಪ್ರಾಶಸ್ತ್ಯ ನೀಡಿರುವ ಜೀವಮ್ಮ, ದೇವ-ದೇವತೆ, ಗುರುಗಳನ್ನು ಸ್ತುತಿಸಿರುವಳು. ಗಣಪತಿ, ಕೃಷ್ಣ, ನರಸಿಂಹ, ಶ್ರೀನಿವಾಸ, ರಾಮ, ಹನುಮ, ಭೀಮ, ಮಧ್ವರನ್ನು ಮನಸಾರೆ ಹೊಗಳಿ ತಲೆಬಾಗಿಸಿದ್ದಾಳೆ. ಹರಿಯ ಲೀಲೆಗಳನ್ನು ತಿಳಿಸುವ ಸಂದರ್ಭದಲ್ಲಿ ದಶಾವತಾರಗಳನ್ನು ವರ್ಣಿಸಿದ್ದಾಳೆ. ಸಂಕ್ಷಿಪ್ತವಾಗಿಯೂ ಕೆಲವೊಮ್ಮೆ ದೀರ್ಘವಾಗಿಯು ಈ ವರ್ಣನೆ ಬಂದಿದೆ. ಕೃಷ್ಣನ ಬಾಲಲೀಲೆಗಳನ್ನು ಮಾತೃವಾತ್ಸಲ್ಯ ಭಾವ ತುಂಬಿ ಕೊಂಡಾಡಿದ್ದಾಳೆ. ಬಗೆಬಗೆಯ ಜಾನಪದ ಆಟಗಳನ್ನು ಪ್ರಸ್ತಾಪಿಸಿರುವಳು. ಆತ್ಮ ನಿವೇದನೆಯು ಜೀವಮ್ಮಳ ಕೀರ್ತನೆಗಳ ಇನ್ನೊಂದು ಮುಖ್ಯ ಅಂಶ. ಬವ ಬಂಧನದಿಂದ ಮುಕ್ತಗೊಳಿಸುವಂತೆ ಹರಿಯಲ್ಲಿ ಬಹು ಆಪ್ತತೆಯಿಂದ ನಿವೇದಿಸಿಕೊಂಡಿರುವುದು ಗೊತ್ತಾಗುತ್ತದೆ. 'ಎಲ್ಲವೂ ನೀನೆ ನಿನ್ನನ್ನು ಬಿಟ್ಟರೆ ನನಗ್ಯಾರು ಗತಿಯಿಲ್ಲ' ಎಂದು ತನ್ನನ್ನು ಸಂಪೂರ್ಣವಾಗಿ ಶ್ರೀಹರಿಗೆ ಸಮರ್ಪಿಸಿಕೊಂಡಿರುವಳು. 'ಈ ಭೂಮಿಯ ಮೇಲೆ ಏನೆ ಮಾಡಿದರು ಪಾಪ ಹಾನಿಯಾಗದು'

ಎಂಬ ಲೋಕ ನೀತಿಯನ್ನು ತಿಳಿಸಿ ಹರಿಸ್ಮರಣೆಯಿಂದ ಮಾತ್ರ ಪಾಪ ಪರಿಹಾರ ಸಾಧ್ಯವೆಂದು ತಿಳಿಸಿರುವಳು. ಜಗತ್ತಿನ ಪ್ರತಿಯೊಂದು ಜೀವಿಯನ್ನು ಜಗದೇಕನಾಥನಾದ ಹರಿ ರಕ್ಷಿಸುವನು. ಈ ಮೂಲಕ ಜನತೆಗೆ ಧೈರ್ಯವನ್ನು ತುಂಬಿರುವಳು.

ಸಂಪ್ರದಾಯದ ಹಾಡುಗಳು ಜೀವಮ್ಮಳ ದೇಶಿಯತೆ ಮತ್ತು ಹಳ್ಳಿಯ ಜೀವನ, ಸಂಪ್ರದಾಯ, ಭಗವಂತನ ಭಕ್ತಿಯನ್ನು ತಿಳಿಸುತ್ತವೆ. ಮದುವೆ ಸಂದರ್ಭದ ವಿವಿಧ ಆಚರಣೆ, ಸಂಪ್ರದಾಯಗಳ ಹಾಡುಗಳು, ಮಂಗಳ ಆರತಿ ಎತ್ತುವ ಹಾಡುಗಳು, ಲಾಲಿ–ಜೋಗುಳ, ಶೋಭನ, ಉಡಿ ತುಂಬುವ ಹಾಡುಗಳು ನಮಗೆ ಜಾನಪದೀಯ ಬದುಕನ್ನು ಮತ್ತು ಜನಪದ ಅಂಶಗಳನ್ನು ತಿಳಿಸಿಕೊಡುವಲ್ಲಿ ಯಶಸ್ವಿಯಾಗುತ್ತವೆ. ಗಂಡನ ಮನೆಗೆ ತೆರಳುವ ಹೆಣ್ಣಿಗೆ ಹೇಳುವ ಬುದ್ದಿವಾದದ ಹಾಡುಗಳು ನೈತಿಕತೆಯನ್ನು ತಿಳಿಸುತ್ತವೆ. ಆರತಿ ಪ್ರಕಾರಗಳನ್ನು ತಿಳಿಸುತ್ತಾಳೆ.

ಯುಗಾದಿಯಂದು ರಚಿತ ಹಾಡುಗಳು ಹರಿಸಂಕೀರ್ತನೆ, ಆತ್ಮನಿವೇದನೆ, ಸಂಪ್ರದಾಯ ಹಾಡುಗಳು, ಸಂವತ್ಸರದ ಹೆಸರುಗಳನ್ನು ತಿಳಿಸುತ್ತವೆ. ಜೀವೂಬಾಯಿಯು ಹಾಕಿಕೊಂಡು ಬಂದಿರುವ ಒಂದು ಸತ್ಸಂಪ್ರದಾಯಕ್ಕೆ ಈ ರಚನೆಗಳು ಸಾಕ್ಷಿಯಾಗಿವೆ. ವಿಶೇಷ ಕೀರ್ತನೆಗಳಲ್ಲಿ ಹುಣಸೆ ಮರ, ಹುಣಸೆ ಹಣ್ಣಿನ ಉಪಯೋಗ ಮತ್ತು ಮಹತ್ವವನ್ನು ತಿಳಿಸಿರುವಳು. 'ಅಡುಗೆಗೆ ಹುಣಸೆ ಹಣ್ಣು ಅನಿವಾರ್ಯ' ಎಂಬುದನ್ನು ತೋರಿದ್ದಾಳೆ. 'ನೀರು' ಅತ್ಯಂತ ಉಪಯುಕ್ತವಾದುದು. ಜಗತ್ತಿನ ಪ್ರತಿಯೊಂದು ಜೀವಿಗೆ, ಕಾರ್ಯಗಳಿಗೆ ನೀರು ಅನಿವಾರ್ಯ ಎಂಬುದನ್ನು ವಿವಿಧ ನಿದರ್ಶನಗಳ ಮೂಲಕ ಋಜುವಾತುಗೊಳಿಸಿರುವಳು. ಕೃಷ್ಣನ ಮುರಳಿನಾದ, ಕೃಷ್ಣನ ಸಖ್ಯಕ್ಕೆ ಪರಿತಪಿಸುವ ಗೋಪಿಯರ ವಿರಹ ತಾಪವು ಮನಮೋಹಕವಾಗಿ, ಚಿತ್ತಾಕರ್ಷಕವಾಗಿ ಮೂಡಿಬಂದಿದೆ.

ಒಟ್ಟಿನಲ್ಲಿ ಜೀವೂಬಾಯಿಯವರ ಬಿಡಿ ಕೀರ್ತನೆಗಳು ವಸ್ತು ವೈವಿದ್ಯತೆಯನ್ನು ಹೊಂದಿರುವುದು ತಿಳಿಯುತ್ತದೆ. ಪುರಾಣ ಕತೆಗಳು, ಸಂಪ್ರದಾಯ, ಆಚಾರ–ವಿಚಾರಗಳನ್ನು ತನ್ನ ಕೀರ್ತನೆಗಳಲ್ಲಿ ವ್ಯಕ್ತಪಡಿಸಿರುವುದು ಜೀವಮ್ಮಳ ಕವಿತಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿವೆ. ಎಲ್ಲ ಕೀರ್ತನೆಗಳ ಹಿಂದೆ ಹರಿ ಭಕ್ತಿಯೆ ಸ್ಥಾಯಿಯಾಗಿರುವುದು ತಿಳಿದುಬರುತ್ತದೆ.

## ಅಡಿ ಟಿಪ್ಪಣಿಗಳು

೧. ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೨೮ (ಪ್ರಸ್ತಾವನೆ)

೨. ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ–೮ ಕೀರ್ತನಕಾರರು ಪು.೨

೩. ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೧ ಕೀ – ೧

೪. ಅದೇ ಪು. ೧೦೪ – ಕೀ – ೭೬

೫. ಅದೇ ಪು. ೧೦೬ – ಕೀ – ೭೭

೬. ಅದೇ ಪು. ೧೦೮ – ಕೀ – ೭೮

೭ ಅದೇ ಪು. ೧೦೯ – ಕೀ – ೭೯

೮. ಅದೇ ಪು. ೧೧೧ – ಕೀ – ೮೦

೯. ಅದೇ ಪು. ೧೧೧ – ಕೀ – ೮೧

೧೦. ಅದೇ ಪು. ೧೧೩ – ಕೀ – ೮೨

೧೧. ಅದೇ ಪು. ೧೧೫ – ಕೀ – ೮೪

೧೨. ಅದೇ ಪು. ೧೦೦ – ಕೀ – ೭೨

೧೩. ಅದೇ ಪು. ೧೦೨ – ಕೀ – ೭೪

೧೪. ಅದೇ ಪು. ೧೦೩ – ಕೀ – ೭೪

೧೫. ಅದೇ ಪು. ೮೮ – ಕೀ – ೬೧

೧೬ ಅದೇ ಪು. ೯೦ – ಕೀ – ೬೩

೧೭ ಅದೇ ಪು. ೯೫ – ಕೀ – ೬೭

೧೮. ಅದೇ ಪು. ೯೫ – ಕೀ – ೬೮

೧೯. ಅದೇ ಪು. ೭೪ – ಕೀ – ೫೦

೨೦. ಅದೇ ಪು. ೭೬ – ಕೀ – ೫೧

೨೧. ಅದೇ ಪು. ೮೧ – ಕೀ – ೫೨

೨೨. ಅದೇ ಪು. ೭೭ – ಕೀ – ೫೪

೨೩. ಅದೇ ಪು. ೮೬ – ಕೀ – ೫೩

೨೪. ಅದೇ ಪು. ೯೯ – ಕೀ – ೫೯

೨೫. ಸಿದ್ಧಾಂತ ಶಿಖಾಮಣಿ : ಪರಿಚ್ಛೇದನ ಶ್ಲೋಕ ೨೬೩

೨೬ ಕೈವಲ್ಯ ಪದ್ಧತಿ – ಶಿವಕಾರುಣ್ಯಸ್ಥಲ ಪದ್ಯ – ೧

೨೭ ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೧೨೩ – ಕೀ – ೯೦

೨೮. ಅದೇ ಪು. ೧೨೦ – ಕೀ – ೮೮

೨೯. ಅದೇ ಪು. ೨೩೫ – ಕೀ – ೧೧೧

೩೦. ಅದೇ ಪು. ೭ – ಕೀ – ೪

೩೧. ಅದೇ ಪು. ೧೧ – ಕೀ – ೫

೩೨. ಅದೇ ಪು. ೩೧ – ಕೀ – ೧೮

೩೩. ಶತಕತ್ರಯ : ಶಿವಾಧವಶತಕ ಪದ್ಯ – ೬

೩೪. ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೧೧೦ – ಕೀ – ೮೦

೩೫. ಅದೇ ಪು. ೧೧೨ – ಕೀ – ೮೨

೩೬. ಅದೇ ಪು. ೧೪೦ – ಕೀ – ೧೦೬

೩೭. ಅದೇ ಪು. ೮೩ – ಕೀ – ೫೭

೩೮. ಅದೇ ಪು. ೮೪ – ಕೀ – ೫೮

೩೯. ಅದೇ ಪು. ೧೦೮ – ಕೀ – ೭೯

೪೦. ಕೈವಲ್ಯ ದರ್ಪಣ – ಬಾಲಲೀಲಾ ಮಹಾಂತ ಶಿವಯೋಗಿ

೪೧. ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೭ – ಕೀ – ೩

೪೨. ಅದೇ ಪು. ೮೫ – ಕೀ – ೫೯

೪೩. ಅದೇ ಪು. ೧೫೪ – ಕೀ – ೧೧೪

೪೪. ಅದೇ ಪು. ೩೩ – ಕೀ – ೨೦

೪೫. ಅದೇ ಪು. ೩೪ – ಕೀ – ೨೦

೪೬ ಅದೇ ಪು. ೪೦ – ಕೀ – ೨೬

೪೭ ಅದೇ ಪು. ೫೬ – ಕೀ – ೩೮

೪೮. ಅದೇ ಪು. ೬೬ – ಕೀ – ೪೪

೪೯. ಅದೇ ಪು. ೬೬ – ಕೀ – ೪೪

೫೦. ಅದೇ ಪು. ೧೨೧ – ಕೀ – ೮೯

೫೧. ಅದೇ ಪು. ೧೦೬ – ಕೀ – ೭೭

೫೨. ಅದೇ ಪು. ೧೧೧ – ಕೀ – ೮೧

೫೩. ಅದೇ ಪು. ೧೮ – ಕೀ – ೮

೫೪. ಅದೇ ಪು. ೨೨ – ಕೀ – ೧೧

೫೫. ಅದೇ ಪು. ೪೮ – ಕೀ ೩೯

೫೬ ಅದೇ ಪು. ೧೨೫ – ಕೀ ೯೨

೫೭ ಅದೇ ಪು. ೧೧೫ – ಕೀ ೮೫

೫೮. ಅದೇ ಪು. ೧೧೮ – ಕೀ ೮೭

೫೯. ಅದೇ ಪು. ೧೨೭ – ಕೀ ೯೩

೬೦. ಅದೇ ಪು. ೧೩೧ – ಕೀ ೯೭

೬೧. ಅದೇ ಪು. ೧೩೮ – ಕೀ ೧೦೪

| | | |
|---|---|---|
| ೬೨. | ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ – ಕೀರ್ತನಕಾರರು | ಪು ೧೩ |
| ೬೩. | ಅದೇ | ಪು ೬೫ |
| ೬೪. | ಅದೇ | ಪು ೧ |
| ೬೫. | ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ | ಪು. ೫ – ಕೀ ೨ |
| ೬೬. | ಅದೇ | ಪು. ೮ – ಕೀ ೪ |
| ೬೭. | ಅದೇ | ಪು. ೮ – ಕೀ ೪ |
| ೬೮. | ಅದೇ | ಪು. ೮ – ಕೀ ೪ |
| ೬೯. | ಅದೇ | ಪು. ೯ – ಕೀ ೪ |
| ೭೦. | ಅದೇ | ಪು. ೧೭ – ಕೀ ೮ |
| ೭೧. | ಅದೇ | ಪು. ೨೧ – ಕೀ ೧೧ |
| ೭೨. | ಅದೇ | ಪು. ೨೫ – ಕೀ ೧೪ |
| ೭೩. | ಅದೇ | ಪು. ೪೩ – ಕೀ ೨೮ |
| ೭೪. | ಅದೇ | ಪು. ೪೮ – ಕೀ ೩೨ |
| ೭೫. | ಅದೇ | ಪು. ೫ – ಕೀ ೩ |
| ೭೬ | ಅದೇ | ಪು. ೭ – ಕೀ ೩ |
| ೭೭ | ಅದೇ | ಪು. ೭ – ಕೀ ೩ |
| ೭೮. | ಅದೇ | ಪು. ೩೧ – ಕೀ ೧೮ |
| ೭೯. | ಅದೇ | ಪು. ೬೦ – ಕೀ ೪೦ |
| ೮೦. | ಅದೇ | ಪು. ೬೧ – ಕೀ ೪೦ |
| ೮೧. | ಅದೇ | ಪು. ೧೪ – ಕೀ ೬ |
| ೮೨. | ಅದೇ | ಪು. ೧೧೫ – ಕೀ ೮೫ |
| ೮೩. | ಅದೇ | ಪು. ೧೧೭ – ಕೀ ೮೬ |
| ೮೪. | ಅದೇ | ಪು. ೧೧೮ – ಕೀ ೮೭ |
| ೮೫. | ಅದೇ | ಪು. ೧೧೮ – ಕೀ ೮೭ |
| ೮೬ | ಅದೇ | ಪು. ೧೧೭ – ಕೀ ೮೬ |
| ೮೭ | ಅದೇ | ಪು. ೧೧೯ – ಕೀ ೮೮ |
| ೮೮. | ಅದೇ | ಪು. ೧೨೧ – ಕೀ ೮೯ |
| ೮೯. | ಅದೇ | ಪು. ೧೨೩ – ಕೀ ೯೦ |
| ೯೦. | ಅದೇ | ಪು. ೧೨೩ – ಕೀ ೪೦ |

| | | |
|---|---|---|
| ೯೧. | ಅದೇ | ಪು. ೧೨೪ – ಕೀ ೯೧ |
| ೯೨. | ಅದೇ | ಪು. ೧೨೫ – ಕೀ ೯೨ |
| ೯೩. | ಅದೇ | ಪು. ೧೨೯ – ಕೀ ೯೫ |
| ೯೪. | ಅದೇ | ಪು. ೧೩೦ – ಕೀ ೯೬ |
| ೯೫. | ಅದೇ | ಪು. ೧೩೧ – ಕೀ ೯೭ |
| ೯೬. | ಅದೇ | ಪು. ೧೨೫ – ಕೀ ೯೨ |
| ೯೭. | ಅದೇ | ಪು. ೧೩೦ – ಕೀ ೯೬ |
| ೯೮. | ಅದೇ | ಪು. ೨೫ – ಕೀ ೧೪ |
| ೯೯. | ಅದೇ | ಪು. ೨೦ – ಕೀ ೧೦ |
| ೧೦೦. | ಅದೇ | ಪು. ೨೭ – ಕೀ ೧೫ |
| ೧೦೧. | ಅದೇ | ಪು. ೩೦ – ಕೀ ೧೭ |
| ೧೦೨. | ಅದೇ | ಪು. ೩೩ – ಕೀ ೧೯ |
| ೧೦೩. | ಅದೇ | ಪು. ೪೦ – ಕೀ ೨೬ |
| ೧೦೪. | ಅದೇ | ಪು. ೪೯ – ಕೀ ೩೩ |
| ೧೦೫. | ಅದೇ | ಪು. ೫೪ – ಕೀ ೩೬ |
| ೧೦೬. | ಅದೇ | ಪು. ೭೦ – ಕೀ ೪೭ |
| ೧೦೭. | ಅದೇ | ಪು. ೭೨ – ಕೀ ೪೯ |
| ೧೦೮. | ಅದೇ | ಪು. ೧೮೧ – ಕೀ ೧೩೬ |
| ೧೦೯. | ಅದೇ | ಪು. ೨೨೩ – ಕೀ ೧೬೮ |
| ೧೧೦. | ಅದೇ | ಪು. ೨೯೫ ದೀರ್ಘ ಕೀರ್ತನೆಗಳು |
| ೧೧೧. | ಅದೇ | ಪು. ೩೦೧ " |
| ೧೧೨. | ಅದೇ | ಪು. ೩೦೮ " |
| ೧೧೩. | ಅದೇ | ಪು. ೩೪೩ " |
| ೧೧೪. | ಅದೇ | ಪು. ೪೦೦ " |
| ೧೧೫. | ಅದೇ | ಪು. ೪೭೬ " |
| ೧೧೬. | ಅದೇ | ಪು. ೧೪೦ " |
| ೧೧೭. | ಅದೇ | ಪು. ೧೪೧ – ಕೀ ೧೦೬ |
| ೧೧೮. | ಅದೇ | ಪು. ೧೪೧ – ಕೀ ೧೦೭ |
| ೧೧೯. | ಅದೇ | ಪು. ೧೪೩ – ಕೀ ೧೦೮ |
| ೧೨೦. | ಅದೇ | ಪು. ೧೪೪ – ಕೀ ೧೦೯ |

| | | |
|---|---|---|
| ೧೨೧. | ಅದೇ | ಪು. ೧೫೧ – ಕೀ ೧೧೨ |
| ೧೨೨. | ಅದೇ | ಪು. ೧೪೯ – ಕೀ ೧೧೦ |
| ೧೨೩. | ಅದೇ | ಪು. ೧೫೧ – ಕೀ ೧೧೧ |
| ೧೨೪. | ಅದೇ | ಪು. ೧೫೩ – ಕೀ ೧೧೩ |
| ೧೨೫. | ಅದೇ | ಪು. ೧೫೩ – ಕೀ ೧೧೩ |
| ೧೨೬ | ಅದೇ | ಪು. ೧೬೩ – ಕೀ ೧೨೩ |
| ೧೨೭ | ಅದೇ | ಪು. ೧೬೬ – ಕೀ ೧೨೪ |
| ೧೨೮. | ಅದೇ | ಪು. ೧೬೭ – ಕೀ ೧೨೫ |
| ೧೨೯. | ಅದೇ | ಪು. ೧೫೪ – ಕೀ ೧೧೪ |
| ೧೩೦. | ಅದೇ | ಪು. ೧೫೪ – ಕೀ ೧೧೫ |
| ೧೩೧. | ಅದೇ | ಪು. ೧೬೩ – ಕೀ ೧೨೨ |
| ೧೩೨. | ಅದೇ | ಪು. ೧೫೯ – ಕೀ ೧೧೮ |
| ೧೩೩. | ಅದೇ | ಪು. ೧೫೫ – ಕೀ ೧೧೬ |
| ೧೩೪. | ಅದೇ | ಪು. ೧೭೪ – ಕೀ ೧೩೦ |
| ೧೩೫. | ಅದೇ | ಪು. ೧೬೯ – ಕೀ ೧೨೬ |
| ೧೩೬ | ಅದೇ | ಪು. ೧೬೯ – ಕೀ ೧೨೬ |
| ೧೩೭ | ಅದೇ | ಪು. ೧೭೦ – ಕೀ ೧೨೭ |
| ೧೩೮. | ಅದೇ | ಪು. ೧೮೫ – ಕೀ ೧೪೦ |
| ೧೩೯. | ಅದೇ | ಪು. ೧೮೮ – ಕೀ ೧೪೨ |
| ೧೪೦. | ಅದೇ | ಪು. ೧೮೮ – ಕೀ ೧೪೩ |
| ೧೪೧. | ಅದೇ | ಪು. ೧೯೧ – ಕೀ ೧೪೪ |
| ೧೪೨. | ಅದೇ | ಪು. ೧೯೧ – ಕೀ ೧೪೫ |
| ೧೪೩. | ಅದೇ | ಪು. ೧೯೧ – ಕೀ ೧೪೬ |
| ೧೪೪. | ಅದೇ | ಪು. ೧೯೩ – ಕೀ ೧೪೭ |
| ೧೪೫. | ಅದೇ | ಪು. ೧೯೫ – ಕೀ ೧೪೯ |
| ೧೪೬ | ಅದೇ | ಪು. ೧೯೪ – ಕೀ ೧೪೯ |
| ೧೪೭ | ಅದೇ | ಪು. ೧೯೫ – ಕೀ ೧೫೦ |
| ೧೪೮. | ಅದೇ | ಪು. ೧೯೭ – ಕೀ ೧೫೧ |
| ೧೪೯. | ಅದೇ | ಪು. ೧೯೮ – ಕೀ ೧೫೨ |

೧೫೦. ಅದೇ ಪು. ೧೯೮ – ಕೀ ೧೫೨

೧೫೧. ಅದೇ ಪು. ೧೯೯ – ಕೀ ೧೫೩

೧೫೨. ಅದೇ ಪು. ೨೦೦ – ಕೀ ೧೫೪

೧೫೩. ಅದೇ ಪು. ೨೦೨ – ಕೀ ೧೫೫

೧೫೪. ಅದೇ ಪು. ೨೦೨ – ಕೀ ೧೫೫

೧೫೫. ಅದೇ ಪು. ೨೦೩ – ಕೀ ೧೫೬

೧೫೬. ಅದೇ ಪು. ೨೦೩ – ಕೀ ೧೫೭

೧೫೭. ಅದೇ ಪು. ೨೦೪ – ಕೀ ೧೫೭

೧೫೮. ಅದೇ ಪು. ೨೦೭ – ಕೀ ೧೬೦

೧೫೯. ಅದೇ ಪು. ೨೦೮ – ಕೀ ೧೬೦

೧೬೦. ಅದೇ ಪು. ೨೦೯ – ಕೀ ೧೬೨

೧೬೧. ಅದೇ ಪು. ೨೦೮ – ಕೀ ೧೬೧

೧೬೨. ಅದೇ ಪು. ೨೧೦ – ಕೀ ೧೬೩

೧೬೩. ಅದೇ ಪು. ೨೧೦ – ಕೀ ೧೬೪

೧೬೪. ಅದೇ ಪು. ೨೧೩ – ಕೀ ೧೬೫

೧೬೫. ಅದೇ ಪು. ೨೧೩ – ಕೀ ೧೬೫

೧೬೬ ಅದೇ ಪು. ೨೧೪ – ಕೀ ೧೬೫

೧೬೭. ಅದೇ ಪು. ೨೨೧ – ಕೀ ೧೬೮

೧೬೮. ಅದೇ ಪು. ೨೨೩ – ಕೀ ೧೬೮

೧೬೯. ಅದೇ ಪು. ೨೧೫ – ಕೀ ೧೬೬

೧೭೦. ವಚನ ಸಂಪುಟ ೫ – ಶಿವಶರಣೆಯರ ವಚನ ಸಂಪುಟ ಪು. ೫೫ ವ. ೧೭೪

೧೭೧. ಸಮಗ್ರ ದಾಸ ಸಾಹಿತ್ಯ ಸಂಪುಟ – ೧೮, ಭಾಗ–೨ ಪು. ೨೧೭ – ಕೀ ೧೬೬

೧೭೨. ಅದೇ ಪು. ೨೧೮ – ಕೀ ೧೬೬

೧೭೩. ಅದೇ ಪು. ೨೧೮ – ಕೀ ೧೬೭

೧೭೪. ಅದೇ ಪು. ೨೨೩ – ಕೀ ೧೬೯

೧೭೫. ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ – ಕೀರ್ತನಕಾರರು ಪು. ೨೪

ಅಧ್ಯಾಯ ೫

# ಜೀವೂಬಾಯಿಯ ಖಂಡಕಾವ್ಯಗಳು : ವಿಶ್ಲೇಷಣೆ

೫.೧. ಶ್ರೀಹರಿಲೀಲಾ

೫.೨. ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ

೫.೩. ಶ್ರೀಕೃಷ್ಣಲೀಲಾ

೫.೪. ಸಮುದ್ರಮಥನ

೫.೫. ಶ್ರೀಪುರಂದರ ವಿಠ್ಠಲದಾಸರ ಚರಿತ್ರೆ

೫.೬. ಶ್ರೀಹರಿಮಾನಸ ಪೂಜಾ

೫.೭. ಗಾಲವ ಚರಿತ್ರೆ

೫.೮. ಶ್ರೀ ವರ ಮಹಾಲಕ್ಷ್ಮಿಯ ಕತೆ

೫.೯. ಶ್ರೀಪಾಂಡುರಂಗ ಚರಿತ್ರೆ

೫.೧೦. ರಾಧಾ ಮಾಧವ ವಿಲಾಸ

## ಅಧ್ಯಾಯ ೫

# ಜೀವೂಬಾಯಿಯ ಖಂಡ ಕಾವ್ಯಗಳು: ವಿಶ್ಲೇಷಣೆ

ಒಂದು ಕಥಾನಕವನ್ನು ಮತ್ತು ಒಂದು ಘಟನೆಯನ್ನು ವಿಸ್ತಾರವಾಗಿ ಹೇಳಲು ಕೀರ್ತನೆಯ ಗಾತ್ರವನ್ನು ಜೀವುಬಾಯಿಯವರು ದೀರ್ಘಗೊಳಿಸಿದ್ದಾರೆ. ಇವುಗಳು ಖಂಡ ಕಾವ್ಯಗಳನ್ನು ಹೋಲುತ್ತವೆ. ಕನ್ನಡ ಸಾಹಿತ್ಯದಲ್ಲಿ ಕಥಾಪ್ರಧಾನವಾದ ರಚನೆಗಳನ್ನು ಕಥನಕವನ, ಲಾವಣಿ ಮತ್ತು ನೀಳ್ಗವಿತೆಗಳು ಎಂದು ಗುರುತಿಸಲಾಗುತ್ತದೆ. ಇವು ಸುಮಾರು ನಾಲ್ಕಾರು ಗಂಟೆಗಳವರೆಗೆ ಅಥವಾ ಪೂರ್ಣ ರಾತ್ರಿಯ ತುಂಬ ಹಾಡುವಷ್ಟು ದೀರ್ಘವಾಗಿರುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ವಿಶೇಷವಾಗಿ ಹಬ್ಬ, ಜಾತ್ರೆ, ಉತ್ಸವ ಹಾಗೂ ವಿವಿಧ ಆಚರಣೆಗಳ ಸಂದರ್ಭದಲ್ಲಿ ಈ ರೀತಿಯಾದ ದೀರ್ಘ ಕಥಾನಕಗಳನ್ನು ರಾಗವಾಗಿ ವಾದ್ಯ ಮತ್ತು ಮೇಳದೊಂದಿಗೆ ಹೇಳುವರು. ನಡುನಡುವೆ ಈ ಕಥಾನಕದ ವಿವರಣೆಯನ್ನು ನೀಡುವ ವ್ಯವಸ್ಥೆ ಇರುತ್ತದೆ. ಇವುಗಳು ವೀರ, ರೌದ್ರ, ಕರುಣ, ಭಕ್ತಿರಸಗಳಿಂದ ಕೂಡಿಕೊಂಡಿರುತ್ತವೆ. ಇಂಥ ರಚನೆಗಳು ಸಾಮಾನ್ಯ ಕೀರ್ತನೆಗಳ ಗಾತ್ರವನ್ನು ಮೀರುವುದರಿಂದ ಖಂಡ ಕಾವ್ಯಗಳೆಂದು ಗುರುತಿಸಲಾಗಿದೆ.

ಈ ಖಂಡ ಕಾವ್ಯಗಳಲ್ಲಿ ಪೀಠಿಕಾ ಭಾಗ, ಕಾವ್ಯದ ಶರೀರ, ಫಲಶೃತಿ ಮತ್ತು ಮಂಗಳಗಳೆಂಬ ಘಟಕಗಳಿರುತ್ತವೆ. ಕೆಲವು ಕಡೆ ಹಾಡಿಗೆ ಪ್ರೇರಣೆ ನೀಡಿದವರ, ಕಲಿಸಿದವರ, ಗುರುಪರಂಪರೆಯ ಅಂಶಗಳು ಆರಂಭದಲ್ಲಿ ಮೂಡಿಬಂದಿರುತ್ತವೆ. ಈ ರೀತಿಯಾದ ಕಾವ್ಯಗಳನ್ನು ನಿರ್ಲಕ್ಷಿಸುವುದರಿಂದ ಒದಗುವ ಪಾಪ ಮತ್ತು ಕೇಳುವುದರಿಂದ ದೊರೆಯುವ ಪುಣ್ಯವನ್ನು ಪ್ರಸ್ತಾಪಿಸಲಾಗಿರುತ್ತದೆ. ಇಂಥ ರಚನೆಗಳನ್ನು ಕಂಠಸ್ಥ ಮಾಡಿಕೊಂಡು ಹಾಡುವ ಕಲಾವಿದರು ಇಂದಿಗೂ ಕ್ವಚಿತ್ತಾಗಿ ದೊರೆಯುತ್ತಾರೆ. ಪ್ರತಿಯೊಂದು ಊರಿನಲ್ಲಿಯೂ ಈ ರೀತಿಯಾದ ವಿಭಿನ್ನ ವಿಷಯವನ್ನೊಳಗೊಂಡ ದೀರ್ಘ ರಚನೆಗಳಿದ್ದರೂ ಅವುಗಳನ್ನು ಸರಾಗವಾಗಿ ಹೇಳುವ ಕಲೆಗಾರಿಕೆಯನ್ನು ಕೆಲವೇ ಜನ ಹೊಂದಿದ್ದಾರೆ. ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಎಷ್ಟೋ ಜನಪದ ಹಾಡುಗಾರರು ನಿರ್ಲಕ್ಷಕ್ಕೆ ಒಳಗಾಗಿದ್ದಾರೆ.

ಪ್ರಶಾಂತವಾದ ವಾತಾವರಣದಲ್ಲಿ ಅತ್ಯಂತ ಶ್ರದ್ಧೆ ಮತ್ತು ಭಕ್ತಿ ತುಂಬಿದ ಪರಿಸರದಲ್ಲಿ ದೀರ್ಘ ಕಥಾನಕಗಳ ಹಾಡುಗಾರಿಕೆಯು ನಡೆಯುತ್ತದೆ. ಪುರಾಣ, ಪುಣ್ಯಕತೆ, ಹರಿಕತೆಗಳೂ ಸಹ ಇಂಥ ವಾತಾವರಣದಲ್ಲಿ ನಡೆಯುತ್ತವೆ. ಇವುಗಳ ರಚನೆಯ ಹಿಂದೆ ಪಾಪವನ್ನು ಕಳೆದುಕೊಳ್ಳುವ, ಪುಣ್ಯ

ಸಂಪಾದಿಸಿಕೊಳ್ಳುವ, ಆನಂದವನ್ನು ಹೊಂದುವ ಇಲ್ಲವೆ ಮನಸ್ಸಿನ ಕ್ಲೇಶವನ್ನು ಪರಿಹರಿಸಿಕೊಳ್ಳುವ ಮನೋಭಾವ ಸಹಜವಾಗಿಯೇ ಇರುತ್ತದೆ.

ಈ ರೀತಿಯಾದ ರಚನೆಗಳನ್ನು ಹಾಡಲು ಮೇಳಗಳು ಅವಶ್ಯಕ. ಒಬ್ಬೊಬ್ಬರೆ ಹಾಡಲು ಸಾಧ್ಯವಿಲ್ಲ. ಮುಮ್ಮೇಳಕ್ಕೆ ಸಾತ್ ನೀಡಲು ಹಿಮ್ಮೇಳವೂ ಬೇಕಾಗುತ್ತದೆ. ಖಂದಕಾವ್ಯಗಳು ಒಂದು ಕತೆಯನ್ನು ಬಿಡಿ ಬಿಡಿ ರಚನೆಗಳ ಮೂಲಕ ನಿರೂಪಿಸುತ್ತಾ ಸಾಗುತ್ತದೆ. ಹರಿದಾಸರ ಖಂಡ ಕಾವ್ಯಗಳಿರಬಹುದು, ಕಾವ್ಯಗಳಿರಬಹುದು, ದೀರ್ಘ ಕೀರ್ತನೆಗಳಿರಬಹುದು ಅವೆಲ್ಲವುಗಳ ಮುಖ್ಯ ಉದ್ದೇಶ ಹರಿಪಾರಮ್ಯವನ್ನು ಮನದುಂಬಿ ಹಾಡಿ ಹೊಗಳುವುದು. ಇದರ ಮೂಲಕ ಕೇಳುಗರಲ್ಲಿ ಮತ್ತು ಓದುಗರಲ್ಲಿ ಹರಿಭಕ್ತಿಯನ್ನು ದೃಢಗೊಳಿಸುವುದಾಗಿದೆ. ಜೀವೂಬಾಯಿಯವರು ರಚಿಸಿರುವ ಹತ್ತು ಖಂಡಕಾವ್ಯಗಳ ವಿಷಯ ಮತ್ತು ಸ್ವರೂಪವನ್ನು ಇಲ್ಲಿ ವಿವೇಚಿಸಲಾಗಿದೆ.

**೫.೧ ಶ್ರೀ ಹರಿಲೀಲಾ**

ಹೆಸರೇ ಸೂಚಿಸುವಂತೆ ಇದು ಹರಿಯ ಲೀಲೆಯನ್ನು ಕುರಿತು ರಚನೆಗೊಂಡಿರುವ ಕೃತಿ. ಜೀವೂಬಾಯಿಯವರು ಇದನ್ನು ಶ್ರೀ ಪಾರ್ಥಿವ ಸಂವತ್ಸರ ಚೈತ್ರಶುದ್ಧ ಪಾಡ್ಯ ಶುಕ್ರವಾರ ಅಂದರೆ ; ೧೩ನೇ ಎಪ್ರೀಲ್ ೧೯೪೫ ರಂದು ರಚಿಸಿರುವುದಾಗಿ ನಮೂದಿಸಿದ್ದಾಳೆ. ೨೦ ಪುಟಗಳಷ್ಟು ದೀರ್ಘವಾಗಿದೆ.

ಒಮ್ಮೆ ಅಧಿಕ ಚೈತ್ರ ಮಾಸದಲ್ಲಿ ಶ್ರೀಮದ್ಭಾಗವತ ಸಪ್ತಾಹವನ್ನು ಶ್ರದ್ಧೆ ಭಕ್ತಿಯಿಂದ ಜೀವಮ್ಮ ಕೇಳುತ್ತಿದ್ದಳು. ಆಗ ಮನಸ್ಸಿಲ್ಲಿ ಒಂದು ವಿಚಾರವು ಸುಳಿಯುತ್ತಿತ್ತು. ಇದೇ ರೀತಿ ಎರಡು ಮೂರು ದಿನಗಳ ಕಾಲದವರೆಗೆ ಮುಂದುವರೆಯಿತು. ಸಪ್ತಾಹವು ಮಂಗಲವಾಯಿತು. ಚೈತ್ರ ಶುದ್ಧ ದಶಮಿಯ ಏಕಾದಶಿಯಂದು ಸಂಜೆ ಶ್ರೀಮದ್ಭಾಗವತ ಹರಿಕಥೆ ಕೇಳುವುದಕ್ಕೆ ಹೋದಾಗಲೆಲ್ಲಾ ಜೀವಮ್ಮಳ ಮನಸ್ಸಿನಲ್ಲಿ ಇದೇ ಯೋಚನೆ ಸುಳಿದಾಡುತ್ತಿತ್ತು. ಹರಿಕತೆಯ ದೇವರನ್ನು ನೋಡುತ್ತಾ ಕುಳಿತಿರುವಾಗ ಉದ್ಯೋಗ ಪರ್ವ ಆರಂಭವಾಯಿತು. ಆರಂಭದಲ್ಲಿ "ಈ ಉದ್ಯೋಗ ಪರ್ವ ಕೇಳತಕ್ಕವರು ಅವರವರ ಮನಸ್ಸಿನ ಯಾವ ಯಾವ ಕಾರ್ಯಗಳನ್ನು ಶ್ರೀಹರಿವಾಯುಗಳು ನಿಂತು ನಡೆಸಿಕೊಡುತ್ತಾರೆ. ಸಂದೇಹವಿಲ್ಲ" ಎಂದು ಕೀರ್ತನಕಾರರು ಹೇಳಿದರು. ಈ ಮಾತುಗಳನ್ನು ಕೇಳಿ ಜೀವೂಬಾಯಿಯು ಅತ್ಯಂತ ಹರ್ಷಿತಗೊಂಡು ಪರಮಾನಂದದಲ್ಲಿ ಮುಳುಗಿದಳು. ಅಂದು ಹರಿದಿನವಿರುವುದರಿಂದ ರಾತ್ರಿ ಶ್ರೀಹರಿವಾಯುಗಳ ಪ್ರೇರಣೆಯಿಂದ ಅತ್ಯಂತ ವೈಭವದಿಂದ ಜಾಗರಣೆ ನೆರವೇರಿತು.

ಒಂದು ದಿನ ಮಲಗಿರುವಾಗ ಜೀವೂಬಾಯಿಯು ಕನಸಿನಲ್ಲಿ 'ಬಾಳಗಾರ ಮಠದ ಶ್ರೀಗಳವರ ಎಡಬಲ ಸೇವೆ ಮಾಡುವವರಲ್ಲಿ ಒಬ್ಬರು ದೊಡ್ಡ ಪುಸ್ತಕಗಳನ್ನು ಗಂಟುಕಟ್ಟಿ ತಲೆಯಮೇಲೆ ಇಟ್ಟುಕೊಂಡು ಶೇಷವಸ್ತ್ರವನ್ನು ಹೊದ್ದುಕೊಂಡು ಜೀವಮ್ಮಳ ಮನೆಗೆ ಬಂದರು. ಅವರನ್ನು ಕಂಡೊಡನೆ ಸಂಭ್ರಮದಿಂದ

ದೊಡ್ಡದಾದ ಒಂದು ಚೌಕಾಕಾರದ ಕೋಣೆಯಲ್ಲಿ ಗೋಡೆಯ ಹತ್ತಿರ ಒಂದು ಮಣೆಯನ್ನು ಹಾಕಿ "ಇಲ್ಲಿ ಪುಸ್ತಕಗಳ ಗಂಟನ್ನು ಇಡಬಹುದು" ಎಂದು ಹೇಳಿದರೆ, ಅವರು ನಗುತ್ತಾ "ಹಾಗಾಗುವುದಿಲ್ಲ! ಇದನ್ನು ಅಲ್ಲಿಡಬಾರದು" ಎಂದು ಹೇಳಿ ಪುಸ್ತಕದ ಗಂಟನ್ನು ತಲೆಯ ಮೇಲಿಟ್ಟುಕೊಂಡೇ ಗೋಡೆಯಂಚಿನಿಂದ ದೊಡ್ಡ ಪ್ರದಕ್ಷಿಣೆ ಹಾಕಿ ನಂತರ ಅದರೊಳಗೆ ಪ್ರದಕ್ಷಿಣೆ ಹಾಕಿ, ಹೀಗೆ ಪ್ರದಕ್ಷಿಣಾ ರೂಪದಲ್ಲಿ ಒಳಗೆ ಸುತ್ತಿಕೊಂಡು ಬಂದು, ಕೊನೆಗೆ ಆ ಕೋಣೆಯ ಮಧ್ಯದಲ್ಲಿ ಪುಸ್ತಕದ ಗಂಟನ್ನು ಇಟ್ಟು ನಗುನಗುತ್ತಾ ಕುಳಿತುಕೊಂಡರು. ಈ ಕನಸೇ ಶ್ರೀ ಹರಿಲೀಲಾ ರಚನೆಗೆ ಪ್ರೇರಣೆ ನೀಡಿತು. ಸ್ವಪ್ನದ ನಂತರ ಜೀವಮ್ಮ ಬೆಳಿಗ್ಗೆ ಐದು ಗಂಟೆಗೆ ಎಚ್ಚರಾಗಿ "ಶ್ರೀಹರಿವಾಯುಗಳ ಪ್ರೇರಣೆಯಿಂದ ಬರೆದ ಈ ಕೃತಿಯನ್ನು, ನನ್ನ ಮನಸ್ಸಿನಲ್ಲಿ ನಿಂತ ವಿಷಯವನ್ನು ಶ್ರೀಗುರುಗಳಿಗೆ ಸಮರ್ಪಿಸುತ್ತೇನೆ" ಎಂದು 'ಶ್ರೀಹರಿಲೀಲಾ' ಖಂಡಕಾವ್ಯದ ಆರಂಭದಲ್ಲಿ ಜೀವಮ್ಮ ಹೇಳಿಕೊಂಡಿದ್ದಾಳೆ.

ನಂತರ ಸಿರಿಯ ರಮಣನಿಗೆ, ಗುರುಹಿರಿಯರಿಗೆ, ಗಣಪತಿಗೆ, ಪಾರ್ವತಿಗೆ, ಶಿವನಿಗೆ, ಭಾರತಿಗೆ, ಸರಸ್ವತಿಗೆ, ಬ್ರಹ್ಮನಿಗೆ ಮಹಾಲಕ್ಷ್ಮಿಗೆ ಮುಂತಾದ ದೇವಗಣಕ್ಕೆ ವಂದನೆ ಸಲ್ಲಿಸಿದ್ದಾಳೆ.

"ಅರಿಯೆ ಯತಿಗಣಪ್ರಾಸ ನೇಮಗಳನೆಂದೆಂದು; ಹಿರಿಯರಾದವರು ದೋಷಗಳ ದೂರವ ಮಾಡಿ ಪರಮ-ಪಾಮರರ ಪಾಪಗಳ ಪರಿಹರಿಸುವುದು"[೧] ಎಂದು ಓದುಗರಲ್ಲಿ ವಿನಮ್ರತೆಯಿಂದ ಪ್ರಾರ್ಥಿಸಿಕೊಂಡಿದ್ದಾಳೆ. ಪ್ರತಿಯೊಬ್ಬ ಕವಿ ಅಥವಾ ಲಿಪಿಕಾರ ಕೃತಿಯ ಆರಂಭದಲ್ಲಿ 'ತನ್ನ ತಪ್ಪುಗಳನ್ನು ತಿದ್ದಿ ವಿದ್ವಜ್ಜನರು ಈ ಕೃತಿಯನ್ನು ಪ್ರೀತಿಯಿಂದ ಒಪ್ಪಿಕೊಳ್ಳಬೇಕು' ಎಂದು ನಮ್ರತಾ ಭಾವದಿಂದ ಕೇಳಿಕೊಳ್ಳುವರು. ಹಾಗೆಯೇ ಜೀವಮ್ಮಳು ಕೇಳಿಕೊಳ್ಳುವ ಈ ಮಾತುಗಳಲ್ಲಿ 'ನನಗೆ ಛಂದೋನಿಯಮಗಳ ಬಗೆಗೆ ಸರಿಯಾದ ತಿಳುವಳಿಕೆಯಿಲ್ಲ' ಎಂದು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾಳೆ. ಜ್ಞಾನಿಗಳು ನನ್ನ ತಪ್ಪುಗಳನ್ನು ತಿದ್ದಿ ಸಹಕರಿಸಬೇಕೆಂದು ಪ್ರಾರ್ಥಸಿದ್ದಾಳೆ.

ಸಜ್ಜನರ ಕರುಣೆಯಿಂದ ನಾರದ ಮಹರ್ಷಿಗಳು ಲಕ್ಷ್ಮೀರಮಣನ ಜೊತೆಗೆ ಸರಸವನಾಡಿದ ಕತೆಯನ್ನು ಹೇಳುವೆನೆಂದು ಕಥಾವಸ್ತುವಿನ ಹೂರಣವನ್ನು ಸೂತ್ರ ರೂಪದಲ್ಲಿ ಸೂಚಿಸಿರುವಳು.

ಶ್ರೀ ಕೃಷ್ಣನ ದ್ವಾರಕಾ ಪಟ್ಟಣವು ಅತ್ಯಂತ ವೈಭವದಿಂದ ತುಂಬಿತುಳುಕುತ್ತಿರುವ ನಗರ. ಇಂಥ ನಗರವನ್ನು ಜೀವೂಬಾಯಿಯು ನಾರದರ ಮೂಲಕ ಅತ್ಯಂತ ಮನಮೋಹಕವಾಗಿ ವರ್ಣಿಸಿದ್ದಾಳೆ.

ಮುತ್ತು ಮಾಣಿಕ್ಯದಿಂದ ನಿರ್ಮಿಸಿದ ಗೋಪುರ, ರತ್ನಗಳಿಂದ ಕೂಡಿದ ಕಳಸದ ಕನ್ನಡಿ, ಬಗೆಬಗೆಯ ಚಿತ್ರಗಳ ಕೆತ್ತನೆಗಳಿಂದ ದ್ವಾರಕೆ ಹೊಳೆಯುತ್ತಿದೆ. ಬಾಗಿಲುಗಳಲ್ಲಿ ನಾಲ್ಕು ಆನೆಗಳು, ಮೆಲ್ಲನೆ ನುಡಿವ ಗಿಳಿಗಳು ಇವೆಲ್ಲವೂ ಶ್ರೀಕೃಷ್ಣನ ಧ್ಯಾನವನ್ನು ಅತಿ ಪ್ರೀತಿ ಭಕ್ತಿಯಿಂದ ಮಾಡುತ್ತಲಿವೆ. ಕೃಷ್ಣನ ಹದಿನಾರು ಸಾವಿರ ಸತಿಯರಿಗೆ ವಿವಿಧ ಸುಂದರ ಮನೆಗಳು, ನೀಲಿ ಮಾಣಿಕ್ಯದಿಂದ ನಿರ್ಮಾಣಗೊಂಡ ಗೃಹಗಳು, ಕೋಟಿ ಸೂರ್ಯರ ದಿವ್ಯವಾದ ಪ್ರಭೆಯನ್ನು ಹೊಂದಿರುವ ಎಂಟು ಜನ ಪಟ್ಟದ ರಾಣಿಯರ ಮನೆಗಳು

ನೋಡಿದಾಕ್ಷಣ ಆಶ್ಚರ್ಯವನ್ನುಂಟು ಮಾಡುವಷ್ಟು ಕಂಗೊಳಿಸುತ್ತಿದ್ದವು. ಅರಮನೆಯ ಶೃಂಗಾರ ಅತ್ಯಾಕರ್ಷಕವಾಗಿತ್ತು. ಈ ಶೃಂಗಾರ ಮೂರು ಲೋಕಕ್ಕೂ ತಿಳಿಯದ ಮಿಗಿಲಾದ ವೈಭವ ಎಂದು ಜೀವಮ್ಮ ತಿಳಿಸಿದ್ದಾಳೆ.

ಎಲ್ಲ ಮಂದಿರಗಳ ನಡುವೆ ಕೃಷ್ಣನ ಅರಮನೆಯು ಕಳಸವಿಟ್ಟಂತೆ ಶೋಭಿಸುತ್ತಿದೆ. ಇಂದ್ರನ ಅಮರಾವತಿಯನ್ನು ಅಣುಕಿಸುವಂತೆ ಇರುವ ಈ ಅರಮನೆಯ ವೈಭವವನ್ನು ಸತ್ಯಧರ್ಮರು ನೋಡಿ ಅತಿ ಹರುಷದಿಂದ ಹೊಗಳುತ್ತಿರುವರು. ಹೀಗೆ ಜೀವೂಬಾಯಿಯು ದ್ವಾರಕೆಯನ್ನು, ಶ್ರೀಕೃಷ್ಣನ ಸತಿಯರ ಮನೆಗಳನ್ನು, ಅರಮನೆಗಳನ್ನು ಕಣ್ಣುಕಟ್ಟುವಂತೆ ವರ್ಣಿಸುವ ಮೂಲಕ ತನ್ನ ವರ್ಣನಾ ಕೌಶಲ್ಯವನ್ನು ಮೆರೆದಿದ್ದಾಳೆ.

ಕೃಷ್ಣನ ಎಡಬಲದಲ್ಲಿ ಯಾದವರು ಚಾಮರ ಬೀಸುತ್ತಿದ್ದಾರೆ. ಗಾಯನ ನರ್ತನಗಳಿಂದ ಇಡೀ ಕೃಷ್ಣನ ಸಭಾಗೃಹ ಸಂತೋಷದಲ್ಲಿ ತೇಲಾಡುತ್ತಿದೆ ಎಂದು ಶುಕಮುನಿಗಳು ಹೇಳಿದ ಮಾತುಗಳನ್ನು ಭೂಪಾಲನು ಕೇಳಿ 'ಶ್ರೀಕೃಷ್ಣನ ಮಹಿಮೆಯನ್ನು ಹೇಳಬೇಕೆಂದು' ವಿನಂತಿಸಿಕೊಂಡನು. ಆ ಮಾತಿಗೆ ಶುಕಮುನಿಗಳು ಕೃಷ್ಣನನ್ನು ಕೊಂಡಾಡುತ್ತ 'ಭೂ ಒಡೆಯನೇ ನವವಿಧ ಭಕ್ತರಿಗೆ ಒಲಿದ ಶ್ರೀಕೃಷ್ಣನ ಮಹಿಮೆಯನ್ನು ಹೇಳುವೆನು' ಕೇಳೆಂದು ಹೇಳಲಾರಂಭಿಸಿದನು.

ಒಮ್ಮೆ ನಾರದರು ಮನಸ್ಸಿನಲ್ಲಿ ಹರಿನಾಮ ಸ್ಮರಣೆಯನ್ನು ಮಾಡುತ್ತಾ ಭೂಲೋಕದ ಜನರಿಗೆ ತತ್ವವಿಚಾರವನ್ನು ತಿಳಿಸುತ್ತಾ ಕೃಷ್ಣನಿರುವ ದ್ವಾರಕೆಗೆ ಬಂದರು. ದಾರಿಯಲ್ಲಿ ನಾರದರು ಅತಿ ವೇಗವಾಗಿ ಬರುಬರುತ್ತಾ ಕೃಷ್ಣನ ಮಹಿಮೆಯನ್ನು ಹಾಡುತ್ತಾ ಕುಣಿಯುತ್ತಿರುವನು. ಈ ಸಂದರ್ಭದಲ್ಲಿ ಜೀವಮ್ಮ ನಾರದರ ಮೂಲಕ ಕೃಷ್ಣನ ಶೃಂಗಾರ, ಮಹಿಮೆ, ಆತನ ಮಹಾಕಾರ್ಯಗಳನ್ನು ಹೊಗಳಿಸಿ ಕೃತಾರ್ಥಳಾಗಿದ್ದಾಳೆ.

ಮೌನವಾಗಿ ಕುಳಿತಿದ್ದ ಶ್ರೀಕೃಷ್ಣನ ಪಾದಕ್ಕೆ ನಾರದರು ನಮಸ್ಕರಿಸಲು ಪ್ರತಿಯಾಗಿ ಹರಿಯು ನಾರದರನ್ನು ಬಗೆಬಗೆಯಲಿ ಉಪಚರಿಸಿದನು. 'ನಿಮ್ಮ ಆಗಮನಕ್ಕೆ ಕಾರಣವೇನು? ಕಾರಣವಿಲ್ಲದೆ ನಾರದರು ಯಾರ ಜೊತೆಗೆ ಮಾತನಾಡರು, ಯಾರ ಮನೆಗೆ ಹೋಗರು' ಎಂಬುದನ್ನು ನಾರಾಯಣ ಕೇಳಲು ನಾರದರು 'ನೀನು ಅನಾಥ ಬಂಧು, ಶಿಷ್ಟರ ರಕ್ಷಕ, ದುಷ್ಟ ಶಿಕ್ಷಕ' ಎಂದು ಹೇಳಿ ಅಲ್ಲಿಂದ ಬೀಳ್ಕೊಂಡು ನಾರದರು ಮುನ್ನಡೆದರು.

ಕೃಷ್ಣನು ರುಕ್ಮಿಣಿ, ಸತ್ಯಭಾಮೆಯರ ಜೊತೆಗೂಡಿ ಅತಿಯಾದ ಲೀಲೆಗಳನ್ನು ತೋರುತ್ತಾ ಹರುಷದಿಂದಿರಲು 'ರುಕ್ಮಿಣಿ ಸತ್ಯಭಾಮೆಯರು ಪುಣ್ಯವತಿಯರು, ಆದರೆ ಇನ್ನುಳಿದ ಸತಿಯರ ಗತಿಯೇನು?' ಎಂದು ನಾರದರು ಚಿಂತಿಸಿ ಮುನ್ನಡೆದರು. ಕೃಷ್ಣನ ಎಂಟು ಸತಿಯರಲ್ಲಿ ದಿಟ್ಟಳಾದ ಜಾಂಬುವತಿಯ ಮನೆಗೆ ಬಂದನು ಅಲ್ಲಿ 'ಕೃಷ್ಣನು ರತ್ನಗದ್ದುಗೆಯ ಮೇಲೆ ಜಾಂಬುವತಿ ಸಮೇತ ಆನಂದದಿಂದಿರುವುದನ್ನು ನೋಡಿ,

ಇದು ಭ್ರಮೆಯೋ, ಎಂದು ನಾರದನು ಮೂಢನಾಗಿ ಅಲ್ಲಿಂದ ಉಪಚರಿಸಿಕೊಂಡು ಮಿತ್ರವಿಂದೆಯ ಮನೆಗೆ ಬಂದನು, ಕೃಷ್ಣನು ಮಿತ್ರವಿಂದೆಯ ಜೊತೆಗೆ ಮುತ್ತು ಕೆತ್ತಿದೆ ಪಚ್ಚೆ ಮಂಚದ ಮೇಲೆ ಕುಳಿತಿರಲು ಸುತ್ತ ನಾರಿಯರೆಲ್ಲ ಚಾಮರ ಬೀಸುತ್ತಾ ನೃತ್ಯ ಗಾಯನ ಮಾಡುತ್ತಿರುವುದನ್ನು ಕಣ್ಣು ಮುಚ್ಚದೇ ನೋಡಿ ಬೆಕ್ಕಸಬೆರಗಾದರು. ಅಲ್ಲಿಯೂ ನಿಲ್ಲದೇ ನೀಲಾದೇವಿಯ ಮನೆಗೆ ಬರಲು, ಮನೆಯೊಳಗೆ ನೀಲಾದೇವಿಯ ಜೊತೆಗೆ ಶ್ರೀಕೃಷ್ಣನು ಸರಸದಿಂದ ದಾಳಪಗಡೆಯನ್ನು ಆಡುತ್ತಿರುವುದನ್ನು ಕಂಡು, ನಾರದರು 'ಕೃಷ್ಣನಿಲ್ಲದ ಸ್ಥಳ ಮತ್ತೊಂದಿರಬಹುದು' ಎಂದು ಲಕ್ಷ್ಮಣದೇವಿಯ ಮನೆಗೆ ಬಂದ, ಅಲ್ಲಿ ಲಕ್ಷ್ಮಣದೇವಿಯು ಮುತ್ತುರತ್ನದ ಪೀಠದ ಮೇಲೆ ಕೃಷ್ಣನನ್ನು ಕೂಡ್ರಿಸಿ ಬಗೆಬಗೆಯ ಉಡುಗೆ ತೊಡುಗೆಗಳಿಂದ ಅಲಂಕರಿಸಿದ್ದಾಳೆ, 'ಇಷ್ಟೆಲ್ಲಾ ರಾಣಿಯರಲ್ಲಿ ಕೃಷ್ಣನನ್ನು ಸರಿಯಾಗಿ ಪೂಜಿಸುವ ಭಾಗ್ಯ ಲಕ್ಷ್ಮಣದೇವಿಗೆ ಮಾತ್ರ ಸಿಕ್ಕಿದೆ' ಎಂದು ಅಂದುಕೊಂಡು ನಾರದರು, ಬಹುಶಃ ಕಾಳಾದೇವಿಯು ಕೃಷ್ಣನ ಕಾಣದೆ ಸೊರಗಿರಬಹುದೆಂದು ಅವಳ ಮನೆಗೆ ಬರಲು, ಅಲ್ಲಿ ತೂಗುಮಂಚದ ಮೇಲಿರುವ ಕೃಷ್ಣನನ್ನು ಕಾಳಾದೇವಿಯು ತೂಗುತ್ತಿರುವಳು. ಇದನ್ನು ಕಂಡು ಬೆರಗಾದ ನಾರದರು 'ಇನ್ನುಳಿದ ಹದಿನಾರು ಸಾವಿರ ಗೋಪಿಕಾ ಸ್ತ್ರೀಯರನೆಲ್ಲ ನೋಡಿಬರುವೆನು' ಎಂದು ಚಿಂತಿಸಿ ಮುಂದೆ ನಡೆದರು. ಒಬ್ಬರ ಮನೆಯಲ್ಲಿ ಮದುವೆಯ ಕಾರ್ಯ, ಒಂದೆಡೆ ಯಾಗದ ಕಾರ್ಯ, ಮತ್ತೊಂದೆಡೆಯಲ್ಲಿ ಉಪನಯನ, ಇನ್ನೊಂದೆಡೆ ಬೀಗರ ಔತಣ, ಮತ್ತೊಬ್ಬರ ಮನೆಯಲ್ಲಿ ಜನ್ಮ ಮಹೋತ್ಸವ, ಬಂಧುಗಳ ಔತಣ, ನಾಮಕರಣದ ವೈಭವ, ಪುರಾಣ ಶ್ರವಣ, ದೇವರ ಪೂಜೆ, ಅಳಿಯಂದಿರ ಉಪಚಾರ, ಮಂತ್ರಾಲೋಚನ, ಭೋಜನ, ಬಾಲಕರ ಜೊತೆ ಗೋಲಿಗಜ್ಜುಗದಾಟ, ನಾರಿಯರ ಜೊತೆ ಹಾಸ್ಯ, ತೂಗುಮಂಚದ ಮೇಲೆ ಸಖಿಯರ ಜೊತೆ ಸರಸ, ಸ್ನೇಹದಿಂದ ವನವಿಹಾರ, ಹೀಗೆ ನಾರದರು ಹದಿನಾರು ಸಾವಿರ ಗೋಪಿಕಾಸ್ತ್ರೀಯರನೆಲ್ಲಾ ನೋಡಲು ಅಲ್ಲೆಲ್ಲಾ ಕೃಷ್ಣನು ಬಗೆಬಗೆಯಾಗಿ ಕಂಗೊಳಿಸುವ, ತನ್ನ ಆಟಗಳನ್ನು ಆಡುತ್ತಾ ಇರುವುದು ಕಂಡು ಬಂದಿತು. ಇದರಿಂದ ನಾರದರು

"ಅಣುರೇಣು ತೃಣದಲ್ಲಿ ಹರಿಯು
ಇಹನೆಂದು ಶ್ರುತಿಸಾರುತಿರಲು
ಎಣಿಸಬಹುದೇ ಅಣುಮಹದ್ರೂಪನ
ಗುಣಗಳನೆಂದೆನುತ"[೨]

ಶ್ರೀಹರಿಯು ಜಗತ್ತಿನ ಪ್ರತಿಯೊಂದು ಅಣು, ರೇಣು, ತೃಣಗಳಲ್ಲಿ ಇರುವನೆಂದು ಶ್ರುತಿಯ ಸಾರುತ್ತಿದೆ. ಆದ್ದರಿಂದ ಇಂಥ ರೂಪವನ್ನು ಹೊಂದಿದ ಶ್ರೀಹರಿಯ ರೂಪ-ಗುಣಗಳನ್ನು ಎಣಿಸಲು ಸಾಧ್ಯವಿಲ್ಲ ಎಂದು ಅರಿತುಕೊಳ್ಳುವನು. ಇಡೀ ಜಗತ್ತನ್ನೇ ತುಂಬಿರುವ ದೇವನನ್ನು ಈ ಲೋಕದ ಜನರು ಗುರುತಿಸಬಲ್ಲರೇ. ಇಂಥ ಅಪಾರ ಮಹಿಮೆಗಳನ್ನು ಹೊಂದಿದ ಮಹಾಮಹಿಮನ "ಮಹಾಮಹಿಮೆ

ಪೊಗಳಲು ಎನ್ನಳವೆ"[೩] ಎಂದು ತನ್ನ ಶಕ್ತಿಯ ಮಿತಿಯನ್ನು ಅರಿತುಕೊಳ್ಳುವನು. ಇಲ್ಲಿಯವರೆಗಿನ ನನ್ನೆಲ್ಲ ಅಪರಾಧಗಳನ್ನು ಮನ್ನಿಸಿ ಕೃಪೆದೋರಬೇಕೆಂದು ನಾರದರು ಹರಿಯ ಚರಣಕ್ಕೆರಗಿ ಪ್ರಾರ್ಥಿಸಿಕೊಂಡು, ನಾನು ನಿನ್ನ ದಾಸನೆಂದು ತನ್ನನ್ನು ಒಪ್ಪಿಸಿಕೊಳ್ಳುತ್ತಾನೆ. ಮತ್ತೇ ನಾರದರು ಶ್ರೀಹರಿಯನ್ನು ಪರಿಪರಿಯಾಗಿ ಸ್ತುತಿಸಿ ಆತನ ಮುಂದೆ ನಿಲ್ಲಲು

"ಯಾರು ಈ ವಿನೋದದ ಕಥೆಯನ್ನು ಪ್ರತಿದಿನ
ಗಾನವ ಮಾಡುತ ಕೇಳವರೊ
ನೀರಜಾಕ್ಷ ಸಹಿತವರ ಹೃದಯ ಮಂ-
ದಿರದಲಿ ನೆಲಸಿರುವನು ಕೇಳು"[೪]

ಎಂದು ಮುರವೈರಿಯು ನಾರದರಿಗೆ ಹೇಳುವನು.

ಈ ವಿಷಯವನ್ನು ನಾರದರು ದೇವೇಂದ್ರನಿಗೆ ಹೇಳಿದಾಗ ಎಲ್ಲ ದೇವಗಣಂಗಳು ಶ್ರೀಹರಿಯನ್ನು ಕೊಂಡಾಡಿ ಬಗೆ ಬಗೆ ರೀತಿಯಲ್ಲಿ ಸಂಭ್ರಮಿಸಿದರು. ಶ್ರೀಹರಿಗೆ ಮಂಗಲವನ್ನು ಹಾಡಿದರು.

ಹೀಗೆ ಶುಕಮುನಿಗಳು ಮಾಧವನನ್ನು ಕೊಂಡಾಡಿ ಅರಸನಿಗೆ ಹೇಳಿದ ಕಥೆಯನ್ನು ನಿತ್ಯ ಯಾರು ಕೇಳುತ್ತಾರೆಯೋ ಅವರು ತಮ್ಮ ದುರಿತಗಳನ್ನು ಕಳೆದುಕೊಳ್ಳುತ್ತಾರೆ. ಎಂದು ಹೇಳಿ, ಇಂಥ ದಿವ್ಯ ರೂಪನನ್ನು ನಾನು ಸದಾಕಾಲವೂ ನನ್ನ ಹೃದಯ ಕಮಲದಲ್ಲಿ ಇಟ್ಟುಕೊಳ್ಳುವೆ ಎನ್ನುವನು.

ಒಟ್ಟಿನಲ್ಲಿ ಶ್ರೀಹರಿಲೀಲಾ ದೀರ್ಘಕೀರ್ತನೆಯು ಶ್ರೀಹರಿಯು ಎಲ್ಲೆಡೆ ಇದ್ದಾನೆ. ಆತ ಸರ್ವಾಂತರ್ಯಾಮಿ ಎಂಬ ಸಾರ್ವತ್ರಿಕ ಮತ್ತು ಸಾರ್ವಕಾಲಿಕ ಸತ್ಯವನ್ನು ದರ್ಶನ ಮಾಡಿಸುತ್ತದೆ. ವ್ಯಾಸರಾಯರು ಕನಕನಿಂದ ಬಾಳೆಹಣ್ಣಿನ ಮೂಲಕ ಈ ಸತ್ಯವನ್ನು ತಿಳಿಸಿದರೆ; ಜೀವೂಬಾಯಿಯು ನಾರದರ ಮೂಲಕ ಸತ್ಯಸಂಗತಿಯನ್ನು ತೋರಿಸಿದ್ದಾಳೆ. ಸಮಸ್ತ ಜಗತ್ತನ್ನು ಒಂದು ಶಕ್ತಿಯು ಆವರಿಸಿಕೊಂಡಿದೆ ಆ ಶಕ್ತಿಗೆ ನಾಸ್ತಿಕರು 'ನಿಸರ್ಗಶಕ್ತಿ' ಎಂದರೆ, ಆಸ್ತಿಕರು 'ದೇವರು' ಎಂದು ಕರೆಯುವರು. ಜೀವೂಬಾಯಿಯವರು ಪ್ರಸ್ತುತ ಕೃತಿಯಲ್ಲಿ ಇಡೀ ಜಗತ್ತನ್ನು ಒಂದು ಮಹಾಶಕ್ತಿಯು ತುಂಬಿಕೊಂಡಿದೆ ಎಂದು ಹೇಳಿರುವರು. ಈ ಲೋಕದ ಎಲ್ಲ ಆಗು-ಹೋಗುಗಳಿಗೆ ಆ ಶಕ್ತಿಯೇ ಕಾರಣ, ಇಂಥ ಧೀಮಂತ ಶಕ್ತಿಯು ಜಗವನ್ನೇ ವ್ಯಾಪಿಸಿಕೊಂಡಿರುವ ವಾಸ್ತವಿಕ ಸಂಗತಿಯನ್ನು ಅನಾವರಣಗೊಳಿಸುತ್ತದೆ. ಶ್ರೀಹರಿ ಲೀಲೆಯು ಮಂಗಲ ಪದ್ಯದೊಂದಿಗೆ ಕೊನೆಗೊಳ್ಳತ್ತದೆ. ಇದನ್ನು ಓದಿದಾಗ ಪ್ರತಿಯೊಂದು ವಸ್ತುವಿನಲ್ಲಿಯೂ ಶ್ರೀಹರಿಯ ರೂಪವನ್ನು ಕಂಡ ಅನುಭವವುಂಟಾಗುತ್ತದೆ.

**೫.೨ - ಶ್ರೀರಾಮ ಜನನ ಮತ್ತು ಸೀತಾಕಲ್ಯಾಣ**

"ಕೀಲಕನಾಮ ಸಂವತ್ಸರ ಯುಗಾದಿ ಪ್ರಯುಕ್ತ ರಚಿಸಿದ ಗದ್ಯಪದ್ಯ ಮಿಶ್ರಿತ ಕಾವ್ಯ ಇದು"[೫] ಗುರು

ವಾಲ್ಮೀಕರು ಲವ-ಕುಶರಿಗೆ ಹೇಳಿದ ರಾಮಕಥೆಯನ್ನು ನಾನು ಹೇಳುತ್ತಿರುವೆ ಎಂದು ಜೀವೂಬಾಯಿ ತಿಳಿಸಿದ್ದಾಳೆ. ಇದು ೨೮ ಪುಟಗಳ ಖಂಡಕಾವ್ಯ. ಪೂಜ್ಯ ಗುರುಗಳ ಅನುಗ್ರಹ ಶ್ರೀಹರಿವಾಯು ಗುರುಗಳ ಪ್ರೇರಣೆ ಮತ್ತು ಗುರುಹಿರಿಯರ ಆಶೀರ್ವಾದದಿಂದ ಇದನ್ನು ಬರೆದಿದ್ದೇನೆಂದು ಹೇಳಿಕೊಂಡಿದ್ದಾಳೆ. ಆರಂಭದಲ್ಲಿ ಗಣೇಶ ಸ್ತುತಿ ಇದೆ. ಕಥೆಯು ವೈಕುಂಠದಿಂದ ಆರಂಭವಾಗುವದು.

ಒಂದು ದಿನ ಇಂದ್ರ ಮೊದಲ್ಗೊಂಡು ಸಕಲ ದೇವತೆಗಳು, ಸಪ್ತ ಋಷಿಗಳು ಸೇರಿ ವೈಕುಂಠಕ್ಕೆ ಬಂದು ಶ್ರೀ ಹರಿಯ ಮುಂದೆ

"ದೋಷಿಗಳುಪಟಳದಿಂದಲಿ ಸುಜನರು
ಘಾಸಿಗೊಂಡು ಮರುಗುತಲಿಹೆವು
ಶ್ರೀಶನೆ ಕರುಣಿಸುವುದೆನ್ನುತ ನುಡಿದರು
ಶೇಷಶಯನನನು ಪ್ರಾರ್ಥಿಸುತ"[೬]

ತಮ್ಮ ನೋವನ್ನು ತೋಡಿಕೊಳ್ಳುವರು. ದುಷ್ಟರು, ರಾಕ್ಷಸರು ನಮ್ಮನ್ನು ಬೇರೆ ಬೇರೆ ರೀತಿಯಲ್ಲಿ ತೊಂದರೆಪಡಿಸುತ್ತಿಹರು. ಯಾಗ ಯಜ್ಞಗಳಿಗೆ ಅಡ್ಡಿಪಡಿಸುತ್ತಿದ್ದಾರೆ. ಬಲದ ಸೊಕ್ಕಿನಿಂದ ಶಿವಪರ್ವತವನ್ನು ಎತ್ತಿ ಮೆರೆಯುತ್ತಿರುವ ರಾವಣನ ಅಟ್ಟಹಾಸ ಅತಿಯಾಗಿದೆ. ದಶದಿಕ್ಕುಗಳು ರಾವಣನ ಭಯದಿಂದ ತುಂಬಿಕೊಂಡಿವೆ. ಇದರಿಂದ ಸಕಲ ಸಜ್ಜನರು ಆತಂಕಕ್ಕೀಡಾಗಿದ್ದಾರೆ. ನಿನ್ನನ್ನು ಬಿಟ್ಟರೆ ಬೇರೆ ಯಾರಿಂದಲೂ ಈ ಭಯಾನಕ ಸ್ಥಿತಿಯನ್ನು ಪರಿಹರಿಸಲು ಸಾಧ್ಯವಿಲ್ಲವೆಂದು ದೈನ್ಯತೆಯಿಂದ ಭಿನ್ನವಿಸಿಕೊಂಡರು.

"ಪೊಡವಿಪನುದರದಿ ಜನಿಸುತ ನಿಮ್ಮನು
ಕಡು ಹರುಷದಿ ಪೊರೆಯುವೆ"[೭]

ಎಂದು ಶ್ರೀಹರಿಯು ದೇವತೆಗಳಿಗೆ ಮತ್ತು ಋಷಿಗಳಿಗೆ ಮಾತು ಕೊಡುವನು.

ನಂತರ ಕಾವ್ಯವು ಭೂಲೋಕಕ್ಕೆ ಇಳಿಯುತ್ತದೆ. ದಶರಥನು ಈ ಭೂಮಿಯ ಮೇಲೆ ಬಹು ಪ್ರಾಮಾಣಿಕತೆಯಿಂದ ರಾಜ್ಯಭಾರ ಮಾಡುತ್ತಿದ್ದನು. ಪ್ರಜೆಗಳನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು. ಆದರೇ ಮಕ್ಕಳಿಲ್ಲದೇ ಮರುಗುತ್ತಿದ್ದನು. "ತನ್ನ ಸೂರ್ಯ ಕುಲ ಮುಂದುವರೆಯುವುದು ಹೇಗೆ" ಎಂದು ಚಿಂತಿಸಿ ಋಷಿಮುನಿಗಳನ್ನು ಮತ್ತು ಕುಲಪುರೋಹಿತರನ್ನು ಕರೆಯಿಸಿ

"ಯಾತರ ಬದುಕಿದು ಯಾತಕಿ ರಾಜ್ಯವು
ಯಾತಕೀ ದೊರೆತನವು
ಯಾತಕೀ ವೈಭವ ಯಾತಕೀ ಅರಮನೆ
ಯಾತಕೀ ಸಂಪದವು"[೮]

ಎಂದು ಮಕ್ಕಳಿರದ ಬದುಕು ನಿಷ್ಪ್ರಯೋಜಕವೆಂಬಂತೆ ಖಿನ್ನತೆಯಿಂದ ನುಡಿದನು. ಈ ಪರಿಯಾಗಿ ಚಿಂತೆಗೊಳಗಾದ ರಾಜನ ನೋವನ್ನು ಅರಿತು ಕುಲಪುರೋಹಿತರು ಶ್ರೀಹರಿಯ ದಯದಿಂದ 'ಪುತ್ರ ಕಾಮೇಷ್ಠಿಯಾಗವನ್ನು' ಮಾಡೆಂದು ದಶರಥನಿಗೆ ಹೇಳುವರು.

ಕುಲಪುರೋಹಿತರ ಆಜ್ಞೆಯ ಮೇರೆಗೆ ದಶರಥನು ಪುತ್ರ ಕಾಮೇಷ್ಠಿಯಾಗವನ್ನು ಅತೀ ಭಕ್ತಿಯಿಂದ ನೆರವೇರಿಸಿದನು. ಇದರ ಫಲವಾಗಿ ರಾಮ, ಲಕ್ಷ್ಮಣ, ಭರತ ಮತ್ತು ಶತೃಘ್ನರೆಂಬ ನಾಲ್ಕು ಮಕ್ಕಳು ಜನಿಸಿದರು. ಇದರಿಂದ ದಶರಥ ಅಪಾರ ಸಂತೋಷಗೊಂಡು ಋಷಿಮುನಿಗಳಿಗೆ, ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ನೀಡಿ ಗೌರವಿಸಿದನು. ಹತ್ತು ದಿನ ಕಳೆಯಲು ದಶರಥನ ಮಡದಿಯರಾದ ಕೌಸಲ್ಯ, ಕೈಕೇಯಿ, ಸುಮಿತ್ರೆಯರು ನಾಲ್ಕು ಮಕ್ಕಳನ್ನು ಮಾಣಿಕ್ಯದ ತೊಟ್ಟಿಲಲ್ಲಿ ಹಾಕಿ, ಊರಿನ ಎಲ್ಲ ಮುತ್ತೈದೆಯರನ್ನು ಕರೆಸಿ, ಸಂಭ್ರಮದಿಂದ ತೊಟ್ಟಿಲೋತ್ಸವವನ್ನು ಮಾಡಿದರು. ಇಲ್ಲಿ ಜೀವೂಬಾಯಿಯು ಗ್ರಾಮೀಣ ಪರಿಸರದ ಜನಪದೀಯ ನಾಮಕರಣ ಸಂಸ್ಕಾರವನ್ನು ಚಿತ್ರಿಸಿದ್ದಾಳೆ. ಜೋಗುಳ ಪಾಡುವುದರ ಮೂಲಕ ಹೆಸರಿಡುವ ದೇಶಿಯ ಸಂಸ್ಕೃತಿಯನ್ನು ಬೆಂಬಲಿಸಿದ್ದಾಳೆ.

ದಿನಗಳೆದಂತ ನಾಲ್ಕು ಮಕ್ಕಳು –

> "ಚಿಣ್ಣಿಕೋಲು ಚಂಡು ಬುಗುರಿಗಳಿಂದಲಿ
> ಬಣ್ಣ ಬಣ್ಣದಾಟಗಳಾಡೆ
> ಸಣ್ಣ ಬಾಲಕರು ಮಾತಾಪಿತೃಗಳಿಗೆ
> ಚನ್ನವಾಗಿ ಹರುಷವ ಕೊಡುತ"[೯]

ಬೆಳೆಯುತ್ತಿದ್ದರು. ಇಲ್ಲಿ ಜೀವೂಬಾಯಿಯವರು ಗ್ರಾಮೀಣ ಕ್ರೀಡೆಗಳನ್ನು ಉಲ್ಲೇಖಿಸಿರುವುದು ವಿಶೇಷ ಮತ್ತು ಔಚಿತ್ಯಪೂರ್ಣವಾಗಿದೆ. ಈ ಪರಿಯಾಗಿ ವಿಭಿನ್ನ ಆಟಗಳನ್ನಾಡುತ್ತ ಬೆಳೆಯುತ್ತಿರುವ ಬಾಲಕರನ್ನು ನೋಡಲು ವಿಶ್ವಾಮಿತ್ರರು ಬಂದರು. ಮುನಿಯ ಆಗಮನವನ್ನು ಬಾಲಕರು ಬಲು ಆಶ್ಚರ್ಯದಿಂದ ನೋಡಿದರು. ಆಗ ಮುನಿಯು 'ಕಾಡಿನಲ್ಲಿ ಯಾಗ ಮಾಡಲು ರಾಕ್ಷಸರು ಬಿಡುತ್ತಿಲ್ಲ. ತಮ್ಮ ಮನಬಂದಂತೆ ಅಟ್ಟಹಾಸದಿಂದ ಯಾಗವನ್ನು ಕೆಡಿಸುತ್ತಿದ್ದಾರೆ. ಆದ್ದರಿಂದ ನೀನು ಜಾಣರು ಮತ್ತು ಪ್ರವೀಣರಾದ ನಿನ್ನ ಮಕ್ಕಳನ್ನು ಬಿಲ್ಲು ಬಾಣಸಮೇತ ನನ್ನೊಂದಿಗೆ ಕಳುಹಿಸಿಕೊಡಿ–

> "ಘನಮಹಿಮನೆ ಎನ್ನ ವಾಕ್ಯ
> ಇನಕುಲೇಂದ್ರ ನಡೆಸಬೇಕೊ"[೧೦]

ಎಂದು ದೊರೆ ದಶರಥನಲ್ಲಿ ಕೇಳಿಕೊಂಡರು. ಋಷಿಯ ಮಾತನ್ನು ಕೇಳಿದ ದೊರೆ ತನ್ನ ರಾಣಿಯರಿಗೆ ತಿಳಿಸಿದನು. ಆಗ ಕೌಸಲ್ಯ ನನ್ನ ರಾಮನನ್ನು ಕಳುಹಿಸಲಾರೆನೆಂದು ಹೇಳುವಳು. ದಶರಥನು ತನ್ನ

ಹೆಂಡತಿಯರನ್ನು ಪ್ರೀತಿಯಿಂದ ಒಪ್ಪಿಸಿ, ರಾಮ ಲಕ್ಷ್ಮಣರನ್ನು ಶೃಂಗರಿಸಿ, ನವರತ್ನದಾರತಿಗಳನ್ನು ಬೆಳಗಿ, ವಿಶ್ವಾಮಿತ್ರರಿಗೆ ನಮಸ್ಕರಿಸಿ, ಮಕ್ಕಳನ್ನು ಕಳುಹಿಸಿಕೊಟ್ಟರು.

ವಿಶ್ವಾಮಿತ್ರನು ಬಾಲರಾಮನನ್ನು ಪರಿಪರಿಯಾಗಿ ಹೊಗಳುತ ಹೆಜ್ಜೆಹೆಜ್ಜೆಗೆ ಜಾಗೃತಿಯಿಂದ ನಡೆದು ಬಂದು ತಮ್ಮ ಆಶ್ರಮವನ್ನು ಸೇರಿದರು. ತಡಮಾಡದೆ ತಾಟಕಿಯನ್ನು ಶ್ರೀರಾಮನು ಕೊಂದನು. ವಿಶ್ವಾಮಿತ್ರ ನಿಶ್ಚಿಂತೆಯಿಂದ ಯಾಗವನ್ನು ಆರಂಭಿಸಿದನು. ಯಾಗ ಕೆಡಿಸಲು ಬರುತ್ತಿರುವ ರಾಕ್ಷಸರನ್ನು ರಾಮ-ಲಕ್ಷ್ಮಣರು ಬೇಗ ಬೇಗ ಕೊಂದು ಹಾಕಲು ವಿಶ್ವಾಮಿತ್ರನು ಸಂತೋಷಪಟ್ಟನು.

ಇದೇ ವೇಳೆಯಲ್ಲಿ ಜನಕರಾಜನು ಸೀತೆಯ ಸ್ವಯಂವರ ಪತ್ರವನ್ನು ಎಲ್ಲಡೆಗೆ ಮುಟ್ಟಿಸಿದನು. ಆ ವಾರ್ತೆ ವಿಶ್ವಾಮಿತ್ರನಿಗೆ ತಲುಪಿತು. ಅವರು ರಾಮ ಲಕ್ಷ್ಮಣರನ್ನು ಕರೆದುಕೊಂಡು ಮಿಥಿಲಾಪುರಕ್ಕೆ ಹೊರಟರು. ದಾರಿಯಲ್ಲಿ ಶಿಲಾತಪಶ್ವಿನಿ ಅಹಲ್ಯಯನ್ನು ಶ್ರೀರಾಮನು ತನ್ನ ಪಾದಸ್ಪರ್ಷದಿಂದ ಉದ್ಧರಿಸಿದನು.

ಜನಕನ ಮಿಥಿಲೆ ಅತ್ಯಂತ ಸುಂದರವಾದ ನಗರ. ಬಗೆ ಬಗೆಯ ಅಲಂಕಾರಗಳಿಂದ ಇಡೀ ನಗರದ ರಾಜ ಬೀದಿಗಳು ಶೃಂಗಾರಗೊಂಡಿದ್ದವು.

"ಹಾದಿ ಹಾದಿಗೂ ತಳಿರು ತೋರಣಗಳು
ಬೀದಿ ಬೀದಿ ಶೃಂಗಾರಗಳು
ಮೋದದಿ ರಚಿಸಿದ ಕಲಶ ಕನ್ನಡಿಗಳು
ಆದರದಿ ಕರೆಯುವ ಭಟರುಗಳು"[೧೧]

ಎಲ್ಲೆಡೆಗೆ ಮಲ್ಲಿಗೆ ಬಳ್ಳಿಗಳು ಚೆಲ್ಲಿರುವ ಪರಿಮಳ ತುಂಬಿಕೊಂಡಿತ್ತು. ಪನ್ನೀರುಗಳ ಸಿಂಚನ, ಸುಂದರಿಯರು ಓಕುಳಿಯ ಆರತಿಯನ್ನು ಬೆಳಗುತ್ತಿರುವರು. ಸುಂದರಿಯರು ಮಲ್ಲಿಗೆಯನ್ನು ಮುಡಿದುಕೊಂಡು ಓಡಾಡುತ್ತಿದ್ದರು. ಈ ಸನ್ನಿವೇಶಗಳು ಮದುವೆಯ ಸಂದರ್ಭದ ಸಂಭ್ರಮವನ್ನು ತೋರ್ಪಡಿಸುತ್ತವೆ. ಇಡೀ ಪಟ್ಟಣವು ವಿವಿಧ ಅಲಂಕಾರಗಳಿಂದ ಆಕರ್ಷಕವಾಗಿ ಕಾಣುತ್ತಿದೆ.

"ದಿನಮಣಿಯಂದದಿ ಪೊಳೆಯುವ
ತನಯರ ನೋಡುತ ನೃಪತಿ ವಿಸ್ಮಯದಿ
ಇನಕುಲತಿಲಕನು ಬಾಲಕರು
ಘನಮಹಿಮರು ಇವರ್ಯಾರೆಂದು ಕೇಳಿದ ರಾಜ"[೧೨]

ಜನಕರಾಜನು ರಾಮಲಕ್ಷ್ಮಣರ ಮಂದಸ್ಮಿತ ನಗು, ಶ್ರೀಹರಿಯ ಸೌಂದರ್ಯವನ್ನು ಹೋಲುವ ಈ ಕುಮಾರರು ಯಾರೆಂದು ಆಶ್ಚರ್ಯದಿಂದ ವಿಶ್ವಾಮಿತ್ರರನ್ನು ಕೇಳಲು, ವಿಶ್ವಾಮಿತ್ರರು –

“ಭೂಪತಿ ಲಾಲಿಸು ದಶರಥ ತನಯರು
ಈ ಪ್ರಥ್ವಿಯಮೇಲುದಿಸಿಹರು
ತಾಪಸರೆಸಗುವ ಯಜ್ಞವ ರಕ್ಷಿಸೆ
ಈ ಪರಿಯಲಿ ಬಂದಿಹರೀಗ”[೧೩]

ಎಂದು ರಾಮ-ಲಕ್ಷ್ಮಣರನ್ನು ಮತ್ತು ಅವರು ಬಂದ ಉದ್ದೇಶವನ್ನು ತಿಳಿಸಿದರು. ಈಗಾಗಲೆ ಸೀತೆಯನ್ನು ವರಿಸಿಕೊಳ್ಳಲು ನಾನಾ ದೇಶಗಳ ರಾಜರು, ನಾಯಕರು, ಯಾಚಕರು, ನಟರು ಎಲ್ಲರೂ ಬಂದು ಸೇರಿದ್ದರು. ಜನಕರಾಜನು ಎಲ್ಲರನ್ನು ಯೋಗ್ಯ ರೀತಿಯಲ್ಲಿ ಉಪಚರಿಸಿದನು. ಇಡೀ ಸಭೆ ಮಂಗಳ ವಾದ್ಯಗಳಿಂದ ತುಂಬಿತು. ಆಗ ಜನಕರಾಜನು “ಧನುವನೆತ್ತಿದವರಿಗೆ ತನಯಳನೀವೆನ್” ಎಂದು ಘೋಷಿಸಿದನು.

ಜನಕರಾಜನ ಈ ನುಡಿಯನ್ನು ಕೇಳಿದ ತಕ್ಷಣ ಎಲ್ಲ ವೀರರು, ಧೀರರೂ, ಜಾನಕಿ ನಮಗೆ ಬೇಕೆಂದು ಮುಂದೆ ಬಂದು ನಿಂತರು. ಒಬ್ಬೊಬ್ಬರಾಗಿ ಎಲ್ಲರೂ ಧನುವನೆತ್ತಲು ಆರಂಭಿಸಿದರು. ಕೆಲವರು ಕಾಲು ಮುರಿದುಕೊಂಡರು. ರಾವಣನೂ ಕೂಡ ಸೀತೆಯನ್ನು ಬಯಸಿ ಅಲ್ಲಿ ಬಂದಿದ್ದನು. ಅತ್ಯಂತ ಶಕ್ತಿಶಾಲಿಯಾದ ರಾವಣನು ಧನುವನೆತ್ತಲು ಹೋಗಿ ಬಲವೆಲ್ಲ ಕಡಿಮೆಯಾಗಿ ತಲೆಕೆಳಗಾಗಿ ಬಿದ್ದನು. ಆಗ ಜನಕನು ಇಲ್ಲಿ ಯಾರೊಬ್ಬರೂ ಧನುರ್ವೀರರಿಲ್ಲೆಂದು ಚಿಂತೆಗೊಳಗಾಗಿ ‘ತನ್ನ ಮಗಳು ಯಾರನ್ನು ಮೆಚ್ಚುತ್ತಾಳೆಯೋ ಅವನಿಗೆ ಸೀತೆಯನ್ನು ಕೊಡುವೆನೆಂದೆನಲು’

“ಇನಕುಲತಿಲಕನಿಗೆ ಸತಿಸೀತೆಯೆಂದು
ಅರಿಯದೆ ದೊರೆ ಚಿಂತಿಸಿ
ಜನಕರಾಜನ ನೋಡಿ ನುಡಿದನು ಈ ಪರಿ
ಧನುರ್ವಿದ್ಯೆ ಬಲ್ಲ ಶ್ರೀರಾಮನು ಇಹನೆಂದು”[೧೪]

ಹೀಗೆ ಮುನಿ ನುಡಿಯಲು ಜನಕನು “ತಡಮಾಡದೆ ಧನುವನೆತ್ತು ನಡೆ” ಎಂದು ಶ್ರೀರಾಮನಿಗೆ ಹೇಳಿದನು. ಜನಕರಾಜನ ಮಾತಿಗೆ ಬೆಲೆಕೊಟ್ಟು ಧನುವನೆತ್ತಲು ನಡೆದ ಶ್ರೀರಾಮನು ಲಕ್ಷ್ಮಣನಿಗೆ

“ತಡೆಯದೆ ಧನುವನೆತ್ತುವೆ ನೀ ಕ್ಷಣದಲಿ
ಬಿಡದೆ ಸೀತೆಯ ಚಲುವಿಕೆ ಪೇಳು”[೧೫]

ಎಂದು ನುಡಿದು ಮುಂದುವರೆದು

“ತೆರೆಯ ಮರೆಯಲಿ ಜಾನಕಿ ಇರುತಿರೆ
ಅರಿತು ಪೇಳ್ವುದು ಚಲ್ವಿಕೆಯ

ಸರಿಬಂದರೆ ಎನ್ನ ಮನಸಿಗೆ ಧನುವನು
ಅರೆ ನಿಮಿಷದಿ ಬಾಗಿಪೆನೆನಲು"[೧೬]

ಎಂಬ ಶ್ರೀರಾಮನ ಮಾತುಗಳಲ್ಲಿ "ಸೀತೆ ಸುಂದರಿಯಲ್ಲದಿದ್ದರೆ ಬಿಲ್ಲು ಬಾಗಿಸುವ ಸಾಹಸ ವ್ಯರ್ಥ ಎಂದು ರಾಮನ ಎಣಿಕೆ"[೧೭] ಎಂಬುದು ತಿಳಿಯುತ್ತದೆ. ಅಂದರೆ ನಾವು ಮಾಡುವ ಪ್ರಯತ್ನಕ್ಕೆ ಒಳ್ಳೆಯ ಫಲ ದೊರೆಯಬೇಕು. ಕೆಟ್ಟ ಫಲಕ್ಕಾಗಿ ಪ್ರಯತ್ನ ಪಡುವುದು ಸರಿಯಾದುದಲ್ಲ ಎಂಬುದನ್ನು ಜೀವಮ್ಮ ಸೊಗಸಾಗಿ ಹೇಳಿದ್ದಾಳೆ.

ಶ್ರೀರಾಮನ ಮಾತುಗಳನ್ನು ಕೇಳಿದ ಲಕ್ಷ್ಮಣನು ತೆರೆಯ ಮರೆಯಲ್ಲಿರುವ ಮಹಾಲಕ್ಷ್ಮಿಯನ್ನು ಮನದಲ್ಲಿ ಸ್ಮರಿಸಿ, ಸೀತೆಯನ್ನು ಕಂಡು ನಖ-ಶಿಖಾಂತವಾಗಿ ಅವಳ ಸೌಂದರ್ಯವನ್ನು ಭಕ್ತಿಯಿಂದ ವರ್ಣಿಸುತ್ತಾನೆ. ಈ ವರ್ಣನೆಯನ್ನು ಕೇಳಿದ ಶ್ರೀರಾಮನು "ಇಷ್ಟು ಯಾರ ವರ್ಣನೆ" ಎಂದು ಕೇಳುತ್ತಾನೆ. ಅದಕ್ಕೆ ಲಕ್ಷ್ಮಣನು-

"ಶ್ರೇಷ್ಠರಾಮನ ಪಟ್ಟದರಸಿ ಎನಲು"[೧೮]

ಶ್ರೀರಾಮನು 'ಗಜವು ಬಾಳೆಯ ಗಿಡವನ್ನು ಮುರಿಯುವ ಹಾಗೆ' ಧನುವನ್ನು ಮೆಟ್ಟಿ ಮುರಿಯುವನು. ಇದನ್ನು ಕಂಡು ಸೇರಿದ್ದ ಎಲ್ಲ ಜನರು ಜನಕರಾಜ ಮೊದಲುಗೊಂಡು ಸಕಲರು ಹರ್ಷಿತರಾಗುತ್ತಾರೆ.

"ಧನುವನೆತ್ತಿ ನಿಲ್ಲಲು ರಘುರಾಮನು
ವನಜಾಕ್ಷಿಯು ಹರುಷ ಪಡುತ
ಇನಕುಲತಿಲಕನ ಕೊರಳಿಗೆ
ಘನಪುಷ್ಪದ ಮಾಲೆಯನ್ನಲಂಕರಿಸಿದಳು"[೧೯]

ಸೀತೆಯ ಸಂತೋಷ ಹೇಳತೀರದು, ಮರುಗ-ಮಲ್ಲಿಗೆ, ಸುರಗಿ-ಸಂಪಿಗೆ ಪರಿಪರಿಯ ಪುಷ್ಪಗಳಿಂದ ಮಾಡಿದ ಮಾಲೆಗಳನ್ನು ಕಟ್ಟಿ ಪ್ರೇಮದಿಂದ ರಾಮನಿಗೆ ಹಾಕಿ ಸಂತುಷ್ಟಳಾದಳು, ಧನ್ಯತೆ ಹೊಂದಿದಳು. ಇದೇ ಸಂದರ್ಭದಲ್ಲಿ ಜನಕರಾಜನ ಇನ್ನುಳಿದ ಮಕ್ಕಳಾದ ಊರ್ಮಿಳೆಯು ಲಕ್ಷ್ಮಣನಿಗೆ, ಭರತನಿಗೆ ಮಾಂಡವಿಯು, ಶತ್ರುಘ್ನರಿಗೆ ಶ್ರುತಕೀರ್ತಿಯರು ವಿವಿಧ ಸುಗಂಧಭರಿತ ಪುಷ್ಪಗಳಿಂದ ನಿರ್ಮಿತ ಮಾಲೆಗಳನ್ನು ಹಾಕಿ ದಾಂಪತ್ಯ ಬದುಕಿಗೆ ಕಾಲಿರಿಸಿದರು. ಈ ಸನ್ನಿವೇಷವನ್ನು ನೋಡಿದ ದಶರಥ, ಕೌಸಲ್ಯ, ಕೈಕೇಯಿ, ಸುಮಿತ್ರೆಯರು ಅಪಾರವಾದ ಸಂತೋಷ ಹೊಂದಿದರು. ಪುತ್ರರನ್ನು ಸೊಸೆಯರ ಸಮೇತ ಕಂಡು ಕಡುಹರ್ಷಿತರಾದರು.

ಜನಕರಾಜ ತನ್ನ ಅಳಿಯಂದಿರರಿಗೆ ವಿವಿಧ ಬಗೆಯಲಿ ಉಪಚಾರಗಳನ್ನು ಮಾಡಿ ವಿಚಿತ್ರ ವರದಕ್ಷಿಣೆಯನ್ನು ಕೊಟ್ಟನು. ಮದುವೆಯ ಸಂಪ್ರದಾಯಗಳಾದ ಕನ್ಯಾದಾನ, ಮಾಂಗಲ್ಯಧಾರಣೆ, ಕಂಕಣಧಾರಣೆ, ಲಾಜಹೋಮ ಮುಂತಾದವುಗಳು ಇಲ್ಲಿ ಬಹು ಸುಂದರವಾಗಿ ಮೂಡಿಬಂದಿವೆ.

ಸೀತೆಗೆ ಆಕೆಯ ಸಖಿಯರು ಬಹು ರೀತಿಯಿಂದ ಪರಿಹಾಸ್ಯಗಳನ್ನು ಮಾಡುತ್ತಿರುವರು. ಪರಸ್ಪರ ಗಂಡ-ಹೆಂಡತಿಯರು ಹೆಸರು ಹೇಳುವಂತೆ ಒತ್ತಾಯಿಸಿಸುವುದು, ಹರಿಯ ದರುಶನಕ್ಕೆ ಬಂದ ಕನ್ನಿಕೆಯರನ್ನು ತಡೆದು ಹೆಸರು ಕೇಳುವುದು. ಈ ಎಲ್ಲ ಸಂದರ್ಭಗಳು ಸಾಂಪ್ರದಾಯಿಕ ಮದುವೆಯ ಸನ್ನಿವೇಷವನ್ನು ಕಣ್ಮುಂದೆ ತಂದು ನಿಲ್ಲಿಸುತ್ತವೆ.

ಈ ರೀತಿಯಾಗಿ ನಾಲ್ಕು ದಿನಗಳ ಕಾಲ ಮದುವೆ ಬಹು ವೈಭವದಿಂದ ಜರುಗಿತು. ಪ್ರತಿಯೊಬ್ಬರಿಗೂ ಜನಕರಾಜನು ಮುಕ್ತಮನಸ್ಸಿನಿಂದ ಉದಾರವಾಗಿ ದಾನದಕ್ಷಿಣೆಗಳನ್ನು ನೀಡಿದನು. ಮುತ್ತು ರತ್ನ, ಕಿರೀಟ ಚಿನ್ನ, ಬಂಗಾರ, ದಾಸ-ದಾಸಿಯರು, ಆನೆ-ಪಲ್ಲಕ್ಕಿ, ಸಾಲುಗಜ, ಮೇನೆ, ತುರಗ ಮುಂತಾದವುಗಳನ್ನು ಮಿತಿಯಿಲ್ಲದೆ ಆನಂದದಿಂದ ದಾನ ಮಾಡಿ ತೃಪ್ತನಾದನು.

ಹೀಗೆ ಶ್ರೀರಾಮಸೀತೆ ಮೊದಲುಗೊಂಡು ದಶರಥನ ಇನ್ನುಳಿದ ಮಕ್ಕಳು ಜನಕನ ಪುತ್ರಿಯರನ್ನು ಮದುವೆ ಮಾಡಿಕೊಂಡು, ಬಂಧು-ಬಳಗ ಸಮೇತರಾಗಿ ಜನಕರಾಜನಿಂದ ಸತ್ಕರಿಸಿ, ಬೀಳ್ಕೊಂಡು ಅಪಾರ ಸಂತೋಷ ಸಂಭ್ರಮದಿಂದ ಅಯೋಧ್ಯಾ ಪಟ್ಟಣವನ್ನು ಸೇರಿದರು.

ಈ ಕಾವ್ಯವು ಮಂಗಳದೊಂದಿಗೆ ಮುಕ್ತಾಯವಾಗುವುದು. ಇದರ ವಿಷಯವಸ್ತು 'ಶ್ರೀರಾಮ ಜನನ ಮತ್ತು ಸೀತಾಕಲ್ಯಾಣ' ಆದರೂ ಹನ್ನೆರಡು ನುಡಿಗಳ ಮಂಗಳಪದ್ಯದಲ್ಲಿ ಇಡೀ ರಾಮಾಯಣವನ್ನು ಜೀವೂಬಾಯಿಯು ಸಂಗ್ರಹವಾಗಿ ಹೇಳಿದ್ದಾಳೆ. ಇದು ಜೀವಮ್ಮಳ ಪ್ರತಿಭಾ ಕೌಶಲ್ಯವನ್ನು ಸಾಕ್ಷೀಕರಿಸುತ್ತದೆ. ಫಲಶ್ರುತಿಯೊಂದಿಗೆ ಕೃತಿ ಮುಗಿಯುತ್ತದೆ.

"ಹರುಷದಿ ಬರೆದೋದುತ ಕೇಳಲು ಶ್ರೀ
ನರಹರಿ ಕರುಣದಿ ಒಲಿಯುವನು
ದುರಿತಗಳೆಲ್ಲವ ದೂರ ಮಾಡುತಲಿ
ಕರುಣದಿ ಕಾಪಾಡುವ ಹರಿಯು"[೨೦]

ಎಂದು ಜೀವುಬಾಯಿಯು ಕೃತಿ ಓದುವುದರಿಂದ ದೊರೆಯುವ ಪ್ರತಿಫಲವನ್ನು ಹೇಳಿದ್ದಾಳೆ.

ಈ ಲೋಕದಲ್ಲಿ ಎಲ್ಲ ಕಾಲಕ್ಕೂ ಎಲ್ಲ ರೀತಿಯ ಜನರು ಇರುವುದು ಇತಿಹಾಸ ಮತ್ತು ಪುರಾಣಗಳಿಂದ ತಿಳಿದುಬರುತ್ತದೆ. ದುಷ್ಟಶಕ್ತಿಗಳು ಸಜ್ಜನರಿಗೆ ತೊಂದರೆಯನ್ನು ನೀಡುತ್ತಾ ಬಂದಿವೆ. ಭೂಮಿಯ ಮೇಲಿನ ಇಂಥ ದುಷ್ಟಶಕ್ತಿಗಳನ್ನು ದಮನ ಮಾಡಲು ಹಲವಾರು ವಿಭೂತಿ ಪುರುಷರು ಈ ಭೂಮಿಯ ಮೇಲೆ ಜನ್ಮತಳೆದು ಬಂದಿದ್ದಾರೆ. ಈ ಕೃತಿಯಲ್ಲಿ ಶ್ರೀರಾಮನು ಕೂಡ ಸುಭಾಹು ಮಾರಿಚರಿಂದ ವಿಶ್ವಾಮಿತ್ರನ ಯಾಗವನ್ನು ರಕ್ಷಿಸಲು ಮುಂದಾಗಿ ಯಶಸ್ವಿಯಾಗುವನು. ಇಂದಿಗೂ ಈ ಭೂಮಿಯ ಮೇಲೆ ಹಲವಾರು ದುಷ್ಟಶಕ್ತಿಗಳು ಅಟ್ಟಹಾಸದಿಂದ ಮೆರೆಯುತ್ತಿವೆ. ಇಂಥ ದುಷ್ಟಶಕ್ತಿಗಳ ದಮನಕ್ಕಾಗಿ ಶ್ರೀರಾಮನಂಥ

ಮಹಾನ್ ವ್ಯಕ್ತಿಗಳ ಆಗಮನದ ಅವಶ್ಯವಿದೆ. ಸೀತೆಯಂಥ ಕನ್ಯೆಯರು ಶ್ರೀರಾಮನಂಥ ಬಲಶಾಲಿ ಗಂಡನನ್ನು ಬಯಸುವುದು, ಇಂದಿನ ಹೆಣ್ಣುಮಕ್ಕಳ ಮನೋಯಿಂಗಿತವನ್ನು ತಿಳಿಸುವುಲ್ಲಿ ಸಹಕರಿಸುತ್ತದೆ. ಶ್ರೀರಾಮನಂಥ ಪ್ರತಿಭಾನ್ವಿತರಿಗೆ ವಿಶ್ವಾಮಿತ್ರರಂಥ ಗುರುಗಳ ಮಾರ್ಗದರ್ಶನ, ಸಹಾಯ, ಸಹಕಾರ ಮತ್ತು ಅವಕಾಶಗಳು ಅನಿವಾರ್ಯವಾಗಿವೆ, ಎಂಬ ಅಂಶಗಳು ಕೃತಿಯಿಂದ ತಿಳಿದು ಬರುತ್ತವೆ.

### ೫.೩ – ಶ್ರೀ ಕೃಷ್ಣ ಲೀಲಾ

ಶ್ರೀ ಕೃಷ್ಣನ ಬಾಲಲೀಲೆಗಳಲ್ಲಿ ಒಂದಾದ ಯಮಳಾರ್ಜುನ ಪ್ರಸಂಗವನ್ನು ಈ ಸಣ್ಣ ಕೃತಿ ವಿವರಿಸುತ್ತದೆ.

ಗಣೇಶ ಸ್ತುತಿಯೊಂದಿಗೆ ಕೃತಿ ಆರಂಭವಾಗುವುದು. ಈ ಕೃತಿಯ ರಚನೆಯ ಹಿಂದಿನ ಉದ್ದೇಶವನ್ನು ಜೀವಮ್ಮ

"ಬೇಡಿದ ವರಗಳ ನೀಡುವ ದೇವನೆ
ನಾಡೊಳು ನಮಗಿಹ ಕೇಡನೆ ಕಳೆಬೇಗ"[೨೧]

ಎಂದರೆ, ನಾಡಿಗೆ ಒದಗಿಬಂದಿರುವ ಕೆಡಕನ್ನು, ಅಪಾಯವನ್ನು ಕಳೆಯುವಂತಾಗಬೇಕೆಂಬ ಉದ್ದೇಶ ಮತ್ತು ನಾಡಕಲ್ಯಾಣದ ಮಹಾಗುಣವನ್ನು ಜೀವೂಬಾಯಿಯು ಇಲ್ಲಿ ವ್ಯಕ್ತಪಡಿಸಿದ್ದಾಳೆ. ಇದು ಕೀರ್ತನಕಾರ್ತಿಯ ಸಮಷ್ಠಿ ಪ್ರಜ್ಞೆಯನ್ನು ತೋರಿಸುವುದು. ಗುರುಹಿರಿಯರಿಗೆ ವಂದಿಸಿ ಮಂಗಳಮೂರ್ತಿಯಾದ ಶ್ರೀ ಕೃಷ್ಣನ ಚರಿತ್ರೆಯನ್ನು ಹೇಳಲು ಪ್ರಾರಂಭಿಸುತ್ತಾಳೆ. ಆರು ಪುಟಗಳ ವ್ಯಾಪ್ತಿಯನ್ನು ಈ ಕೃತಿ ಹೊಂದಿದೆ.

ಶ್ರೀ ಕೃಷ್ಣನು ಗೋಕುಲದಲ್ಲಿ ಬೆಳೆಯುತ್ತಿರುವಾಗ ತನ್ನ ವಿವಿಧ ಬಾಲಲೀಲೆಗಳನ್ನು ತೋರಿಸುತ್ತಿದ್ದನು. ಹೀಗೆ ಬಗೆಬಗೆಯ ಲೀಲೆಗಳನ್ನು ತೋರಿಸುತ್ತಾ ಬೆಳೆಯುತ್ತಿರಲು ಒಂದು ದಿನ ಗೋಪಾಲನು ಕೈಯಲ್ಲಿ ಬೆಣ್ಣೆ ಮುದ್ದೆಯನ್ನು ಹಿಡಿದುಕೊಂಡು ಬರುತ್ತಿರುವಾಗ

"ನೋಡುತ ಗೋಪಿಯು ಬೇಗದಿ
ಓಡುತ ಬಂದಳು ಶ್ರೀಹರಿಯಡೆಗೆ
ಗಾಢನೆ ಪೇಳ್ಕೈ ಕಂದನೆ
ನೀಡಿದವರ್ಯ್ಯಾರು ನಿನಗೀ ನವನೀತ"[೨೨]

ಎಂದು ಗೋಪಿಯು ಕೇಳುವಳು. ಆಗ ಗೋಪಾಲನು ಹೆದರಿ ತನ್ನ ತಾಯಿಯನ್ನು ಕರೆಯುವನು. ಬಾಲಕರ ಜೊತೆಗೂಡಿ ಈ ಬೆಣ್ಣೆಯನ್ನು ತಂದಿರುವೆ. ನನ್ನ ಮೇಲೆ ಸಿಟ್ಟು ಮಾಡಿಕೊಳ್ಳಬೇಡ. ನಾನು ನಿನಗೆ ತಲೆಬಾಗುತ್ತೇನೆಂದು ನುಡಿವನು. ಅದಕ್ಕೆ ಗೋಪಿಯು

"ಕಳ್ಳ ಕೃಷ್ಣನೆ ಬೆಣ್ಣೆಯು ಮೇಲಿರೆ
ಸುಳ್ಳು ಹೇಳಿ ಮರೆ ಮಾಚುವರೆ
ಬಲ್ಲೆನು ನೀನೊಯ್ದಿಹ ಬೆಣ್ಣೆಯಪರಿ
ಇಲ್ಲೆ ತೋರುವೆ ತಾಳೆನಲು"[೨೩]

ಕೃಷ್ಣನು ಹೆದರಿ ನಡುಗಲಾರಂಭಿಸುವನು. ಓಡಿ ಬಂದು ಗೋಪಿಗೆ ನಮಸ್ಕರಿಸಿ ಅಂಗೈಯಲ್ಲಿದ್ದ ಬೆಣ್ಣೆಯನ್ನು ತೋರುತ್ತ "ಎಲ್ಲರ ಜೊತೆ ಸೇರಿ ಬೆಣ್ಣೆ ಕದ್ದ ಪರಿ ಹೇಳುವೆ ಕೇಳಮ್ಮ" ಎಂದು ಏನೆಲ್ಲಾ ಸುಳ್ಳುಗಳನ್ನು ಹೇಳಿದರೂ ಪ್ರಯೋಜನವಾಗದೇ ಇದ್ದಾಗ ಬಾಲ ಕೃಷ್ಣನು

"ನೆಲುವಿನ ಮೇಲಿರುತ್ತಿದ್ದ ಬೆಣ್ಣೆಯು
ನಿಲುಕದಿರಲು ಯೋಚಿಸಿ ಮನದಿ
ತರಳರೆಲ್ಲ ಒಂದಾಗುತ ಒರಳನು
ತವಕದಿಂದ ಏರುತ ನವನೀತವ ಕದ್ದೆವು ತಾಯೆ"[೨೪]

ಎಂದು ಸತ್ಯಾಂಶವನ್ನು ಹೇಳುತ್ತಾನೆ. ಈ ಮಾತುಗಳಲ್ಲಿ ಕೃಷ್ಣನು 'ನವನೀತ ಚೋರ' ಎಂಬ ಅನ್ವರ್ಥಕ ಮತ್ತಷ್ಟು ಗಟ್ಟಿಗೊಳ್ಳುತ್ತದೆ. ಬೆಣ್ಣೆಗೂ ಕೃಷ್ಣನಿಗೂ ಅನ್ಯೋನ್ಯವಾದ ಸಂಬಂಧ. ಸಣ್ಣ ಮಕ್ಕಳು ತನ್ನ ಗೆಳೆಯರನ್ನು ಕರೆದುಕೊಂಡು ಮನೆಯಲ್ಲಿ ತಿಂಡಿ-ತಿನಿಸುಗಳನ್ನು ಕಳುವು ಮಾಡುವ ಗುಣವನ್ನು ಇಲ್ಲಿ ಕೃಷ್ಣನ ಮೂಲಕ ತಿಳಿದುಕೊಳ್ಳುತ್ತೇವೆ. ಸತ್ಯ ಗೊತ್ತಾದ ಗೋಪಿದೇವಿಯು ಬಹುಕೋಪಗೊಂಡು 'ಕೃಷ್ಣ ನಿಲ್ಲು, ನಿನ್ನ ಜೊತೆಯಲಿ ಈ ಜಡವಾದ ಒರಳೂ ಸಹ ಕಳ್ಳತನದಲ್ಲಿ ಭಾಗಿಯಾಗಿದೆ' ಎಂದು ಅಪಾರ ಮಹಿಮೆಯನ್ನು ಹೊಂದಿರುವ ಗೋಪಾಲನನ್ನು ಆ ಒರಳಿಗೆ ಕಟ್ಟಿ ಹಾಕುತ್ತಾಳೆ. ಗೋಪಿಯು ಅತ್ತ ಮನೆಗೆಲಸಕ್ಕೆ ತೆರಳಲು ಇತ್ತ ಬಾಲಗೋಪಾಲನು ನಿಧಾನವಾಗಿ ಆ ಒರಳು ಕಲ್ಲನ್ನು ಎಳೆದುಕೊಂಡು ಬರುತ್ತಿರುವನು. ಹೀಗೆ ಬರುತ್ತಿರುವಾಗ ಅಂಗಳದಲ್ಲಿದ್ದ ಎರಡು ದೊಡ್ಡ ಮರಗಳ ನಡುವೆ ಹಾಯ್ದು ಬರುತ್ತಿರಲು ಆ ಎರಡು ಗಿಡಗಳು ಧೊಪ್ಪನೆ ಕೆಳಗೆ ಬೀಳುತ್ತವೆ. ಇದನ್ನು ಕಂಡ ಜನ ಗಾಬರಿಗೊಳ್ಳುವರು. ಇಷ್ಟು ಸಣ್ಣ ಹುಡುಗ ಇಷ್ಟೊಂದು ದೊಡ್ಡ ಮರಗಳನ್ನು ನೆಲಕ್ಕುರುಳಿಸಿದನಲ್ಲ ಎಂಬ ಆಶ್ಚರ್ಯವೂ ಅವರಲ್ಲಿ ತುಂಬಿತ್ತು. ಅಲ್ಲದೆ ಎಲ್ಲ ಗೋಪ-ಗೋಪಿಯರು ಗೋಪಿದೇವಿಗೆ ವಿಷಯ ತಿಳಿಸುವರು. ದೇವನ ಮಹಿಮೆಯನ್ನು ತಿಳಿಯದೆ ಎಲ್ಲರೂ ಸುಮ್ಮನೇ ನಿಂತರು. ಕೃಷ್ಣನು ಮಾತ್ರ ನಗುತ್ತಿದ್ದನು. ಬಿದ್ದ ಎರಡೂ ಮರಗಳಿಂದ ಗಂಧರ್ವರೀರ್ವರು ಎದ್ದು ಬಂದು ಹರಿಗೆ ವಂದಿಸಿ, ಸ್ತುತಿಸಿ, ಗುಣಗಾನ ಮಾಡಿದರು. ಬಾಗಿದ ಯಮಳಾರ್ಜುನರಿಗೆ ವರಗಳನ್ನು ಕೊಟ್ಟು ಬಾಲಗೋಪಾಲನು ತಂದೆತಾಯಿಯರ ಕಡೆಗೆ ಬಂದನು. ನೀವೆಲ್ಲ

ಯಾಕೆ ಬಂದಿರಿ ಎಂದು ಕೇಳಲು ತಾಯಿಯು ಬಹು ಸಂತೋಷ ಮತ್ತು ಆಶ್ಚರ್ಯದಿಂದ ಮಗನನ್ನು ಎತ್ತಿಕೊಂಡು ಮುದ್ದಿಸಿ ಕೊಂಡಾಡುವಳು.

"ಮುಂಗುರುಳನೆ ತಿದ್ದಿ ಮುಖಬೆವರೊರೆಸುತ
ಕಂದನೆ ನಿನಗ್ಹೊಸ ಅಂಗಿ ತೊಡಿಸುವೆನು
ಅಂದಿಗೆ ಬಾಪುರಿ ಚಂದದಿಂದಿಡುವೆನು
ಕಂದನೆ ನೀ ಎನ್ನ ಮುಂದೆ ಕುಣಿಯುತಲಿ"[೨೫]

ಎಂದು ಗೋಪಿಯು ಮಾತೃವಾತ್ಸಲ್ಯದಿಂದ ಕೃಷ್ಣನನ್ನು ಮುದ್ದಾಡುವಳು. ಇಲ್ಲಿ ಜನಪದ ತ್ರಿಪದಿಗಳ ಶೈಲಿ ನೆನಪಿಗೆ ಬರುವಂತೆ ಜೀವುಬಾಯಿಯ ಬರಹ ಮೂಡಿಬಂದಿದೆ.

"ಆಡಿ ಬಾ ಎನಕಂದ ಅಂಗಾಲ ತೊಳದೇನ
ತೆಂಗಿನ ಕಾಯಿ ತಿಳಿನೀರ । ತಕ್ಕೊಂಡ
ಬಂಗಾರದ ಮೋರೆ ತೊಳದೇನ"

ಇನ್ನೂ ಹಲವಾರು ಮಾತೃವಾತ್ಸಲ್ಯ ಭಾವದ ತ್ರಿಪದಿಗಳ ಛಾಯೆಯು ಜೀವಮ್ಮಳ ಕಾವ್ಯ ಶೈಲಿಯಲ್ಲಿ ಕಂಡಬರುತ್ತದೆ.

ಹರಿದಾಸರ ಎಲ್ಲ ಕೀರ್ತನೆಗಳಲ್ಲಿ 'ಯವಳಾರ್ಜುನ' ಪ್ರಸಂಗವು ಬಹು ಸುಂದರವಾಗಿ ವರ್ಣಿತವಾಗಿದೆ. ಅದನ್ನೇ ಜೀವೂಬಾಯಿಯು ಸಹ ಬಹುಭಕ್ತಿಯಿಂದ ಮಾತೃವಾತ್ಸಲ್ಯದ ಭಾವದಿಂದ ಮನದುಂಬಿ ವರ್ಣಿಸಿರುವಳು. ಬಾಲಕೃಷ್ಣನ ಲೀಲೆಯನ್ನು ವರ್ಣಿಸುವುದೆಂದರೆ ಹರಿದಾಸರಿಗೆ ಅಪಾರ ಸಂತೋಷ ಮತ್ತು ಆತ್ಮೀಯತೆಯ ಸಂಗತಿ. ಮಂಗಳದೊಂದಿಗೆ ಕೃತಿ ಮುಗಿಯುವುದು.

ಮಕ್ಕಳಿದ್ದ ಮನೆ ನಂದಗೋಕುಲ. ಮಕ್ಕಳ ಬಾಲಲೀಲೆಗಳನ್ನು ನೋಡುವುದೆಂದರೆ ಕಣ್ಣಿಗೆ ಹಬ್ಬ. ಪ್ರತಿಯೊಂದು ಮಗುವಿನಲ್ಲಿ ಒಂದು ವಿಶಿಷ್ಟವಾದ ಪ್ರತಿಭೆ ಮತ್ತು ಶಕ್ತಿ ಹುದುಗಿರುತ್ತದೆ. ಬಾಲಕೃಷ್ಣನ ಲೀಲೆ ಕೇವಲ ದ್ವಾಪರಕ್ಕಷ್ಟೇ ಸೀಮಿತವಲ್ಲ, ಇಂದಿನ ಬಾಲಕರಲ್ಲಿಯೂ ಇಂಥ ವಿಶೇಷ ಸಾಧನೆಗಳನ್ನು ಕಾಣುತ್ತೇವೆ. ತಮ್ಮ ವಯಸ್ಸಿಗೆ ಮೀರಿದ ಸಾಧನೆ ಮತ್ತು ಸಾಹಸಗಳನ್ನು ತೋರಿದ ಮಕ್ಕಳು ನಮ್ಮ ಮುಂದಿದ್ದಾರೆ. ಪ್ರತಿ ವರ್ಷ ಇಂಥ ಅಘಾದ ಶೌರ್ಯ ತೋರಿದ ಮಕ್ಕಳಿಗೆ ಸರಕಾರ ಶೌರ್ಯ ಪ್ರಶಸ್ತಿಯನ್ನು ನೀಡಿ ಗೌರವಿಸುವುದು. ಈ ಹಿನ್ನೆಲೆಯಲ್ಲಿ ಶ್ರೀಕೃಷ್ಣ ಲೀಲೆಯು ಇಂದಿಗೂ ಪ್ರಸ್ತುತವೆನಿಸುವುದು.

**೫.೪ – ಸಮುದ್ರ ಮಥನ:–**

ದೇವದಾನವರ ನಡುವೆ ಅಮೃತವನ್ನು ಪಡೆಯಲು ನಡೆದ 'ಸಮುದ್ರ ಮಥನ' ದೇವತೆಗಳು

ಅಮೃತವನ್ನು ಪಡೆದ ಪ್ರಸಿದ್ಧವಾದ ಪೌರಾಣಿಕ ಕಥೆ ಇದರ ವಸ್ತು. ಈ ಕೃತಿಯು ಹತ್ತೊಂಬತ್ತು ಪುಟಗಳಲ್ಲಿ ವಿಸ್ತೃತಗೊಂಡಿದೆ.

ಗಣೇಶ ಸ್ತುತಿಯೊಂದಿಗೆ ಕೃತಿ ಆರಂಭವಾಗುವುದು. ಭಕ್ತಿಯಿಂದ ಗುರುಹಿರಿಯರ ಪಾದಕ್ಕೆ ವಂದಿಸಿ, ಮಹಾಲಕ್ಷ್ಮಿ, ಪುರುಷೋತ್ತಮಗೆರಗಿ ಸ್ಮರಣೆಗೈಯ್ದು ಮುಂದಿನ ಕತೆ ತಿಳಿಸುವೆ ಎಂದು ಹೇಳಿ ಜೀವೂಬಾಯಿಯು–

" . . . . . . . . . . . . . . . . . .
ಮಂದರಗಿರಿಯನು ಬೇಗದಲಿ
ಸಿಂಧುವಿನೊಳಗಿಟ್ಟು ಚಂದದಿ ಮಥಿಸಿದ
ಸುಂದರ ಚರಿತೆಯ ಪೇಳುವೆನು"[೨೬]

ಎಂದು ಕೃತಿಯ ವಿಷಯವನ್ನು ಮೂರು ಸಾಲುಗಳಲ್ಲಿ ಸಂಕ್ಷೇಪಿಸಿ ಹೇಳಿರುವಳು.

ದೇವತೆಗಳೆಲ್ಲರೂ ಸೇರಿ ಸತ್ಯಲೋಕಾಧಿಪತಿಯಲ್ಲಿ ಮೊರೆ ಇಡುವರು. ಆತನ ನಿರ್ದೇಶನದ ಮೇರೆಗೆ ಬ್ರಹ್ಮನಲ್ಲಿ ಬಂದು ಅಲ್ಲಿಂದ ಮುಂದೆ ವಿಷ್ಣುವಿನ ಬಳಿಗೆ ಬರುವರು. ಶ್ರೀಹರಿಯು ನಿದ್ರೆಯಲ್ಲಿರಲು ದೇವತೆಗಳು ಆತನ ಸ್ತುತಿ ಮಾಡುವರು. ಎಷ್ಟೇ ಪರಿಪರಿಯಾಗಿ ಸ್ತುತಿಸಿದರೂ ಹರಿ ಮೌನವಾಗಿಯೇ ಇದ್ದ. ಕೊನೆಗೆ ಶ್ರೀಪತಿಯು

"ಏನಿದು ನೀವೆಲ್ಲರು ಈ ಪರಿಯಲಿ
ದೀನರಾಗಿ ಬಳಲುತಲಿ ಹಿರಿ
ದಾನವರುಪಟಳದಿಂದಲಿ ಬಹುವಿಧ
ನೋವನಾಂತ ಪರಿಯಂತಿಹುದು"[೨೭]

ಎಂದು, ಬಂದಿರುವ ಎಲ್ಲ ದೇವ ಸಮೂಹದವರನ್ನು ಅತಿ ಪ್ರೀತಿಯಿಂದ ಕೇಳುತ್ತಾನೆ. 'ಇದು ದಾನವರಿಗೆ ಶುಭ ಕಾಲವಾಗಿದೆ ನಮಗೆ ಯಾವುದೇ ರೀತಿಯಾದ ಸ್ಥಾನ–ಮಾನ ದೊರೆಯದೆ ದೀನರಾಗಿದ್ದೇವೆ. ನಮ್ಮಲ್ಲಿ ಯಾವುದೇ ಪಂಥವ ಮಾಡದೇ ರಕ್ಷಿಸು' ಎಂದು ದೇವತೆಗಳು ಕೇಳುವರು. ಮತ್ತೆ ಎಲ್ಲರೂ ಸೇರಿ ಶ್ರೀಹರಿಯ ಸ್ತುತಿಸುವರು. ಹರಿಯು ಇವರೆಲ್ಲರ ತಾಪವ ಕಳೆಯಲು

"ಮಂದಿಗಳೆಲ್ಲರು ಇಂದು ಕೇಳಿರಿ
ಚಂದದ ಅಮೃತದ ಬಲದಿಂದ
ಪೊಂದಿದ ಕಷ್ಟವು ಪರಿಹಾರವಾಗಿ
ಸುಖದಿಂದ ಬಾಳುವಿರೆಂದೆನಲು"[೨೮]

ಎಲ್ಲ ದೇವ ಸಮೂಹದವರು, ತಂದೆಯ ಮಾತಿಗೆ ಮಕ್ಕಳು ಒಪ್ಪಿಕೊಂಡು ಸಂತೋಷದಿಂದ ಕುಣಿದಾಡುವಂತೆ ಕುಣಿದು ಸಂಭ್ರಮಿಸಿದರು. ಈ ಅಮೃತವು ಹೇಗೆ ದೊರಕುವುದೆಂದು ಹರಿಯನ್ನು ಕೇಳಲು

"................

..................

ಮಂದರ ಪರ್ವತ ತಂದು ಸಾಗರದಲಿ

ಚಂದದಿ ಮಥಿಸಲು ದೊರಕುವುದು"[೨೯]

ಎಂಬ ಉಪಾಯವನ್ನು ಸೂಚಿಸುವನು. ಅದಕ್ಕೆ ದೇವಗಣವು 'ನಮ್ಮಿಂದ ಮಂದರ ಪರ್ವತ ಎತ್ತಲು ಸಾಧ್ಯವಿಲ್ಲ. ಇದಕ್ಕೆ ನೀವೆ ಮುಂದೆ ದಾರಿಯನ್ನು ತೋರಿಸಬೇಕು' ಎಂದು ಕೇಳಿಕೊಳ್ಳುವರು. ಅದಕ್ಕೆ ಶ್ರೀಪತಿಯು ಮಂದ ಮತಿಗಳಾದ ದಾನವರ ಗೆಳೆತನವನ್ನು ಮಾಡಿದರೆ ಈ ಕಾರ್ಯ ಸರಾಗವಾಗುವುದೆಂದು ಸೂಚಿಸುವನು.

ದೇವ ದಾನವರೆಲ್ಲ ಒಂದಾಗಿ ಅತಿ ಉತ್ಸಾಹ ಮತ್ತು ಸಂತೋಷದಿಂದ ಮಂದಾರ ಪರ್ವತವನ್ನು ಕ್ಷೀರಸಾಗರದಲ್ಲಿಟ್ಟು ನಾಗಸರ್ಪವನ್ನು ಸುತ್ತಿದರು. ದೈತ್ಯರು ಮುಖದ ಭಾಗವನ್ನು, ದೇವತೆಗಳು ಬಾಲದ ಭಾಗವನ್ನು ಹಿಡಿದು ಮಥಿಸಲು ಆರಂಭಿಸಿದರು. ಮಥಿಸಿದ ಹಾಗೆ ಪರ್ವತವು ಸಾಗರದಲ್ಲಿ ಮುಳುಗಲಾರಂಭಿಸಿತು. ದೇವತೆಗಳು ಭಯಭೀತರಾಗಿ ಇಂದಿರೇಶನನ್ನು ಪ್ರಾರ್ಥಿಸಲು, ಕೂರ್ಮನಾಗಿ ಸಾಗರದಲ್ಲಿ ಮುಳುಗಿ ಪರ್ವತವನ್ನು ಬೆನ್ನಲ್ಲಿ ಹೊತ್ತು ಮೇಲೆ ಬರುವಂತೆ ಮಾಡಿದನು.

ಸಮುದ್ರ ಮಥನದ ವೇಳೆಯಲ್ಲಿ ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಐರಾವತಗಳು ಹುಟ್ಟಲು ಅವುಗಳನ್ನು ದೇವಲೋಕಕ್ಕೆ ಕಳುಹಿಸಿದರು. ವಿಷ ಹುಟ್ಟಲು ನೀಲಕಂಠನು ಸ್ವೀಕರಿಸಿದನು. ಚಂದ್ರನನ್ನು ಶಿವ ಜಡೆಯಲ್ಲಿ ಧರಿಸಿಕೊಂಡ. ಒಡನೆ ಅಮೃತ ಹುಟ್ಟಿತು. ಇದನ್ನು ಕಂಡು ಎಲ್ಲರೂ ಕುಣಿದಾಡಿದರು. ಧನ್ವಂತರಿ ರೂಪದಲ್ಲಿ ಹುಟ್ಟಿದ ಶ್ರೀಹರಿಯನ್ನು ಕಂಡು ಧನ್ಯರಾದೆವೆಂದು ಆನಂದದಿಂದ ಎಲ್ಲರೂ ಕುಣಿದಾಡಿದರು.

ದಾನವರೆಲ್ಲರೂ ಲಕ್ಷ್ಮಿಯ ಸೌಂದರ್ಯವನ್ನು ಕಂಡು ಯಾರಿವಳು ಎಂದು ಯೋಚಿಸುವರು. ಆಗ ಶ್ರೀಧರನು ದಾನವರು ಮೋಹಗೊಂಡಿರುವರೆಂದು ತಿಳಿದು ಮೋಹಿನಿ ರೂಪವನ್ನು ಧರಿಸುವನು. ಇಲ್ಲಿ ಜೀವೂಬಾಯಿಯು ಮೋಹಿನಿಯ ರೂಪವನ್ನು ಮತ್ತು ಹರಿಯ ದಶಾವತಾರವನ್ನು ಬಹು ಆಕರ್ಷಕವಾಗಿ ವರ್ಣಿಸಿದ್ದಾಳೆ.

ಮೋಹಿನಿಯ ರೂಪಕ್ಕೆ ಮಾರು ಹೋದ ದಾನವರಿಗೆ ಶ್ರೀಹರಿಯು

"ನಯನಂಗಳ ಮುಚ್ಚುತ ನೀವೆಲ್ಲರು

ವಿನಯದಿಂದ ಕುಳಿತಿರಿ ಎಂದ"[೩೦]

ಇದ ನಂಬಿ ದಾನವರೆಲ್ಲರು ಕಣ್ಣುಮುಚ್ಚಿ ಕುಳಿತರು. ಆಗ ಮೋಹಿನಿ ರೂಪದ ಶ್ರೀಹರಿಯು ಕಾಲಪೈಜನ ಧ್ವನಿಯ ಮಾಡುತ ಬರುತಿರಲು ದಾನವರು ಮೋಹಿನಿ ಬಂದಳು ಎಂದು ಆಕೆಯ ಸೌಂದರ್ಯ ಕಲ್ಪಿಸಿಕೊಳ್ಳಲು ಆರಂಭಿಸಿದರು. ಆಗ ಮೋಹಿನಿಯು ದೈತ್ಯರ ಬಳಿಬಂದು ದೇವತೆಗಳಿಗೆ ಅಮೃತವನ್ನು ಉಣಿಸಿದಳು. ಇದರಿಂದ ಸಿಟ್ಟುಗೊಂಡ ದಾನವರು ದೇವರ ಅನ್ಯಾಯವನ್ನು ಪ್ರತಿಭಟಿಸಲು ದೇವತೆಗಳ ಜೊತೆಗೆ ಯುದ್ಧಕ್ಕೆ ನಿಲ್ಲುವರು. ಅಮೃತವನ್ನು ಕುಡಿದು ಬಲಗಳಿಸಿಕೊಂಡ ದೇವತೆಗಳ ಎದುರಿಗೆ ನಿಲ್ಲದೇ ದಾನವರು ಓಡಿಹೋದರು.

ಇತ್ತ ಲಕ್ಷ್ಮಿಯು ವನಮಾಲಿಕೆಯನ್ನು ಹಿಡಿದುಕೊಂಡು ಮಾಧವನನ್ನು ಹುಡುಕಲಾರಂಭಿಸುವಳು. ಇಂದ್ರ, ಚಂದ್ರ, ಸೂರ್ಯ, ವಾಯು, ಅಗ್ನಿ, ಯಮಧರ್ಮ, ಕುಬೇರ, ಬಲಿ, ಪರಶುರಾಮ, ಕೃಷ್ಣ, ಬೌದ್ಧ, ಕಲ್ಕಿ ಮುಂತಾದ ಎಲ್ಲರನ್ನು ತಿರಸ್ಕರಿಸಿ ನಾಗಶಯನನಿಗೆ ವನಮಾಲಿಕೆಯನ್ನು ಹಾಕುವಳು. ದೇವಗಣಗಳೆಲ್ಲ ಸಂತೋಷಪಟ್ಟರು. ಆಕಾಶದಲ್ಲಿ ದೇವ ದುಂದುಭಿಗಳು ಮೊಳಗಿದವು.

"ಪರಮ ಪುರುಷನ ಅಡಿಗೆ ವಂದಿಸಿ
ವರಮಹಾಲಕ್ಷ್ಮಿಯ ವಿಲಾಸವು
ವರಗುರುಗಳಿಗೆ ಅರ್ಪಿಸಿದ ಮಂಗಳ ಚಾರಿತ್ರವನು
ಹರುಷದಿಂ ಬರೆದೋದಿ ಕೇಳಲು
ತ್ವರದಿ ದುರಿತಗಳೆಲ್ಲ ಕಳೆವದು
ಹರಿಯು ತನ್ನಯ ಮಡದಿಸಹಿತ ವಾಸಿಸುವನವರ ಮನದಲಿ"[೩೧]

ಎಂದು, ಈ ಕೃತಿಯನ್ನು ಬರೆದು ಓದಿದರೆ, ಇಲ್ಲವೆ ಕೇಳಿದರೆ ಏನು ಪ್ರಯೋಜನ ಎಂಬುದನ್ನು ಫಲಶ್ರುತಿ ಯಲ್ಲಿ ಜೀವಮ್ಮ ಹೇಳಿರುವಳು. ಮಂಗಳದೊಂದಿಗೆ ಕೃತಿ ಸಮಾಪ್ತಿಗೊಳ್ಳವದು. ಈ ಕೃತಿಯಲ್ಲಿ ಜೀವಮ್ಮ ಮೋಹಿನಿಯ ರೂಪವನ್ನು ಕಣ್ಣಿಗೆ ಕಟ್ಟುವಂತೆ ಬಹು ಮೋಹಕವಾಗಿ ವರ್ಣಿಸಿದ್ದಾಳೆ.

ಮೋಸವೆನ್ನುವುದು ಕೇವಲ ಕಲಿಯುಗದಲ್ಲಿ ಮಾತ್ರವಿಲ್ಲ, ದೇವದಾನವರ ಕಾಲದಲ್ಲಿಯೂ ಮೋಸದ ಪ್ರಕರಣಗಳು ನಡೆದ ಬಗ್ಗೆ ಪುರಾಣಗಳು ತಿಳಿಸುತ್ತವೆ. ಅಮೃತವನ್ನು ಪಡೆಯಲು ದೇವರು ಮತ್ತು ದಾನವರು ಸೇರಿಕೊಂಡು ಸಮಾನ ಶ್ರಮದಿಂದ ದುಡಿಯುವರು. ಆದರೆ ಅಮೃತವು ದೊರೆಯಲು ಸ್ವಾರ್ಥದಿಂದಾಗಿ ದೇವತೆಗಳು ಮೋಹಿನಿಯನ್ನು ಮುಂದಿಟ್ಟುಕೊಂಡು ದಾನವರಿಗೆ ಅಮೃತವನ್ನು ನೀಡದೆ ಮೋಸಮಾಡುವರು. ಇಂದಿಗೂ ಈ ರೀತಿಯಾದ ಪ್ರಕರಣಗಳು ನಮ್ಮ ಮುಂದೆ ನಡೆಯುತ್ತಿವೆ. ಶ್ರಮಜೀವಿಗಳ ಶ್ರಮದಿಂದಾಗಿ ಬಂಡವಾಳ ಶಾಹಿಗಳು ಲಾಭಗಳಿಸುವುದು, ಬಣ್ಣದ ಮಾತುಗಳಿಂದ ಅಶಿಕ್ಷಿತರನ್ನು ಮೋಸಮಾಡುವ ಜನರು ಒಂದೆಡೆಯಾದರೆ, ಶ್ರೀಮಂತರೊಡ್ಡುವ ಆಶೆ, ಆಮಿಷೆಗಳಿಗೆ ಒಳಗಾಗಿ ಕ್ಷಣಿಕ ಸುಖಕ್ಕಾಗಿ ತಮ್ಮ ಇಡೀ

ಬದುಕನ್ನೇ ಹಾಳುಮಾಡಿಕೊಳ್ಳುವ ಅಮಾಯಾಕ ಜನರು ಮತ್ತೊಂದೆಡೆಗೆ ಇದ್ದಾರೆ. ಈ ಕೃತಿಯು ಸಮಾಜದ ಮೇಲ್ವರ್ಗದ ಜನರು ಕೆಳವರ್ಗದ ಜನರನ್ನು ಹೇಗೆ ತುಳಿಯುತ್ತಾರೆಂಬುದನ್ನು ನಿರೂಪಿಸುತ್ತದೆ.

**೫.೫ – ಶ್ರೀ ಪುರಂದರ ವಿಠ್ಠಲದಾಸರ ಚರಿತ್ರೆ**

ಜೀವೂಬಾಯಿಯವರ ಖಂಡಕಾವ್ಯಗಳಲ್ಲಿ ಇದು ಅತ್ಯಂತ ದೀರ್ಘ ಕೃತಿ. ದಾಸಶ್ರೇಷ್ಠರಲ್ಲಿ ಒಬ್ಬರಾದ ಪುರಂದರದಾಸರ ಚರಿತ್ರೆಯೆ ಈ ಕೃತಿಯ ವಸ್ತು ವಿಷಯ. ಶ್ರೀ ಪಾರ್ಥಿವ ಸಂವತ್ಸರ ಪುಷ್ಯ ಬಹುಳ ಅಮವಾಸ್ಯೆಯಂದು ಅಂದರೆ; ೨೮ನೇ ಜನೇವರಿ ೧೯೪೬ ರಂದು ರಚಿಸಿರುವುದಾಗಿ ಜೀವಮ್ಮ ದಾಖಲಿಸಿದ್ದಾಳೆ.

ಮುದ್ದು ಮೋಹನದಾಸರ ಕಂದರೆಂದು ಕೀರ್ತಿ ಪಡೆದ ಉರಗಾದ್ರಿ ವಿಠಲದಾಸರಿಗೆ ವಂದಿಸಿ ಮತ್ತು ತಂದೆ ವೆಂಕಟೇಶ ವಿಠಲದಾಸರಿಗೆ ವಂದಿಸಿ

“ಕಮಲಾಕ್ಷನ ಸದ್ಭಕ್ತ ಶಿಖಾಮಣಿ
ಪುರಂದರ ದಾಸರ ಚರಿತೆಯನು
ಪವನಾಂತರ್ಗತ ಕಮಲನಾಭ ವಿ
ಠ್ಠಲ ಪ್ರಾರ್ಥಿಸುತಲರುಹುವೆನೆಂದು”[೩೨]

ಜೀವೂಬಾಯಿಯು ಪುರಂದರ ವಿಠ್ಠಲದಾಸರ ಚರಿತ್ರೆಯನ್ನು ಹೇಳಲಾರಂಭಿಸುವಳು. ಗಣಪತಿ, ಇಂದಿರೇಶ, ಉಮೆ, ಭಾರತಿದೇವಿ, ಸರಸ್ವತಿ, ಮಹಾಲಕ್ಷ್ಮಿ, ವಾಯು ಮೂರುತಿಗೆ ವಂದನೆ ಅರ್ಪಿಸುವಳು.

“ವರಕವಿಗಳೆಲ್ಲ ಪೇಳುತಿರುವ ಸುದ್ದಿಯನು
ಅರುಹಿಸಲಿ ಗುರುಗಳೆಂದೆನುತ ಸ್ತೋತ್ರವ ಮಾಡಿ
ಸರ್ವರಿಗೆ ವಂದಿಸುತ ಸಿರಬಾಗಿ ಬೇಡುವೆನು
ವರ ಕಮಲನಾಭ ವಿಠ್ಠಲ ಕರುಣದಿಂ ನುಡಿಸೆ
ಅರುಹುವಂದದಿ ಆಜ್ಞೆ ಮಾಡಿದುದು ವರ್ಣಿಸುವೆನು”[೩೩]

ಎಂದು ಹೇಳಿಕೊಳ್ಳುವ ಮೂಲಕ ಜೀವೂಬಾಯಿಯು “ನಾನು ನೆಪ ಮಾತ್ರ, ಕಮಲನಾಭ ವಿಠ್ಠಲನು ಪ್ರೀತಿಯಿಂದ ನುಡಿಸಲು ಎಲ್ಲರಿಗೂ ತಿಳಿಯುವಂತೆ ಈ ಚರಿತೆಯನು ವರ್ಣಿಸುವೆನು” ಎಂದು ಹೇಳಿಕೊಂಡಿದ್ದಾಳೆ. ಕುಮಾರವ್ಯಾಸನೂ ಸಹ “ವೀರನಾರಾಯಣನೇ ಕವಿ, ಲಿಪಿಕಾರ ಕುಮಾರವ್ಯಾಸ” ಎಂದು ಹೇಳಿಕೊಂಡಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ದ್ವಾರಕೆಯಲ್ಲಿ ಶ್ರೀಹರಿಯು ಶ್ರೀಭೂದೇವಿಯ ಜೊತೆಗೆ ಅತಿ ಹರುಷದಿಂದ ಕುಳಿತುಕೊಂಡಿರುವನು. ಸಕಲ ದೇವತೆಗಳೆಲ್ಲರೂ ಶ್ರೀಹರಿಯ ಪಾದಸೇವೆಯನ್ನು ಮಾಡುವಲ್ಲಿ ನಿರತರಾಗಿದ್ದಾರೆ. ಯಾದವರೆಲ್ಲರೂ ಮೌನದಿಂದ ಕುಳಿತಿರಲು

"ದ್ವಾರಕಾಪುರ ಶೃಂಗಾರ ವರ್ಣಿಸೆ
ಮೂರಾರಿಗೆ ಮಿಗಿಲೆಂದೆನುತಾ ದ್ವಿ
ಸಾವಿರ ಜಿಹ್ವೆಗಳಿಂದಲಿ ಪೊಗಳಲು
ಆದಿಶೇಷನಿಗೂ ಮಿಗಿಲೆನುತ"[೩೪]

ದ್ವಾರಕೆಯ ಸೌಂದರ್ಯವನ್ನು ವರ್ಣಿಸುತ್ತಾ ನಗರದ ದ್ವಾರಗಳು, ಬೀದಿಗಳು, ಬಗೆಬಗೆಯ ಅಲಂಕಾರಗಳಿಂದ ಕಂಗೊಳಿಸುತ್ತಿವೆ. ಹೀಗೆ ವೈಭವದಿಂದ ಶ್ರೀಪತಿಯು ಸಭೆಯಲ್ಲಿ ಮೆರೆಯುತ್ತಿದ್ದಾನೆ. ಈಡೀ ಸಭೆಯು ವಿವಿಧ ಗಾನ ನರ್ತನದಿಂದ ತುಂಬಿರಲು ಶ್ರೀಪತಿಯು 'ಗಾನ ನೃತ್ಯದ ವೀರರು ಯಾರು' ಎಂದು ಕೇಳಲು ಎಲ್ಲರೂ ಮೌನವಾಗಿದ್ದರು. ಮತ್ತೇ ಶ್ರೀಪತಿಯು 'ಇದರಲ್ಲಿ ಯಾರು ಶ್ರೇಷ್ಠರು' ಎನಲು ಹರಿಸ್ಮರಣೆಯೊಂದಿಗೆ ನಾರದರು ಸಭೆಗೆ ಆಗಮಿಸುವರು. ನಾರದರು ಶ್ರೀಹರಿಯ ಸಭೆಯಲ್ಲಿ ಅತಿ ಸಂತೋಷದಿಂದ ಹರಿ ಮಹಿಮೆಯನ್ನು ಕೊಂಡಾಡುತ ಕುಣಿಯಲು ಆರಂಭಿಸುವನು. ನಾರದ ಮಹರ್ಷಿಗಳ ಧ್ಯಾನ ಸ್ಥಿತಿಯನ್ನು ಕಂಡ ಹರಿಯು ಅಪಾರ ಹರ್ಷವನ್ನು ಹೊಂದಿ

"ಭಕ್ತಾಗ್ರೇಸರ ನಿನ್ನಯ ಭಕ್ತಿಗೆ
ಮೆಚ್ಚಿದೆನು ನಿನ್ನಿಚ್ಛೆಗೆ ಬರುವ
ಹೆಚ್ಚಿನ ವರಗಳ ಕೊಡುವೆನು
ನಿಶ್ಚಯವಿದು ನಿರಜಾಸನ ಸುತನೆ ಕೇಳು"[೩೫]

ಎಂದು ನಾರದರನ್ನು ಕೇಳುತ್ತಾನೆ. ಆಗ ನಾರದರು 'ಜಗವೆಲ್ಲ ಸಂಚರಿಸಿ ಬಂದೆನು, ಜನರು ಪರಿಪರಿ ತೊಂದರೆಗಳಲ್ಲಿ ಸಿಲುಕಿ ಬಳಲುತ್ತಿದ್ದಾರೆ. ನಿನ್ನ ಭಕ್ತರಿಗೊದಗಿದ ಕ್ಲೇಷಗಳನ್ನು ಕಳೆಯುವಲ್ಲಿ ನೀನು ಶಕ್ತನಾಗಿರುವೆ. ಬಹು ವಿಧದ ನರಕ ಬಾಧೆಯನ್ನು ತಪ್ಪಿಸಿ ಜನರಲ್ಲಿ ತುಂಬಿರುವ ಭಯವನ್ನು ಪರಿಹರಿಸಬೇಕು.

"ಇಂದಿರಾಪತಿ ಕೃಷ್ಣ ಚಂದದಲಿ ನಲಿದು
ಬಂದ ಕಷ್ಟಗಳೆಲ್ಲ ಪರಿಹರಿಸಿ ಸಲುಹುದು
ನಿಂದು ಕಂಗಳ ಮುಗಿದು ಪ್ರಾರ್ಥಿಸುವೆ ಮಾಧವನೆ
ಬಂಧನವ ಪರಿಹರಿಸು ಮುಂದೆ ಮಮತೆಯನಿಟ್ಟು
ವಂದಿಸುತ ಬೇಡುವೆನು ಚಂದದಿ ಸಲಹೋ ದೇವ"[೩೬]

ಎನ್ನುತ ನಾರದ ಮುನಿಗಳು ಶ್ರೀ ಕೃಷ್ಣನನ್ನು ಭಕ್ತಿಯಿಂದ ಪ್ರಾರ್ಥಿಸಿಕೊಳ್ಳುವರು. ನಾರದರ ಮಾತುಗಳನ್ನು ಕೇಳಿ ಸಂತಸಗೊಂಡ ಶ್ರೀಹರಿಯು

"ಭಕ್ತರನುದ್ಧರಿಸುವ ಕಾರ್ಯ ಎನ
ಗತ್ಯವಸರವಾಗಿರುವ ಕಾರ್ಯ
ತಕ್ಕವರ ನೀಡುವೆ ಯಾಚಿಸು ನಿನ
ಭಕ್ತಿಗೆ ಮೆಚ್ಚಿದೆ ಕೇಳೆನಲು"[೩೭]

ನಾರದರು ಅಪಾರ ಆನಂದದಿಂದ ಕುಣಿದಾಡುತ

"ಹಗಲಿರುಳೆಡೆ ಬಿಡದಲೆ ಎ
ನ್ನೊಡನಾಡುತಲಿರು ಕಮಲನಾಭ ವಿಠ್ಠಲನೆ"[೩೮]

ಎಂದು ಬೇಡಿಕೊಳ್ಳುತ್ತಾರೆ. ಇದಕ್ಕೆ ಪ್ರತಿಯಾಗಿ ಶ್ರೀಕೃಷ್ಣನು

"ವ್ಯಾಪಿಸುವ ಕಲಿಯುಗದಿ ನಿನ್ನಭಿಷ್ಟಗಳ ಸಲಿಸುವೆನು
ಸ್ವೀಕರಿಸು ನಿನ್ನಯ ಮನೋಗತ
ಏಕೆ ಚಿಂತಿಪೆ ತೆರಳು.. . . . ."[೩೯]

ಎಂಬ ಅಭಯವನು ಭಕ್ತ ವತ್ಸಲನಾದ ಶ್ರೀ ಕೃಷ್ಣನು ನಾರದರಿಗೆ ನೀಡಿ ಹರಸಿದನು.

ಇನ್ನು ಮುಂದೆ ಈ ಚರಿತೆಯು ವೈಕುಂಠದಿಂದ ಭೂಲೋಕಕ್ಕೆ ವ್ಯಾಪಿಸಿಕೊಳ್ಳತ್ತದೆ. ಇದಾದ ಮೇಲೆ ಕೆಲವು ದಿನಗಳು ಕಳೆಯಲು ಮಹಾರಾಷ್ಟ್ರದ ಪುರಂದರಗಡದಲ್ಲಿ ಹಿರಿಯರು ಸಾತ್ವಿಕರಾದ ವರದಪ್ಪ ನಾಯಕ ಮತ್ತು ಲಕ್ಷ್ಮಿದೇವಿ ದಂಪತಿಗಳ ಮಗನಾಗಿ ನಾರದರು ಜನಿಸಿದರು. ಅತ್ಯಂತ ಸುಂದರವಾದ ಮುಖ ಕಾಂತಿಯುಳ್ಳ ಮಗುವಿಗೆ ವರದಪ್ಪನವರು 'ವೆಂಕಟಪತಿ' ಎಂಬ ಹೆಸರನಿಟ್ಟರು. ವೆಂಕಟಪತಿಯು ಬಹು ಆನಂದದಿಂದ ಕುಣಿದಾಡುತ್ತ ಬಾಲ್ಯವನ್ನು ಕಳೆದು ಹದಿನೆಂಟು ವರ್ಷಕ್ಕೆ ಕಾಲಿಟ್ಟನು. ಸಮಾಜದ ನಿಯಮದಂತೆ ಅತ್ಯಂತ ಸಾತ್ವಿಕಳಾದ ಸಾಧ್ವಿಮಣಿಯಾದ ಸರಸ್ವತಿಯೊಂದಿಗೆ ವೆಂಕಟಪತಿಯ ವಿವಾಹವನ್ನು ವರದಪ್ಪನಾಯಕರು ಅತಿ ಸಂಭ್ರಮದಿಂದ ನೆರವೇರಿಸಿದರು.

ತಂದೆ ವರದಪ್ಪನು ಮಗನಿಗೆ ವಿವಿಧ ರೀತಿಯ ವಿದ್ಯಾಭ್ಯಾಸವನ್ನು ಒದಗಿಸಿ ಮನೆಯಲ್ಲಿ ತುಂಬಿರುವ ವಜ್ರ, ಬಂಗಾರ, ಕನಕಾಭರಣಗಳನ್ನು ತಯಾರಿಸುತ್ತ ವ್ಯಾಪಾರಕ್ಕೆ ತೊಡಗುವಂತೆ ಆಜ್ಞಾಪಿಸಿದನು. ತಂದೆಯ ಆಜ್ಞೆಯ ಮೇರೆಗೆ ವೆಂಕಟಪತಿಯು ಅತ್ಯಂತ ಶ್ರದ್ಧೆ ಮತ್ತು ನಿಷ್ಠೆಯಿಂದ ವ್ಯಾಪಾರ ವೃತ್ತಿ ಕೈಗೊಂಡನು. ಬೇರೆ ಬೇರೆ ರಾಜರೊಂದಿಗೆ ಸ್ನೇಹವನ್ನು ಬೆಳೆಸಿ ಧನ ಸಂಪಾದಿಸತೊಡಗಿದನು. ದಿನದಿಂದ ದಿನಕ್ಕೆ ವೆಂಕಟಪತಿಯ

ಸಂಪತ್ತು ವೃದ್ಧಿಯಾಗುತ್ತಾ ಸಾಗಿತು. ಇದರಿಂದ ವೆಂಕಟಪತಿಗೆ "ಈ ಭೂಮಿಯ ಮೇಲೆ ನನಗಾರು ಸಾಟಿಯಿಲ್ಲ" ಎಂಬ ಭಾವ ಬಲಿಯತೊಡಗಿತು. ಮನದ ಲೋಭ ಇಮ್ಮಡಿಯಾಯಿತು. ಮನೆಗೆ ಯಾರೇ ಭಿಕ್ಷುಕರು ಏನಾದರು ಕೇಳಲು ಬಂದರೆ ಅವರನ್ನು ಹೊಡೆಯುವೆನೆಂದು ಹೆದರಿಸಲು ಆರಂಭಿಸಿದನು. ಬಡವರನ್ನು ನೋಡಿ ಕನಿಕರವನ್ನು ಪಡದೆ ಮೆರೆಯುತ್ತಿದ್ದನು. ಇಷ್ಟೇ ಅಲ್ಲದೆ ಮನೆಯಲ್ಲಿ ಅಡಿಗೆ ಮಾಡಲು ತನ್ನ ಹೆಂಡತಿಗೆ "ಆ ಸಮಯಕಾದಷ್ಟು ದವಸವಳೆದು"[೪೦] ಕೊಡುತ್ತಿದ್ದನು.

ಹೀಗೆ ವೆಂಕಟಪತಿಯು ಅತಿಯಾದ ಲೋಭದಲ್ಲಿ ಮುಳುಗಿ ದಾನ, ಧರ್ಮ, ದಯೆ, ಅನುಕಂಪ, ಸೌಹಾರ್ದತೆ, ಸಹಕಾರವೆಂಬ ಮಾನವೀಯ ಗುಣಗಳನ್ನು ಮರೆತು ಮೆರೆಯುತ್ತಿದ್ದನು. 'ಹಣವೇ ತನ್ನೆಲ್ಲ ಸರ್ವಸ್ವ, ಅದನ್ನು ಬಿಟ್ಟರೇ ಬದುಕೇ ನಶ್ವರ' ಎನ್ನುವಂತೆ 'ಹಣದ ದಾಸನಾಗಿ' ಬದುಕುತ್ತಿದ್ದನು

"ಈ ಪರಿ ಲೋಭದ ಮನುಜನ ಕಾಣುತ
ಶ್ರೀಪತಿ ಯೋಚಿಸಿ ಮನದಲಿ
ವ್ಯಾಪಾರದ ಲೋಭದಿ ಮದ ತುಂಬಿರೆ
ಜ್ಞಾಪಿಸುವೆನು ಹಿಂದಿನ ಚರಿತಾ"[೪೧]

ಎಂಬ ಉದ್ದೇಶದಿಂದ ಶ್ರೀಹರಿಯು ವೃದ್ಧ ಬಡಬ್ರಾಹ್ಮಣನಾಗಿ ಓರ್ವ ಬಾಲಕನನ್ನು ಜೊತೆಯಲ್ಲಿ ಕರೆದುಕೊಂಡು ತಕ್ಷಣ ಪುರಂದರಗಡಕ್ಕೆ ಬಂದನು. ನೇರವಾಗಿ ವೆಂಕಟಪತಿಯ ವ್ಯಾಪಾರ ಸ್ಥಳಕ್ಕೆ ಬಾಲಕಸಮೇತನಾಗಿ ಶ್ರೀಹರಿ ಬರಲು, ವೆಂಕಟಪತಿಯು ಅವರನ್ನು ತಲೆಯೆತ್ತಿಯೂ ಸಹ ನೋಡದೆ ಸಂಪತ್ತನ್ನೇ ನೋಡುತ್ತಾ ಕುಳಿತನು. ಇವನನ್ನು ಕಂಡು ಬ್ರಾಹ್ಮಣ ವೇಷದ ಶ್ರೀಹರಿಯು

"ನವಕೋಟಿ ನಾರಾಯಣನೆಂಬುವ
ಬಿರುದು ಕೇಳುತ ಇಲ್ಲಿಗೆ ಬಂದೆ
ತನಯನಿಗೆ ಉಪನಯನದ ಕಾಲವು
ಎನಗೆ ಸಹಾಯವು ದೊರಕಿಪುದೆಂದೆ"[೪೨]

ಎನಲು ವೆಂಕಟಪತಿಯು ತಲೆಯೆತ್ತದೆ, ತಿರುಗಿ ನೋಡದೆ ಧನ ಮದದಿಂದ, ಸೊಕ್ಕಿನಿಂದ ಮೆರೆಯುತಲಿದ್ದನು. ಎನ್ನ ಮಗನಿಗೆ ಉಪನಯನ ಮಾಡಿಸಿದ ಫಲ ನಿನಗೆ ದೊರೆಯಬೇಕಾದರೆ ಈ ಬಡಬ್ರಾಹ್ಮಣನಿಗೆ ಸಹಾಯ ಮಾಡೆಂದು ಶ್ರೀಹರಿ ಯಾಚಿಸುವನು. ಇಷ್ಟು ನುಡಿದರು ವೆಂಕಟಪತಿಯು ಸುಮ್ಮನೆ ಇರಲು, ಹರಿಯು "ಏಕೆ ಈ ರೀತಿಯಾಗಿ ಮೂರ್ಖನಂತೆ ಕುಳಿತಿರುವೆ ನಾನು ಹೇಳುವ ನುಡಿಗಳನ್ನು ಕೇಳಿ ಚೆನ್ನಾಗಿ ಬದುಕು" ಎಂದು ತಿಳಿಸಿ ಹೇಳುವನು. ಜೇಡರ ದಾಸಿಮಯ್ಯ ಹೇಳುವ ಹಾಗೆ "ಸಿರಿಗರ ಹೊಡೆದವರನ್ನು ನುಡಿಸಲಾಗದು"

ನಾನು ಕಡು ಬಡತನವನ್ನು ಅನುಭವಿಸುತ್ತಿರುವೆ. ನನ್ನ ಮಗನಿಗೆ ಉಪನಯನ ಮಾಡಲು ಒಂದಿಷ್ಟೂ ಹಣವಿಲ್ಲ. ಆದ್ದರಿಂದ ನಿಮ್ಮಲಿ ಸಹಾಯ ಬೇಡಿ ಬಂದಿರುವೆ. ಮೂರು ಲೋಕದಲಿ ನಿನ್ನ ಅಪಾರ ಕೀರುತಿಯನ್ನು ಕೊಂಡಾಡುವೆ. ಮಾರುತೇಶನ ಭಕ್ತರು ನಮ್ಮ ಮೇಲೆ ಕರುಣೆದೋರಬೇಕೆಂದು ಮೂರು ಮೂರು ಬಾರಿ ಕೇಳಿದರು ನಾಯಕರು ಮಾತನಾಡದೆ ಹಾಗೆ ಕುಳಿತಿರುವರು. ಆಗ ಬಡಬ್ರಾಹ್ಮಣನು ರಾಜಮಹಾರಾಜರಲ್ಲಿ ನಿಮ್ಮಷ್ಟು ರತ್ನ ಮುತ್ತು ಅಭರಣಗಳ ಲೋಭವನ್ನು ಬೇರೆಲ್ಲಿಯೂ ಕಾಣೆನು. ಸತ್ಯವಂತರು, ನೀತಿವಂತರು, ಅತಿಥಿಗಳನ್ನು ಬಿಡದೆ ರಕ್ಷಿಸುವರೆಂಬ ವಿಶ್ವಾಸದಿಂದ ನಾನು ಬಂದಿರುವೆ. ತಾವು ನನಗೆ ಸಹಾಯ ಮಾಡಬೇಕೆಂದು ಮತ್ತೆ ಮತ್ತೆ ಬಿಡದೆ ಕೇಳಿದನು.

ಬ್ರಾಹ್ಮಣನ ಈ ಮಾತುಗಳನ್ನು ಕೇಳಿ ನಾಯಕರು ಅತಿ ಕೋಪಗೊಂಡು 'ಇವರ ದಾಳಿ ಹೆಚ್ಚಾಯಿತು ಹಿಡಿದೆಳೆದು ಹೊರಗೆ ಒಗೆಯಿರಿ' ಎಂದು ತನ್ನ ಸೇವಕರಿಗೆ ಆಜ್ಞೆ ಮಾಡುವನು. ಆಗ ಶ್ರೀಹರಿಯು

"ಬಡವರಿಗೆ ಬಲ್ಲಿದವರ ಸ್ನೇಹವ
ದೊರಕುವುದುಂಟೆ ಲೋಕದಲ್ಲಿ
ಒಡೆಯನ ಪ್ರೇರಣೆಯಾದದ್ದು ಕೊಟ್ಟು
ತಡೆಯದೆ ಕಳುಹುದು"[೪೩]

ಎನ್ನುತಾ ನಾಯಕರನ್ನು ಸಹಾಯ ಮಾಡುವಂತೆ ಒತ್ತಾಯಿಸಲು

"ತಡೆಯದೇ ಇಲ್ಲಿಂದಲೆ ಹೊರಡು
ಬಡವರ ಮಾತು ಸಲ್ಲದು ಎನಗೆ
ಕೊಡುವುದು ಯಾರ ಗಂಟೆಂದೆನುತ
ನುಡಿದನು ಘರ್ಜಿಸುತಾ"[೪೪]

ನಾಯಕರು 'ಈಗಿಂದೀಗಲೆ ಹೊರಡು, ಕೊಡಲು ಅದು ಯಾರ ಗಂಟು, ನಾನೇ ಗಳಿಸಿರುವುದು' ಎಂದು ಘರ್ಜಿಸುತಾ ನುಡಿವರು. ಇಷ್ಟಾದರೂ ಬಿಡದೆ ಬ್ರಾಹ್ಮಣನು

"ಬಡವರುಂಟು ಲೋಕದಲ್ಲಿ
ಬಿಡದೆಯಾಚನೆಗಾಗಿ ಬರಲು
ನುಡಿವರೆ ನಿಷ್ಠುರದ ಮಾತು
ನಡತೆಯು ಸರಿಯಲ್ಲ"[೪೫]

ಈ ಲೋಕದಲ್ಲಿ ಶ್ರೀಮಂತರಷ್ಟೇ ಅಲ್ಲ ಬಡವರೂ ಇದ್ದಾರೆ. ಬೇಡುವುದೇ ಅವರ ಧರ್ಮ-ಕರ್ಮ-

ಹಣವಂತರಾದವರು ಮನೆಗೆ ಬಡವರು ಬೇಡಲು ಬಂದಾಗ ನಿಷ್ಠುರದ ಮಾತುಗಳನ್ನು ಆಡಬಾರದು, ಇದು ನಿಮ್ಮ ವ್ಯಕ್ತಿತ್ವಕ್ಕೆ ತಕ್ಕುದಲ್ಲ ಎಂದು ಹೇಳುವ ಬ್ರಾಹ್ಮಣನ ಮಾತುಗಳು ಜಗತ್ತಿನ ವಾಸ್ತವಿಕ ಸ್ಥಿತಿಯನ್ನು ತಿಳಿಸುತ್ತವೆ. ಯಾವುದಕ್ಕೂ ಜಗ್ಗದ ನಾಯಕರು ಬಡಬ್ರಾಹ್ಮಣನಿಗೆ 'ಯಾಚನೆಗೆ–ಗೀಚನೆಗೆ ನಮಗೆ ಸಮಯವಿಲ್ಲ. ನಾವು ಹೇಳಿದಂತೆ ಮಾಡಿರಿ. ಯೋಜನೆ ಮಾಡದೆ ಮುಂದಕ್ಕೆ ನಡೆಯಿರಿ. ನಿಮ್ಮ ಧರ್ಮದ ಮಾತುಗಳನ್ನು ಸಾಕು ನಿಲ್ಲಿಸಿ' ಎಂದು ಹೆದರಿಸುವನು.

ನಮಗೆ ಒಡವೆ ವಸ್ತುಗಳು ಬೇಕಾಗಿಲ್ಲ. ಬಡವನ ಮಗನ ಉಪನಯನಕ್ಕಾಗಿ ಆದಷ್ಟು ಸಹಾಯ ಸಲ್ಲಿಸಿರಿ. ಹಿಂದೆ ಬಲಿಚಕ್ರವರ್ತಿಯು ವಾಮನ ಮೂರು ಪಾದ ಭೂಮಿ ಕೇಳಲು ಯಾವುದನ್ನು ವಿಚಾರಿಸದೆ ನೀಡಿ ಕೃತಾರ್ಥನಾದನು. ಆದರೆ ನೀವು ಇಂದು ಈ ರೀತಿಯಾಗಿ ನುಡಿಯುವುದು ಸರಿಯೇ ನೀವೆ ವಿಚಾರಿಸಿ ಎಂದು ಬ್ರಾಹ್ಮಣನು ನುಡಿಯಲು, ಎಲೆ ಬ್ರಾಹ್ಮಣ ಹೆಚ್ಚು ಮಾತನಾಡಬೇಡ. ಮಾತು ನಿಲ್ಲಿಸದಿದ್ದರೆ ನಿನಗೆ ಬೆತ್ತದ ರುಚಿ ತೋರಿಸುತ್ತೇನೆ. ಸುಮ್ಮನೆ ನಮ್ಮ ಸಮಯವನ್ನು ಹಾಳು ಮಾಡಬೇಡ. ನಿನ್ನ ಯಾವ ಮಾತುಗಳನ್ನು ನಾನು ಕೇಳುವುದಿಲ್ಲ. ಬಂದ ದಾರಿಗೆ ಸುಂಕವಿಲ್ಲ ಎಲೆ ಬ್ರಾಹ್ಮಣನೇ ನಡೆಯೆಂದು ಕಠೋರವಾಗಿ ನಾಯಕ ನುಡಿವನು. ತನ್ನ ಸೇವಕರನ್ನು ಕರೆದು ಈತನನ್ನು ದೂರ ಕಳುಹಿಸಿ ಬರುವಂತೆ ಸೂಚಿಸಿದನು.

ಆದರೆ ಮಾರನಯ್ಯನು ಇಷ್ಟಕ್ಕೆ ಸುಮ್ಮನೇ ಹೋಗದೆ ಆರು ತಿಂಗಳುಗಳವರೆಗೆ ಪ್ರತಿದಿನ ನಾಯಕರ ಮನೆಗೆ ಬಂದು ಬಿಡದೆ ಯಾಚಿಸಿದನು. ಬಡಬ್ರಾಹ್ಮಣನ ಉಪಟಳವನ್ನು ತಾಳಲಾರದೆ ನಾಯಕರು ಒಂದು ದಿನ

"ಹೇರೆರಡು ಸವೆದ ರೊಕ್ಕತಂದು ಸುರಿಸಿದರು
ನೋಡು ಇದರಲ್ಲಿ ಒಂದು ದುಡ್ಡು ಆರಿಸಿ ತೆಗೆದು
ತೀರಿಸಿಕೋ ನಿನ್ನ ಋಣವು ಎಂದೆನಲು"[೪೬]

ಹರಿಯು ನಸುನಕ್ಕು, ಇಲ್ಲಿಯವರೆಗೆ ನಾನು ಇಂಥ ಕಡುಲೋಭಿಗಳನ್ನು ಕಂಡಿಲ್ಲ. ನಾಯಕನ ಈ ಅಜ್ಞಾನಕ್ಕೆ ಧನಲೋಭವೇ ಕಾರಣ. ಹರಿಸ್ಮರಣೆಯನ್ನು ನಾಯಕರಿಗೆ ತಿಳಿಸದೇ ಇರಲಾರೆ. ಇದಕ್ಕೊಂದು ಉಪಾಯವ ಮಾಡುವೆನು ಎಂದು

"ಪರಮ ಪತಿವ್ರತೆಯಾದ ಸರಸ್ವತಿಯ ಮಂದಿರಕೆ
ಸರಸರನೆ ಬಂದ ಬಾಲಕನ ಸಹಿತ ಹರಿಯು"[೪೭]

ಹೀಗೆ ಬಂದ ಬ್ರಾಹ್ಮಣರನ್ನು ಕಂಡು ಸರಸ್ವತಿಯು ಅವರ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸುವಳು. ಆಗ ಬ್ರಾಹ್ಮಣ ವೇಷದ ಶ್ರೀಹರಿಯು ಅವಳ ಮುಂದೆ ಪತಿನಿಂದನೆ ಮಾಡಲು ತೊಡಗುವನು. ಇದರಿಂದ ಅವಳು ಯಾಕೆ ತಾವು ನನ್ನ ಪತಿಯನ್ನು ನಿಂದಿಸುತ್ತಿರುವಿರಿ, ಇದನ್ನು ಕೇಳಲಾರೆ, ಇದರ ಕಾರಣವನ್ನು

ತಿಳಿಯೆನು ಎಂದು ಬ್ರಾಹ್ಮಣನಲ್ಲಿ ವಿನಂತಿಸಿಕೊಳ್ಳವಳು. ಅದಕ್ಕೆ ಹರಿಯು ನಿನ್ನ ಮನಸ್ಸಿಗೆ ಬಂದುದನು ದಾನವ ಮಾಡಿ ಧನ್ಯಳಾಗು ಎನ್ನಲು ಆ ತಾಯಿಯು

"ಏನಗೆ ಏನಿಹುದೈ ಸ್ವತಂತ್ರವು
ಇನಿಯನೆ ಎಲ್ಲಕ್ಕೂ ಸ್ವಾಮಿಯು
ತನುವು ಮನವು ಧನವೆಲ್ಲ ಪತಿಯ ಅಧೀನವೆಂದೆನಲು"[೪೮]

ಈ ರೀತಿಯಾಗಿ ಸರಸ್ವತಿಯು ಗಂಡನ ಮನೆಯಲ್ಲಿ ನನಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಇಲ್ಲಿಯ ಎಲ್ಲ ಆಸ್ತಿಗೂ ನನ್ನ ಗಂಡನೆ ಒಡೆಯ. ಹೀಗೆ ತನ್ನ ಅಸಹಾಯಕತೆಯನ್ನು ತೋಡಿಕೊಳ್ಳಲು ಶ್ರೀಹರಿಯು ನೀ ಹೋಗೆಂದೊಡನೆ ನಾನು ಹೋಗುವುದಿಲ್ಲ. ನಿನ್ನಿಂದ ದಾನವನ್ನು ಪಡೆಯದೇ ನಾನು ಇಲ್ಲಿಂದ ತೆರಳಲಾರೆನು.

"ಅಸ್ಥಿರಂ ಜೀವನಂ ಲೋಕೇ
ಅಸ್ಥಿರಂ ಯೌವನಂ ಧನಂ।
ಅಸ್ಥಿರಂ ದಾರಾ ಪುತ್ರಾದಿ
ಧರ್ಮ ಕೀರ್ತಿ ದ್ವಯಮ ಸ್ಥಿರಂ"[೪೯]

ಎಂದು ಸರಸ್ವತಿಗೆ ಧರ್ಮವನ್ನು ಸೂಕ್ಷ್ಮವಾಗಿ ವಿವರಿಸುವನು. ಎನಗೆ ಏನಿಲ್ಲವೆಂದು ಅಸಹಾಯಕಳಾಗಬೇಡ. ನೀನು ಏನು ಕೊಟ್ಟರೂ ಸರಿಯೇ ನಾವು ಸ್ವೀಕರಿಸುತ್ತೇವೆ. ನಿನ್ನ ಮೂಗುತಿಯನ್ನು ನೀಡಿ ನಾಡೊಳು ಪುಣ್ಯವತಿಯಾಗೆಂದು ಬ್ರಾಹ್ಮಣ ಹೇಳುವನು. ಸರಸ್ವತಿಯು 'ಹಿಡಿಯಕ್ಕಿಯನ್ನೂ ಕೊಡಲು ನಾನು ಅಸ್ವತಂತ್ರಳಾಗಿದ್ದೇನೆ' ಎಂದು ಹೇಳುವಳು. ಯಾವುದೇ ವಸ್ತುವನ್ನು ಇವರಿಗೆ ಕೊಡಲು ನನ್ನಿಂದ ಸಾಧ್ಯವಿಲ್ಲ. ಕೊಡದಿದ್ದರೆ ಈ ಬ್ರಾಹ್ಮಣರು ಬಿಡುವುದಿಲ್ಲ ಏನು ಮಾಡಲಿ ಎಂದು ಯೋಚಿಸಿ

"ಆದದ್ದಾಗಲಿ ಅನುಭವ ಮಾಳ್ಪೆನು
ಶ್ರೀಧರನಿಗೆ ಪ್ರೀತಿಯಾಗಲೆಂದೆನುತ
ಸಾಧುಗಳರಸನಿಗಿತ್ತಳು ಮೂಗುತಿ
ಯಾದವ ಪತಿಗರ್ಪಿತವೆನುತ"[೫೦]

ಶ್ರೀಹರಿಯ ಕೈಗೆ ಅತ್ಯಂತ ದಿಟ್ಟತನದಿಂದ, ಭಕ್ತಿಭಾವದಿಂದ ಮೂಗುತಿಯನಿಟ್ಟು ಸರಸ್ವತಿಯು ಧನ್ಯಳಾದಳು.

ಇಷ್ಟಕ್ಕೆ ಬಿಡದ ಬಡ ಬ್ರಾಹ್ಮಣನು ಆ ಮೂಗುತಿಯನ್ನು ತೆಗೆದುಕೊಂಡು ನಾಯಕನ ಅಂಗಡಿಗೆ ಬಂದು, ಅವನಿಗೆ ಆಭರಣ ತೋರಿ 'ನಾನೂರು ಶುಭ್ರಕೊಡು' ಎಂದು ಕೇಳಿದನು. ನಾಯಕನು 'ಯಾರೀ

ಕಳ್ಳ ಇವನಿಗೆ ಹೇಗೆ ಹಣ ಕೊಡುವುದು' ಎಂದು ದಿಕ್ಕು ತೋಚದಂತಾಗಿಬಿಟ್ಟನು. ಆಭರಣವನ್ನು ಕೈಯಲ್ಲಿ ಹಿಡಿದುಕೊಂಡು ಬ್ರಾಹ್ಮಣನನ್ನು ದುರುದುರು ನೋಡುತ್ತ ನಿಂತನು.

"ಮೂಗುತಿ ನೋಡಿದನು ಮನದಿ
ನಾನಾ ಬಗೆ ಸ್ಮರಿಸಿದನು
ಆದರೆ ಇದು ನಮ್ಮನೆಯೊಳಗಿರದಿರೆ
ನೀಡದೆ ರೊಕ್ಕ ಶಿಕ್ಷಿಪೆನೆಂದನು"[೫೧]

ಆ ಮೂಗುತಿಯನ್ನು ಮುಚ್ಚಿಡುತ್ತ ಬಡವನನ್ನು ನೋಡಲು ಆತ ಕಾಣದಾದನು. ಸೇವಕರಿಂದ ಹುಡುಕಲು ಹೇಳಿದನು. ಸೇವಕರು ಅವನ ಹಿಂದೆ ಹೋದರು. ಆದರೆ ಆ ಬ್ರಾಹ್ಮಣ ವಿಠ್ಠಲ ಗುಡಿಯ ಮುಂದೆ ಕಣ್ಮರೆಯಾದುದನ್ನು ನೋಡಿದ ಸೇವಕರು ನಾಯಕರಿಗೆ ತಿಳಿಸಿದರು. ಅಪಾರ ಕಳವಳಕ್ಕೊಳಗಾದ ನಾಯಕರು ಅಂಗಡಿಯನ್ನು ಬೀಗ ಹಾಕಿ ಮನೆಗೆ ಬಂದನು. ಹೆಂಡತಿಯನ್ನು "ಮೂಗುತಿ ಎಲ್ಲಿ" ಎಂದು ಜೋರಾಗಿ ಕೇಳಿದನು. ಸರಸ್ವತಿ ಏನನ್ನೂ ಮಾತನಾಡದೆ ಮೌನವಾಗಿ ನಿಂತಳು. 'ಈ ಕನಕ, ರತ್ನ, ಆಭರಣ ಎಲ್ಲವೂ ನಿನಗೆ ಸೇರಿದ್ದು ಹೇಳು ಏನು ಮಾಡಿದೆ' ಎಂದು ಒತ್ತಾಯಿಸಿದರು. ಸರಸ್ವತಿಯು ಮನಸ್ಸಿನಲ್ಲಿ ಶ್ರೀಹರಿಯನ್ನು ಸ್ತುತಿಸುತ್ತ 'ನೀನೇ ನನ್ನನ್ನು ರಕ್ಷಿಸಬೇಕೆಂದು' ಪ್ರಾರ್ಥಿಸುತ್ತಾ ನಿಂತಳು.

"ತಡವೇತಕೆ ಆ ಒಡವೆಯ ಕೊಡುಕೊಡು
ಕೊಡದಿರೆ ಬಿಡುವವ ನಾನಲ್ಲ
ವಡಲುರಿ ಹೆಚ್ಚಿತು ಮಿಡುಕುವಿಯಾತಕೆ
ಕಡಿವೆ ನಿನ್ನ ನೀ ತಕ್ಷಣದಿ"[೫೨]

ಎಂದು ನಾಯಕರು ಹೆಂಡತಿಯನ್ನು ಹೆದರಿಸುವರು. ಪತಿಯ ಮಾತಿನಿಂದ ಬಹು ದು:ಖಿತಳಾಗಿ ಭಯಭೀತಳಾದ ಸರಸ್ವತಿಯು 'ಮೂಗುತಿ ಮುರಿದಿದೆ, ಹಾಗೇ ಇಟ್ಟಿರುವೆ ಬೇಗನೆ ತಂದು ಕೊಡುವೆ' ಎಂದು ಮನೆಯೊಳಗೆ ಹೋದಳು. ಶ್ರೀಹರಿಯನ್ನು ನಿರ್ಮಲ ಭಕ್ತಿಯಿಂದ, ವಿಶ್ವಾಸದಿಂದ ಪ್ರಾರ್ಥಿಸಿ ತುಳಸಿಯನ್ನು ಪೂಜೆ ಮಾಡಿ

"ಕೊಡು ಎನಗಭಯವನು ಶ್ರೀ ತುಳಸಿಯೇ
ಕುಡಿವೆ ಈ ವಿಷವನ್ನು
ಕಡಲೊಡೆಯನ ಪಾದ ಬಿಡದೆ ತೋರಮ್ಮ ದೇವಿ
ಕಮಲನಾಭ ವಿಠ್ಠಲನರಸಿ ಶ್ರೀ ತುಳಸಿಯೇ"[೫೩]

ಅನನ್ಯ ಭಕ್ತಿ, ಪ್ರೀತಿಯಿಂದ ತುಳಸಿಯನ್ನು ಪ್ರಾರ್ಥಿಸುವಳು. ನೀನು ಎನಗೆ ಅಭಯವನು ಕೊಡದೆ ಹೋದರೆ

ಈಗಿಂದೀಗಲೆ ಈ ವಿಷವನ್ನು ಕುಡಿದು ನನ್ನ ಪ್ರಾಣವನ್ನು ಶ್ರೀಹರಿಗೆ ಅರ್ಪಿಸುವೆನು. ಎನಗೆ ನಿಮ್ಮ ಪಾದವನ್ನು ಬೇಗನೆ ಕರುಣಿಸಿ

"ಹೀಗೆನುತಲಿ ಕುಡಿಪೋಗಲು ವಿಷವನು
ಸಾಗರಶಯನನು ನೋಡುತಲಿ ಮುದದಿ
ನೀಡಿದ ಮುಗುತಿ ಬೀಳಲು ವಿಷದಲಿ
ಸೋಜಿಗದಲಿ ಕಂಗಳ ತೆರೆದು"[೫೪]

ಸರಸ್ವತಿಯು ಮೂಗುತಿಯನ್ನು ನೋಡಿದಳು. ಅಪಾರ ಸಂತೋಷ, ಆಶ್ಚರ್ಯದಿಂದ ಮೂಗುತಿಯನ್ನು ಒಯ್ದು ಪತಿಯ ಕೈಗೆ ನೀಡಿದಳು. ಇದ ಕಂಡು ಸೋಜಿಗಗೊಂಡ ನಾಯಕರು ತಕ್ಷಣ ಅಂಗಡಿಯಲ್ಲಿ ನೋಡಿ ಬರುವೆನೆಂದು ಆ ಕಡೆ ನಡೆದರು. ಅಲ್ಲಿ ಮೂಗುತಿ ಇರಲಾರದುದನ್ನು ನೋಡಿ ಪುನಃ ನಾಯಕರು ಆತುರದಿಂದ ಮನೆಗೆ ಬಂದರು. ಇದು ಶ್ರೀಹರಿಯ ಮಹಿಮೆ ಎಂದು ಹೆಂಡತಿಯಿಂದ ತಿಳಿದುಕೊಂಡು

"ಹರಿ ಎಂಬುದು ತಿಳಿಯದೆ ಪರಿಪರಿಯಲಿ
ವರವೃದ್ಧನ ದೂಷಿಸಿ ಬೈದೆ
ಮರಳಿ ಅ ಮೂರ್ತಿಯ ನೋಡದೆ ವೃಥಾ
ಧರಿಸಲ್ಯಾಕೆ ದೇಹವು ವ್ಯರ್ಥ

ಕೆಟ್ಟೆನು ಕೆಟ್ಟೆನು ಕಡುಲೋಭದಿ ಮನ
ಮುಟ್ಟಿ ಪೂಜಿಸದೆ ಮುರಹರನ ದೃಷ್ಟಿಗೆ
ಗೋಚರನೆಂತಾಗುವನು ಶ್ರೀ
ವಿಠ್ಠಲ ಈ ಪಾಪಿಷ್ಠನಿಗೆ

ಹೋಯಿತು ಆಯುವು ಪರಧನಾರ್ಜನೆಯಲಿ
ಸೋರುವ ಕುಂಭದ ಜಲದಂತೆ
ಶ್ರೀರಮಣನೆ ಭವಸಾಗರ ತಪ್ಪಿಸಿ
ಕಾಯೋ ಕಮಲನಾಭ ವಿಠ್ಠಲನೆ"[೫೫]

ಹೀಗೆ ನಾಯಕರು ತಮ್ಮ ಜೀವನವು ವ್ಯರ್ಥ ಕಳೆಯಿತು, ಶ್ರೀಹರಿಯು ಮನೆಯವರೆಗೆ ಬಂದರೂ ಅವನನ್ನು ಗುರುತಿಸಲಾರದೆ ಕೆಟ್ಟೆನು. ಹಣವನ್ನು ಗಳಿಸುವುದರಲ್ಲಯೇ ನನ್ನ ಜೀವನ ಹೋಯಿತು. ಇಂಥ ಅಪಾರ ಮಹಿಮ ಹರಿಯನ್ನು ಎಂದು ಕಾಣುವೆನು. ಹರಿಯೇ ಈ ಭವಸಾಗರದಿಂದ ನನ್ನನ್ನು ದಾಟಿಸು ಎನ್ನುತಾ

ತನ್ನ ತಪ್ಪಿಗೆ ಪರಿಪರಿಯಾಗಿ ಪಾಶ್ಚಾತಾಪ ಪಟ್ಟುಕೊಳ್ಳವರು. ಮತ್ತೆ ಮುಂದುವರೆದು ಕೃಷ್ಣ ನಮ್ಮ ಮನೆಗೇಕೆ ಬಂದ. ಮಗನ ಉಪನಯನಕ್ಕೇಕೆ ಬೇಡಿದ. ನನಗೆ ಈತನೇ 'ಹರಿ' ಎಂದು ತಿಳಿಯಲಿಲ್ಲೇಕೆ, ಕಾಸನ್ನು ಸುರುವಿಸಿ ಒಂದು ಕಾಸನ್ನೂ ಮುಟ್ಟದೆ ಹಾಗೆ ಏಕೆ ಹೋದ. ಸರಸ್ವತಿಯಲ್ಲಿ ಮೂಗುತಿಯನ್ನೇಕೆ ಕೇಳಿದ. ಆಕೆ ನನ್ನನ್ನು ಕೇಳದೆ ಮೂಗುತಿ ಏಕೆ ನೀಡಿದಳು. ಅ ಮೂಗುತಿಯನ್ನು ಪುನ: ನನ್ನ ಬಳಿ ನೀಡಿ ಹಾಗೆ ಏಕೆ ಹೋದ. ಸೇವಕರು ಬೆಬ್ಬಂತಲು ಮರೆಯಾದನೇಕೆ. ಮನೆಗೆ ಬಂದರೆ ವಜ್ರದ ಬಟ್ಟಲಲಿ ಮೂಗುತಿ ಬಂದದ್ದು ಹೇಗೆ. ನನ್ನ ಹೆಂಡತಿಗಿರುವ ಜ್ಞಾನ ನನ್ನಲ್ಲಿ ಏಕಿಲ್ಲ. ನನ್ನರಸಿಯನ್ನು ಪಾಲಿಸಿ ನನ್ನನ್ನೇಕೆ ಬಿಟ್ಟೆ ಎಂದು ತುಂಬಿ ಬಂದ ದು:ಖದಿಂದ ಹರಿಗಾಗಿ ಹಲವಂದದಿ ಹಲುಬಿದರು, ಬಾಯ್ಬಿಟ್ಟರು. ಜೀವೂಬಾಯಿಯು ಇಲ್ಲಿ ಜೀವನವೆಂದರೆ 'ಸೋರುವ ಕುಂಭದ ಜಲದಂತೆ' ಎಂದು ಅಲಂಕಾರಿಕವಾಗಿ ತಿಳಿಸಿರುವಳು. ಅಂದರೆ ಜೀವನವು ಕ್ಷಣಿಕವೂ, ಈ ಕುಂಬ ಎಂದು ಒಡೆಯುತ್ತದೆ? ಹೇಗೆ ಒಡೆಯುತ್ತದೆ? ಎಂಬುದು ಯಾರಿಗೂ ತಿಳಿಯದು. ಎಂಬ ಸತ್ಯವನ್ನು ನಾಯಕರ ಮಾತುಗಳ ಮೂಲಕ ತಿಳಿಸಿರುವಳು.

ನಾಯಕರು ಸರಸ್ವತಿಗೆ 'ಆ ಹರಿಯನ್ನು ನೀನು ಹೇಗೆ ಪೂಜಿಸಿದೆ ಅದನ್ನೆಲ್ಲ ಸವಿವರವಾಗಿ ಹೇಳೆನಲು' ಪತಿಯಪಾದಕ್ಕೆರಗಿ "ಬಡಬ್ರಾಹ್ಮಣನು ಮನೆಗೆ ಬಂದು ಮೂಗುತಿಯ ನೀಡೆಂದು, ತನಯನ ಉಪನಯನಕ್ಕೆ ಸಹಾಯ ಕೇಳಿದನು. ನನ್ನಿಂದ ಏನನ್ನೂ ನೀಡಲಾಗದು ಎಂದರೂ ಆತ ಕೇಳಲಿಲ್ಲ. ನಿನ್ನ ಮೂಗುತಿಯ ನೀಡೆನಲು ನಾನು ಮನದಲ್ಲಿ ಭಯಪಡುತ್ತಾ ಬ್ರಾಹ್ಮಣನ ಮೇಲೆ ಕರುಣೆಹುಟ್ಟಿ ಮೂಗುತಿ ನೀಡಿದೆನು ಎಂದು ಎಲ್ಲ ವೃತ್ತಾಂತವನ್ನು ತಿಳಿಸಿದಳು. ಇದನ್ನು ಕೇಳಿ ನಾಯಕರು ರೋಮಾಂಚನಗೊಂಡು ಕಣ್ಣಿನಲ್ಲಿ ಜಲಧಾರೆ ನಿರಂತರವಾಗಿ ಸುರಿಸತೊಡಗಿದರು. ಗದ್ಗದಿತ ಸ್ವರದಲ್ಲಿ ಹರಿಯ ಸ್ಮರಣೆಯಲ್ಲಿ ತಲ್ಲೀನರಾದರು.

"ಸಾಗರದಲಿ ದೋಣಿ
ಸಿಕ್ಕಿ ಬಿರುಗಾಳಿಯಿಂದ
ಪೋಗುವಂದದಿ ಮನ
ಪೋಗುತಿರುವುರೋ ರಂಗ"[೫೬]

ಈ ರೀತಿಯಲ್ಲಿ ಸಂಸಾರದ ನಿಸ್ಸಾರತೆಯನ್ನು ಅರಿತ ನಾಯಕರು ನಾನು ಇದರಲ್ಲಿ ಮುಳುಗಿ ಒದ್ದಾಡುತ್ತಿದ್ದೇನೆ. ಇದರಿಂದ ಪಾರು ಮಾಡೆಂದು ಬಿನ್ನೈಸಿಕೊಳ್ಳವರು. ಪುರಂದರದಾಸರು ಮುಂದೆ ತಮ್ಮ ಕೀರ್ತನೆಗಳಲ್ಲಿಯೂ ಸಹ 'ಅಂಬೀಗ ನಾ ನಿನ್ನ ನಂಬಿದೆ ಜಗದಂಬಾರಮಣ ನಿನ್ನ ನಂಬಿದೆ' ಎಂದು ಹಾಡಿದ್ದಾರೆ. ನಾಯಕರು ನಿರಶನ ವ್ರತವನ್ನು ಕೈಗೊಂಡು ಹರಿದರ್ಶನ ಮಾಡದವರೆಗೆ ಅನ್ನ ಸೇವಿಸಲಾರೆನೆಂದು ಹಠಹಿಡಿದು ಕುಳಿತುಕೊಳ್ಳವರು. ಸರಸ್ವತಿಯು ಅನ್ನವನ್ನು ಸೇವಿಸುವಂತೆ ಗಂಡನನ್ನು ಕೇಳಿಕೊಳ್ಳವಳು. ಆದರೆ ನಾಯಕರು ತಮ್ಮ ಧ್ಯಾನದಿಂದ ಜಾಗ್ರುತರಾಗುವುದಿಲ್ಲ. ಇದನ್ನು ಕಂಡು ಸರಸ್ವತಿಯು

ಶ್ರೀ ತುಳಸಿಯಲ್ಲಿ ಪ್ರಾರ್ಥನೆ ಸಲ್ಲಿಸಿ

"ಪಕ್ಷಿ ವಾಹನನ ವೃಕ್ಷಕೆ ಮಾಲಿಕೆಯಾಗಿ
ಅಕ್ಷಯಗುಣ ಪೂರ್ಣನಿಗೆ ಅರ್ಚಿಸುವಳಾಗಿ
ಹೆಚ್ಚಿನಾಭರಣಗಳಿಗ್ಹೆಚ್ಚಾಗಿ ಮೆರೆಯುವ
ಅಚ್ಚುತನ ರಾಣಿ ಮತ್ಸ್ಯ ಮೂರುತಿಯ ತೋರೆ
ಮಂಗಳಂ ಶ್ರೀ ತುಳಸಿ ಜಯ ಮಂಗಳಂ"[೫೭]

ಮಂಗಲವನ್ನು ಅಪಾರ ಭಕ್ತಿ ಮತ್ತು ವಿಶ್ವಾಸದಿಂದ ಹಾಡುವಳು. ಶ್ರೀ ಮನೋಹರನೇ ನಿನ್ನ ದರ್ಶನವ ನೀಡಿ ನನ್ನ ಪತಿಯನ್ನು ರಕ್ಷಿಸಬೇಕೆಂದು ಬೇಡಿಕೊಳ್ಳುವಳು. ಸರಸ್ವತಿಯ ಅಚಲಭಕ್ತಿ ಮತ್ತು ಪರಿಶುದ್ಧ ಪ್ರೀತಿಗೆ ಶ್ರೀಹರಿಯು ಪ್ರತ್ಯಕ್ಷನಾಗುವನು. ಕೃಷ್ಣನನ್ನು ಕಂಡ ಸತಿಯು ಶಿರಬಾಗಿ ವಂದಿಸಿ ಆನಂದ ಭಾಷ್ಪವನ್ನು ಸುರಿಸಿದಳು. ಮತ್ತೇ ಆ ಯೋಗಿ ವಂದ್ಯನನ್ನು ಮನದುಂಬಿ ಸ್ತುತಿಸಿದಳು.

"ತಂದೆ ತಾಯಿ ನೀನೆಂದು ನಂಬಿದೆನೋ
ಮುಂದೆ ದಾರಿ ತೋರುವ ದೇವ
ಕಂದನೆಂದು ಚಂದದಿಂದ ಸಲಹೋದು
ಪೊಂದಿದ ಕಾರ್ಯ ನಿನ್ನದೊ ದೇವ"[೫೮]

ಶ್ರೀ ಹರಿಯೇ ತನ್ನೆಲ್ಲ ಸರ್ವಸ್ವ ಆತನನ್ನು ಬಿಟ್ಟರೆ ನನಗೆ ಬೇರಾರೂ ಗತಿಯಿಲ್ಲ ಎನ್ನುತ ಅತಿಯಾದ ವಿಶ್ವಾಸವನ್ನು ಹರಿಯ ಮೇಲಿಡುವಳು. ನನ್ನ ಪತಿಗೊದಗಿದ ದು:ಖಕ್ಕೆ ಪರಿಹಾರವೇನೆಂದು ಕೇಳಲು ಶ್ರೀಹರಿಯು,

"ಅತಿಶಯದ ಐಶ್ವರ್ಯವನ್ನೆಲ್ಲ ದಾನವ ಮಾಡಿ
ಶ್ರೀಪತಿಯೇ ಗತಿಯೆಂದು ದಾಸನಾಗುವ ತನಕ
ಹಿತವು ಮನಕಾಗದೆಂದು"[೫೯]

ಉಪಾಯವನ್ನು ಹೇಳಿ ಹರಿ ಅದೃಶ್ಯನಾಗುವನು. ಸತಿಯು ಅಮಿತಾನಂದ ಮತ್ತು ಭಕ್ತಿಯಿಂದ ತನ್ನ ಪತಿರಾಯನಿಗೆ ಈ ವಿಷಯ ತಿಳಿಸಲು

"ಏನಿದು ಅತಿಶಯ ತರುಣಿಯೆ
ನೀನೆಲ್ಲಿ ನೋಡಿದೆ ನಿಗಮಗೋಚರನ
ನಾನಲ್ಲಿಗೆ ಬರುವೆನು ತೋರಿಸು
ವಾರಿಜಾಕ್ಷನ ಚರಣಗಳೆನಗೆ"[೬೦]

ನಾಯಕರು ಹೆಂಡತಿಯನ್ನು ಅತಿ ಆತುರದಿಂದ ಹರಿ ಎಲ್ಲಿರುವನು, ನೀನೆಲ್ಲಿ ನೋಡಿದೆ ಎಂದು ಕೇಳುವರು. ಆಗ ಸರಸ್ವತಿಯು ತುಳಸಿಯ ಬೃಂದಾವನದಲ್ಲಿ ಹರಿಯನ್ನು ಕಂಡು ಪಾದಕ್ಕೆರಗಿ ಎನ್ನ ಪತಿಯು ಮಾಡುತ್ತಿರುವ ವ್ರತವ ಕಂಡು 'ದಯಮಾಡಿ ದರ್ಶನ ನೀಡಬೇಕೆಂದು' ಕೇಳಿಕೊಳ್ಳಲು, ಶ್ರೀಹರಿಯು

'ಕೇಳು ತ್ರಿರಾತ್ರಿ ವ್ರತದಿಂದ ತೃಪ್ತನಾಗಿಹೆನು ನಾನು
ಅದರಿಂದ ನಿನ್ನ ಪತಿಗನುಗ್ರಹ ಮಾಡಿಹೆನು"[೬೧]

ನಾನು ಹೇಳಿದಂತೆ ಎಲ್ಲ ಐಶ್ವರ್ಯವನ್ನು ತೊರೆದು ಹರಿದಾಸನಾಗೆಂದು ತಿಳಿಸಿದನೆಂದು ಸರಸ್ವತಿ ಗಂಡನಿಗೆ ಹೇಳಿದಳು. ಆಗ ಧಾವತಿಗೊಂಡ ನಾಯಕರು ಹೇಳು, ಶ್ರೀಹರಿ ಇಲ್ಲಿಗೆ ಬಂದಿದ್ದನೆ? ಆತ ಯಾವ ಸ್ಥಳದಲ್ಲಿ ನಿಂತಿದ್ದನು? ಬೇಗ ತೋರಿಸುವಂತೆ ಒತ್ತಾಯಿಸುವನು. ಸರಸ್ವತಿಯು ಶ್ರೀಹರಿ ನಿಂತಿದ್ದ ಸ್ಥಳವನ್ನು ತೋರಿಸುವೆನೆಂದು ಆತನ ಕೈಹಿಡಿದುಕೊಂಡು ಶ್ರೀ ತುಳಸಿಯ ಬೃಂದಾವನದ ಮುಂದೆ ನಿಲ್ಲಿಸಿ ಇದುವೇ ಶ್ರೀಕೃಷ್ಣ ನಿಂತಿದ್ದ ಸ್ಥಳವೆಂದು ತೋರಿಸುವಳು. ಇಷ್ಟು ಕೇಳಿದ ತಕ್ಷಣ ವೆಂಕಟಪ್ಪನು ಆ ಸ್ಥಳದಲ್ಲಿ ಬಿದ್ದು ಹೊರಳಾಡುತ್ತಾ 'ಕಮಲನಾಭ ವಿಠ್ಠಲನೇ ನಾನು ಅತೀ ತಪ್ಪು ಮಾಡಿರುವೆ, ಕೃಪೆದೋರಿ ನನ್ನನ್ನು ಕರುಣಿಸಬೇಕೆಂದು' ಹಲುಬುವನು.

"ಶ್ರೀಶ ನಿನ್ನಯ ಪಾದ
ದಾಸನಾಗುವೆ ಬಿಡದೆ
ಪೋಷಿಸೈ ಕರುಣದಿಂ
ವಾಸುದೇವ"[೬೨]

ನೆಂದು ತನ್ನೆಲ್ಲ ಅತೀಶಯವಾದ ಸಂಪತ್ತನ್ನು ತ್ಯಜಿಸಿ ಹರಿದಾಸನಾಗಲು ಒಪ್ಪಿಕೊಂಡನು. ಶ್ರೀಹರಿಯ ಹತ್ತು ಅವತಾರಗಳನ್ನೆಲ್ಲ ಮನದುಂಬಿ ಕುಣಿದಾಡುತ ಅಪಾರ ಭಕ್ತಿಯಿಂದ ತನ್ಮಯತೆಯಿಂದ ಸ್ತುತಿಸುವನು. ಇಲ್ಲಿಯವರೆಗೆ ನಾನು

"ಕರೆ ಕರೆಯ ಭವದೊಳಗೆ
ಮುಳುಗಿದೆನೋ ಮಾಧವನೆ
ಭಯ ಪರಹರಿಸಯ್ಯ
ಭಾಗ್ಯನೀಯೆ"[೬೩]

ಎನ್ನುತಾ ಶ್ರೀಹರಿಯಲ್ಲಿ ತನ್ನನ್ನು ಈ ಭವ ಬಂಧನದಿಂದ ಬಿಡುಗಡೆಗೊಳಿಸುವಂತೆ ಪ್ರಾರ್ಥಿಸುವನು. ತ್ರಿಕರ್ಣಪೂರ್ವಕವಾಗಿ ಹರಿಯೇ ತನ್ನ ಸರ್ವಸ್ವವೆಂದು ಒಪ್ಪಿಕೊಳ್ಳವನು. ಇನ್ನು ಮುಂದೆ ನಿನ್ನನ್ನು ಕಾಣದೆ

ಒಂದರಗಳಿಗೆಯೂ ಇರಲಾರೆ ಎಂದು ದು:ಖಿಸುವನು. ಭೂಮಿಯ ಮೇಲೆ ಬಿದ್ದು ಹೊರಳಾಡುತ್ತಾ ಪರಮಾತ್ಮನು ದರ್ಶನವ ನೀಡದಿದ್ದರೆ ಈ ದೇಹವನ್ನು ನೀಗಿ ಅವನ ಲೋಕವನ್ನು ಸೇರುವೆನು

"ಬಡವ ಬ್ರಾಹ್ಮಣ ದರ್ಶನ ಕೊಡದಿರೆ
ಪೊಡವಿಯಲಿ ಜೀವಿಸಲಾರೆ
ತಡೆಯದೆ ನಿಮಿಷವು ಯುಗವಾಗುತಿದೆ
ಕಮಲನಾಭ ವಿಠ್ಠಲ ಕಾಯೊ"[೬೪]

ಎಂದೆನುತಾ ತಾನುಟ್ಟ ಭಾರಿ ಬೆಲೆಬಾಳುವ ಪೀತಾಂಬರಗಳನ್ನು, ಮುತ್ತು ರತ್ನಗಳಾಭರಣಗಳನ್ನು ಹುಚ್ಚು ಹಿಡಿದವನಂತೆ ಅತ್ತಿತ್ತ ಬೀಸಾಡಿದನು. ಇದೇ ವೇಳೆ ಶ್ರೀಹರಿಯು ಬಡಬ್ರಾಹ್ಮಣನಾಗಿ ಬಾಲಕ ಸಹಿತ ಬರುತ್ತಿರುವುದನ್ನು ಕಂಡು ಇಡೀ ಪುರಂದರಗಡದ ಜನರೆಲ್ಲರೂ ಆಶ್ಚರ್ಯಪಟ್ಟರು. ನಾಯಕರು ಬ್ರಾಹ್ಮಣ ರೂಪದ ಶ್ರೀಹರಿಯ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಗೈದು ವಂದನೆ ಸಲ್ಲಿಸಿ ಧನ್ಯರಾದರು. ಕಣ್ತೆರೆದು ನೋಡಲು ಕ್ಷಣಾರ್ದದಲ್ಲಿಯೆ ಶ್ರೀಹರಿ ಅಂತರ್ಧಾನನಾದನು. ಆಗ ನಾಯಕರು ಹಿಂದಿನ ಎಲ್ಲ ಘಟನೆಗಳನ್ನು ನೆನಪಿಸಿಕೊಂಡು ದು:ಖಪಡುವರು.

ಶ್ರೀಹರಿಯನ್ನು ಸ್ತುತಿಸುತ್ತಾ ಆತನ ಚಿಂತೆಯಲ್ಲಿಯೆ ಪೂರ್ಣ ಮುಳುಗಿದ ನಾಯಕರು ಪಟ್ಟಣದ ಬೀದಿಬೀದಿಗಳಲ್ಲೆಲ್ಲಾ ಹೆಂಡತಿ ಮಕ್ಕಳೊಂದಿಗೆ ಸಂಚರಿಸುತ್ತಾ

"ಕಾಪಾಡು ನೀ ಎನ್ನ ಕರುಣ ನಿಧಿಯೇ
ನೀ ಸಲುಹದಿರೆ ಎನ್ನ ಪೊರೆವರ್‍ಯಾರು
ಪಾಪಿಯಾದೆನೊ ನಿನ್ನ ಸ್ಮರಣೆಯ ಮರೆತು
ಕೋಪಿಸದೇ ನೀ ಎನ್ನ ಕಾಪಾಡು. . ."[೬೫]

ಎಂದು ಬೇಡುತ್ತಾ ಶ್ರೀಹರಿಯ ದಾಸನಾಗಿ ಪರಿವರ್ತಿತರಾದ ನಾಯಕರು 'ನಿನ್ನ ದಾಸನೆಂದು ಸ್ವೀಕರಿಸಿ ನನ್ನನ್ನು ಪಾಲಿಸು ಸರ್ವೇಶ' ಎಂದು ಹರಿಗೆ ತನ್ನನ್ನು ಅರ್ಪಿಸಿಕೊಳ್ಳುವರು. ಪುರಂದರಗಡದ ಬೀದಿಯಲ್ಲಿ ಕುಣಿದಾಡುತ್ತ ಬರುವ ನಾಯಕರನ್ನು ಕಂಡು ಪುರದ ಎಲ್ಲ ಜನರು ಬಾಲಕ ವೃದ್ಧರಾದಿಯಾಗಿ ಪರಮ ವೈರಾಗ್ಯವನ್ನು ಕೊಂಡಾಡಿದರು; ದಾಸರ ಜೋಳಿಗೆಗೆ ಭಿಕ್ಷೆಯನ್ನು ಹಾಕಿದರು. ನಾಯಕರು ಇಲ್ಲಿಯವರೆಗೆ ತಾವು ಸಂಪಾದಿಸಿದ ಸಂಪತ್ತನ್ನೆಲ್ಲ ಶ್ರೀಹರಿಗೆ ಸಮರ್ಪಿಸಿ ಎಲ್ಲ ಜನತೆಗೆ ದಾನ ಮಾಡಿದರು. ಹೆಂಡತಿ ಮಕ್ಕಳಸಹಿತ ಪಟ್ಟಣದ ಮಾರುತೇಶನ ಗುಡಿಯಲ್ಲಿ ಹರಿಸ್ಮರಣೆಯನ್ನು ಮಾಡುತ್ತ ಕುಳಿತರು. ಜನರು ನೀಡಿದ ಭಿಕ್ಷೆಯಿಂದ ಅತೀ ಆನಂದದಿಂದ, ಸಂತೃಪ್ತಿಯಿಂದ ಪ್ರಸಾದವನ್ನು ತಯಾರಿಸಿ ಸೇವಿಸುತ್ತಾ ಬದುಕು ಸಾಗಿಸಿದರು.

ಹೀಗೆ ದಾಸರು ಸತಿಸುತರಾದಿಯಾಗಿ ಶ್ರೀಹರಿಯ ಸ್ಮರಣೆಯಲ್ಲಿ ಕಾಲಕಳೆಯುತ್ತಿರಲು ಒಂದು ದಿನ ನಾಯಕರ ಕನಸಿನಲ್ಲಿ ಶ್ರೀಹರಿಯು ಪ್ರಸನ್ನನಾಗಿ

"ಪಂಪಾಕ್ಷೇತ್ರದಲ್ಲಿ ಚಕ್ರತೀರ್ಥ ಬಳಿಯ
ವ್ಯಾಸರಾಯರಲ್ಲಿ ದಾಸನಾಗು ಎಂದ"[೬೬]

ಮಾತುಗಳನ್ನು ಗ್ರಹಿಸಿದ ನಾಯಕರು, ಶ್ರೀಹರಿಯ ಅಪ್ಪಣೆಯ ಮೇರೆಗೆ ಹೆಂಡತಿ–ಮಕ್ಕಳ ಜೊತೆಗೂಡಿ ಕಂತುಪಿತನನ್ನು ಸ್ಮರಿಸುತ್ತಾ ಹಂಪಿಯ ಕಡೆಗೆ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ಲಕ್ಷ್ಮೀಕಾಂತನ ಗುಣಗಳನ್ನು ಮನಸಾರೆ ಹೊಗಳುತ್ತಾ, ಬಲು ಭಕ್ತಿಯಲಿ ಕುಣಿದಾಡುತ್ತಾ, ವೈಕುಂಠಕ್ಕೆ ಪ್ರಯಾಣ ಮಾಡುವ ಹಾಗೆ ಪಂಪಾಪುರಕ್ಕೆ ಸಮೀಪಿಸಿದರು. ದೂರದಿಂದಲೇ ಪಂಪಾಪುರ ಕಾಣಲು ಎಲ್ಲರೂ ತಲೆಬಾಗಿ ವಂದಿಸಿದರು.

ಅತೀ ಆತುರದಿಂದ ನಾಯಕರು ಹಂಪಿಯನ್ನು ಪ್ರವೇಶಿಸಿ ಶ್ರೀಗುರುಗಳಿರುವ ಸ್ಥಳಕ್ಕೆ ಬಂದರು. ವ್ಯಾಸರಾಯರನ್ನು ಕಂಡು ಅಪಾರ ಸಂತೋಷಪಟ್ಟರು. ಗುರುಗಳು ಪಾಠ–ಪ್ರವಚನಗಳನ್ನು ಮುಗಿಸಿ, ನಾಯಕರನ್ನು ಮಾತೃವಾತ್ಸಲ್ಯ ಭಾವದಿಂದ ಮಾತನಾಡಿಸಿ, ನಿಮ್ಮ ಮನದ ಬಯಕೆಯನ್ನು ಅರಿತಿರುವೆ. ನಿಮ್ಮನು ಶ್ರೀಹರಿಯು ಬಹು ರೀತಿಯಲ್ಲಿ ಪರೀಕ್ಷಿಸಿರುವನು. ಈಗ

"ಪರಿಪಕ್ವವಾಗಿರುವುದು ನಿಮ್ಮ ಮನ
ಪರಮಾತ್ಮನ ಧ್ಯಾನವ ಮಾಡುವುದಕೆ"[೬೭]

ಎಂದು ನಾಯಕರಿಗೆ ಹೇಳುವರು. ಈ ಮಾತುಗಳನ್ನು ಕೇಳಿದ ನಾಯಕರು 'ಇವರೇ ನನ್ನ ಪರಮ ಗುರುಗಳು' ಎಂದು ಒಪ್ಪಿಕೊಂಡರು. 'ಶ್ರೀ ಹರಿಯೇ ನೀ ಒಲಿದ ಮೇಲೆ ಯಾವುದರ ಕೊರತೆ ಎನಗೆ' ಎಂದು ಮನದಲ್ಲಿ ಅಂದುಕೊಂಡರು.

ಮರುದಿನ ವ್ಯಾಸರಾಯರು ಶಿಷ್ಯನಾದ ನಾಯಕರನ್ನು ಸೂರ್ಯೋದಯದ ಸುಸಮಯದಲ್ಲಿ ಕರೆದು ನೀನು ಹರಿದಾಸನಾಗೆಂದು ಆಶೀರ್ವದಿಸಿ

"ಪರಮ ಭಕ್ತನೀನಹುದೆಂದು
ಪುರಂದರದಾಸರೆಂದೆನುತಲಿ ಕರೆದರು"[೬೮]

ಪುರಂದರಗಡದಿಂದ ಬಂದ ನೀನು ಶ್ರೇಷ್ಠ ಭಕ್ತನಾಗಿ ಇಂದು ರೂಪಗೊಂಡಿರುವೆ. ಆದ್ದರಿಂದ ಇನ್ನು ಮುಂದೆ ನೀನು 'ಪುರಂದರದಾಸ' ನೆಂದು ನಾಯಕರನ್ನು ಹೆಸರಿಸಿ

"ಹರಿದಾಸ ನೀನಾಗಿಯೆ ನಿಶ್ಚಯ
ಹರಿದಾಸ ವೃಂದವ ಕೂಡಿ
ಪುರಂದರ ವಿಠ್ಠಲನೆನ್ನುತ ಪಾಡುತ ಶ್ರೀ
ಕಮಲನಾಭ ವಿಠ್ಠಲನೆನ್ನುತಲಿ"[೧೯]

ಪುರಂದರದಾಸರಿಗೆ ವ್ಯಾಸರಾಯರು 'ಪುರಂದರ ವಿಠ್ಠಲ' ವೆಂಬ ಅಂಕಿತವನ್ನು ನೀಡಿ, ಹರಿದಾಸ ಸಮೂಹದಲ್ಲಿ ದೇದಿಪ್ಯಮಾನವಾಗಿ ಬೆಳಗುವಂತೆ ಪ್ರೀತಿಯಿಂದ ಹರಸಿದರು.

ಗುರುಗಳಿಂದ ಅಂಕಿತ ಪಡೆದ ಪುರಂದರದಾಸರು ಅತ್ಯಂತ ಶ್ರದ್ಧೆಯಿಂದ ಅಧ್ಯಯನದಲ್ಲಿ ತೊಡಗಿದರು. ಮನದ ದುಗುಡುಗಳಿಗೆ ಪರಿಹಾರವನ್ನು ಅರಿತುಕೊಳ್ಳಲು ಪ್ರಯತ್ನಿಸಿದರು. ಹೀಗೆ ಪುರಂದರದಾಸರು ಗುರುವಿನ ಸನ್ನಿಧಾನದಲ್ಲಿ ನಿತ್ಯ ಬೆಳೆಯುತಿರಲು ಆ ರಾಜಧಾನಿಯಲ್ಲಿ ರಾಜನು ಇದೇನು ಸೋಜಿಗವ ನೋಡುವೆನೆಂದು ತಕ್ಷಣ ಬಂದು ಶ್ರೀಹರಿ ಸೇವಕರಿಗೆ ಎರಗಿ ರಾಜೀವಾಕ್ಷನ ಚರಿತೆಯನ್ನು ಅತೀ ಭಕ್ತಿಯಿಂದ ಕೇಳಿದನು. ಪುರಂದರದಾಸರ ಭಕ್ತಿಯನ್ನು ಅರಿತುಕೊಂಡ ರಾಜನು ಕೊಂಡಾಡಿದನು. ರಾಜನ ಈ ಮಾತುಗಳನ್ನು ಕೇಳಿ ಎಲ್ಲ ಪಂಡಿತರು ಕುಪಿತಗೊಂಡರು. ಆಗ ಎಲ್ಲ ಪಂಡಿತರು ಒಂದಾಗಿ ಇದನ್ನು ಖಂಡಿಸುವರು. ಪುರಂದರದಾಸರನ್ನು ವಿವಿಧ ರೀತಿಯಲ್ಲಿ ನಿಂದಿಸಿ ಹೀಯಾಳಿಸಿದರು.

ಮುಂದಿನ ಭಾಗದಲ್ಲಿ ಜೀವೂಬಾಯಿಯು ಪುರಂದರದಾಸರ ಕೆಲವು ಪವಾಡಗಳನ್ನು ಅತಿ ಭಕ್ತಿಯಿಂದ ವರ್ಣಿಸಿದ್ದಾಳೆ. ವ್ಯಾಸರಾಯರು ತಾವು ಮಾಡುತ್ತಿರುವ ಪೂಜೆಯನ್ನು ಅರ್ಧಕ್ಕೆ ಬಿಟ್ಟು ತೆರಳಿದರು. ಆಗ ಪುರಂದರದಾಸರು ಶ್ರೀಶಗೆ ಕಲ್ಗಚ್ಚು ಕುಡಿಯುವಂತೆ ಮಾಡುತ್ತಾರೆ. ಅಲ್ಲಿರುವ ಎಲ್ಲ ಜನರಿಗೆ ಹರಿಯ ಪಾರಮ್ಯ ಮತ್ತು ಹರಿಸ್ಮರಣೆಯ ಮಹಿಮೆಯನ್ನು ಪುರಂದರದಾಸರು ತಿಳಿಸುವರು.

ದುರಾಚಾರಿಯಾದ–

"ಮೈಲಾರಪ್ಪನ ಮಾನಭಂಗ ಮಾಡುತ
ಕೈವಲ್ಯಪದವಿಯ ಪಥ ತೋರಿದ ಮಹಿಮೆಯ"[೨೦]

ಮೈಲಾರಪ್ಪನಲ್ಲಿ ತುಂಬಿದ ದುರಾಚಾರವನ್ನು ತೊಲಗಿಸಿ ಕೈವಲ್ಯ ಪದವಿಯ ಪಥದಲ್ಲಿ ಸಾಗುವಂತೆ ಮಾಡಿದರು.

ವ್ಯಾಸರಾಯರು ಪುರಂದರದಾಸರ ಗ್ರಂಥಗಳನ್ನು ವ್ಯಾಸಪೀಠದ ಮೇಲಿಟ್ಟು ಪೂಜಿಸಿದರು. ಎಲ್ಲ ಪಂಡಿತರು ಇದನ್ನು ದೂಷಿಸಿದರು. ಪೀಠದ ಮೇಲಿನ ಗ್ರಂಥಗಳನ್ನು ತೆಗೆದು ಬೀಸಾಡುವರು. ಆದರೆ ಅವು ಪುನ: ಬಂದು ಪೀಠದ ಮೇಲೆ ಕುಳಿತುಕೊಳ್ಳವವು. ಆಗ ಉಳಿದ ಎಲ್ಲ ಶಿಷ್ಯರು ಇವುಗಳನ್ನು ಪುರಂದರೋಪನಿಷತ್ತುಗಳೆಂದು ಗೌರವಿಸಿದರು.

ಒಂದು ಸಾರಿ ಗುರುಗಳು ಹಾಗೂ ಎಲ್ಲ ಶಿಷ್ಯರು ಕೂಡಿಕೊಂಡು ಅಧ್ಯಯನದಲ್ಲಿ ತೊಡಗಿದ್ದರು.

ಆಗ ದಾಸರು ತನ್ನ ವಸ್ತ್ರವನ್ನು ಕುಳಿತಲ್ಲಿಯೇ ಒರೆಸಿದರು. ಉಳಿದ ಶಿಷ್ಯರು ಪುರಂದರದಾಸರನ್ನು 'ದಾಸರೇ ಹೀಗೇಕೆ ಮಾಡಿದಿರಿ?' ಎಂದು ಕೇಳಲು

"ಶ್ರೀಧರನಾಲಯದಿ ದೇವರ ಮುಂದಿಹ
ಪರದೆಯು ಹತ್ತಲು ಒರೆಸಿದೆ ವಸನ"[೭೧]

ವೆಂದು ಉತ್ತರಿಸಿದರು. ಆಗ ಶಿಷ್ಯರು ದೂತರನ್ನು ಕರೆಯಿಸಿ ಇದು ನಿಜವೇ ಎಂದು ನೋಡಿಕೊಂಡು ಬರಲು ಕಳುಹಿಸಿದರು. ದೂತರು ತ್ವರಿತದಿಂದ ಬಂದು ನೋಡಲು ಅಲ್ಲಿಯ ಪರದೆ ಸುಟ್ಟಿರುವುದು ನಿಜವೆಂದು ತಿಳಿದು, ಎಲ್ಲರಿಗೂ ಪುರಂದರದಾಸರು ಕುಳಿತಲ್ಲಿಯೇ ಉರಿಯ ನಿಲ್ಲಿಸಿ ದೇವಾಲಯವನ್ನು ರಕ್ಷಿಸಿದ ಪವಾಡವನ್ನು ತಿಳಿಸಿದರು.

ಈ ರೀತಿಯಾಗಿ ವಿಧವಿಧ ಲೀಲೆ ಮತ್ತು ಪವಾಡಗಳನ್ನು ತೋರುತ್ತಾ ಪುರಂದರದಾಸರು ಗುರುಗಳ ಮತ್ತು ಇನ್ನುಳಿದ ಶಿಷ್ಯರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾದರು. ನಿರಂತರವಾಗಿ ಹರಿಯ ಗುಣಗಳನ್ನು ಕೊಂಡಾಡುತ್ತ, ಭಾಗವತೋತ್ತಮರ ದಿವ್ಯ ಮಹಿಮೆಗಳನ್ನು ಹಾಡಿನ ರೂಪದಲ್ಲಿ, ಸರಳ ಸುಳಾದಿಗಳಲ್ಲಿ ಬರೆದರು. ಶ್ರೀ ಪಾಂಡುರಂಗನ ದಯೆಯಿಂದ ಪುರಂದರದಾಸರು ಕಾಲಕಾಲಕ್ಕೆ ವಿವಿಧ ಮಹಿಮೆಗಳನ್ನು ತೋರಿಸುತ್ತಾ ಹಂಪಿಯಿಂದ ಪಂಡರಪುರಕ್ಕೆ ಬಂದು ನೆಲೆಸಿದರು. ಅಲ್ಲಿನ ಎಲ್ಲ ಶಿಷ್ಯರ ವಂದನೆ ಮತ್ತು ಗೌರವಗಳಿಗೆ ದಾಸರು ಪಾತ್ರರಾಗಿದ್ದರು.

ಒಂದುಸಾರಿ ಪಂಡರಪುರದಲ್ಲಿ ಮಲಗಿರುವಾಗ ರಾತ್ರಿಯಲ್ಲಿ ದೇಹಬಾಧೆಯ ಸಲುವಾಗಿ ದಾಸರು ಹೋಗುವಾಗ ತನ್ನ ಓರ್ವ ಶಿಷ್ಯನಿಗೆ ನೀರು ತರಲು ಕಳುಹಿಸಿದರು. ಆದರೆ ಶಿಷ್ಯ ನಿದ್ರೆಯಲ್ಲಿ ಮುಳುಗಿದ್ದ. ಪಾಂಡುರಂಗನೇ ಶಿಷ್ಯನಾಗಿ ತಡಮಾಡಿ ನೀರು ತೆಗೆದುಕೊಂಡು ಬಂದ. ಆಗ ಪುರಂದರದಾಸರು ಶಿಷ್ಯನ ಮೇಲೆ ಅತಿ ಕೋಪಗೊಂಡು

"ತಡದೆ ಯಾತಕೆ ಇಷ್ಟು ಒಡನೆ ಬಾರದೆ ನೀನು
ಬಡಿವೆನೋಡೆನುತಲಿ ಬಡಿಯೆ ಗಿಂಡಿಯಲಿ
ಪೆಟ್ಟು ತಿನ್ನುತ ವಿಠ್ಠಲ ನೆಟ್ಟನೆ ಗುಡಿಪೊಕ್ಕ
ಸೃಷ್ಟಿ ಪಾಲಕ ನಿಂತ ಇಟ್ಟಿಗೆ ಮೇಲೆ"[೭೨]

ಕೈಯಲ್ಲಿಯ ಗಿಂಡಿಯಿಂದ ಹೊಡೆಯುವನು. ಆಗ ಶಿಷ್ಯನ ವೇಷದ ಪಾಂಡುರಂಗನು ಮರುಮಾತನಾಡದೆ ಗುಡಿಯೊಳಗೆ ಹೋಗಿ ನಿಂತನು. ದಾಸರು ಒಳಗೆ ಬಂದು ನೋಡಲು ಶಿಷ್ಯನು ಗಾಢ ನಿದ್ರೆಯಲ್ಲಿ ಮುಳುಗಿಹೋಗಿದ್ದನು. ಆಗ ಮತ್ತೆ ದಾಸರು ಸಿಟ್ಟಿನಿಂದ

“ನೀರನು ತಾರೆಂದೆನುತಲಿ ಪೇಳಿರೆ
ಆಲಸ್ಯದಿ ತಂದಿತ್ತಿರುವಿ”[೭೩]

ಬೇಗನೆ ನೀರು ತಾರದೆ, ನೀರು ತಂದ ಗಿಂಡಿಯಿಂದ ಹೊಡೆಯಲು ಏನೂ ತಿಳಿಯದಂತೆ ಬಂದು ಇಲ್ಲಿ ಮಲಗಿರುವೆ ಏನು? ನಿನ್ನಂಥ ಸೇವಕ ಶಿಷ್ಯನಿಂದ ಯಾವ ಕಾರ್ಯವೂ ಆಗುವುದಿಲ್ಲವೆಂದು ಗದರಿಸುವರು.

ಇದರ ಸೇಡನು ತೀರಿಸಿಕೊಳ್ಳಲು ಪಾಂಡುರಂಗನು ಪುರಂದರದಾಸರ ವೇಷವನ್ನು ಧರಿಸಿಕೊಂಡು ರಾತ್ರಿ ಆ ಪಟ್ಟಣದ ವೇಶ್ಯೆಯ ಮನೆಗೆ ಹೋಗುವನು. ವೇಶ್ಯೆಯು ದಾಸರನ್ನು ಅಪಾರ ಭಕ್ತಿಯಿಂದ ಸಿಂಗರಿಸಿ, ಪೂಜಿಸಿ ‘ಇಂದು ನಾನು ಧನ್ಯಳಾದೆನು’ ಎಂದು ಬಹು ವಿಧದಿಂದ ದಾಸರನ್ನು ಪ್ರಾರ್ಥಿಸಿದಳು. ಆಗ ದಾಸರ ರೂಪದ ವಿಠ್ಠಲನು

‘ಕೇಳಲೆ ಸುಂದರಿ ಪೇಳುವೆ ಮಾತನು
ನೀಡುವೆ ನಿನಗೀ ಕಂಕಣವಾ
ಜೋಡಿನ ಕಂಕಣ ನೀಡುವೆ ನಾಳೆಯೆ
. . . . . . . . . . . . . . . . . .”[೭೪]

ಪ್ರೀತಿಯಿಂದ ಆ ವೇಶ್ಯೆಗೆ ಹೇಳುತ್ತಾ ಅವಳ ಕೈಯ್ಗೆ ಕಂಕಣವನ್ನು ನೀಡಿ ತನ್ನ ಸ್ಥಳಕ್ಕೆ ತೆರಳುವನು. ಬೆಳಗಾಗಲು ಅರ್ಚಕನು ದೇವಾಲಯದ ಬಾಗಿಲನ್ನು ತೆರೆಯುವನು. ವಿಠ್ಠಲನ ಕೈಯಲ್ಲಿ ಕಂಕಣ ಇಲ್ಲದಿರುವುದನ್ನು ಕಂಡು ಭಯಗೊಂಡನು. ಮುಂದೇನು ಮಾಡುವುದೆಂದು ತಿಳಿಯದೆ ಅರ್ಚಕನು ಸುಮ್ಮನೆ ಕುಳಿತಿರಲು ಆ ವೇಶ್ಯೆಯು ವಿಠ್ಠಲನ ದರ್ಶನಕ್ಕಾಗಿ ಕೈಯಲ್ಲಿ ಕಂಕಣವನ್ನಿಟ್ಟುಕೊಂಡು ಬರುವಳು. ಸಂದೇಹದಿಂದ ಅಲ್ಲಿಯೇ ಕುಳಿತಿದ್ದ ಆ ಅರ್ಚಕ ‘ಇದನ್ನು ನಿನಗೆ ಯಾರು ಕೊಟ್ಟರು’ ಎಂದು ಕೇಳುವನು. ಅವಳು ‘ಇದು ನನ್ನದೇ’ ಎಂದು ನಡುಗುವಳು. ಹೊಡೆದರೆ ಸತ್ಯವನ್ನು ಬಾಯ್ಬಿಡುತ್ತಾಳೆಂದು ಹೆದರಿಸಲು ಆ ವೇಶ್ಯೆಯು.

“ . . . . . . . . . . . . . .
ಬಲ್ಲಿದ ಪುರಂದರ ದಾಸರು ತಂದಿ
ತ್ತರು ಇದು ನಿಶ್ಚಯವು
ಮತ್ತೊಂದೀದಿನ ತರುವೆನು ಎನುತಲಿ
ಸತ್ಯದಿ ಪೇಳಿಹರು
. . . . . . . . . . . . . . . . .”[೭೫]

ಹೀಗೆ ಸತ್ಯವನ್ನು ನುಡಿಯುವಳು. ಅಲ್ಲಿ ಸೇರಿರುವ ಎಲ್ಲರೂ ಈ ದಾಸರು ಮೋಸಗಾರರು ಇವರನ್ನು

ಯಾರೂ ನಂಬಬೇಡಿರಿ ಈತನು ಕೆಟ್ಟ ಕಾರ್ಯವನ್ನು ಎಸಗಿದ್ದಾನೆ. ಆದ್ದರಿಂದ ಇವನನ್ನು ಕಂಬಕ್ಕೆ ಕಟ್ಟಿ ಹೊಡೆಯಬೇಕೆಂದು ನಿರ್ಧರಿಸುವರು. ಎಲ್ಲರೂ

"ಆಹಾ ! ನೋಡಿರಿ ಹರಿದಾಸರನು
ಯಾರಿಗು ತಿಳಿಸದೆ ಪೋಗುತಲಿ
ಮಾರಪಿತನ ಹಸ್ತದಾಭರಣವನು
ನಾರಿಗೆ ತಂದಿತ್ತನು ಧೀರ"[೨೬]

ಎನ್ನುತ ಪುರಂದರದಾಸರನ್ನು ತೀಕ್ಷ್ಣವಾದ ಚುಚ್ಚುಮಾತುಗಳಿಂದ ಅವಮಾನ ಮಾಡುತ ಹೊಡೆಯಲಾರಂಭಿಸಿದರು. ಈ ವೇಳೆಯಲ್ಲಿ ಶ್ರೀಹರಿಯು ದಾಸರ ವೇಷದಲ್ಲಿ ಬಂದು ಒಬ್ಬ ಬಾಲಕನಿಗೆ

"ದಾಸರಾಯರ ರೂಪದಿಂದಲಿ ನಾ ಪೋಗಿ
ವೇಶ್ಯೆಯಳಿಗಿತ್ತೆ ಕಂಕಣವನೊಂದನು. .."[೨೭]

ಎಂಬ ನೈಜ ವೃತ್ತಾಂತವನ್ನು ಎಲ್ಲ ಸೇವಕರಿಗೆ ಹೇಳುತ "ಭಕ್ತನನ್ನು ಕಟ್ಟಿದ ಈ ಕಂಬವನ್ನು ನೀವೆಲ್ಲರು ಭಕ್ತಿಯಿಂದ ದಾಸರ ಸ್ತಂಭವೆಂದು ಪೂಜಿಸಿ ಪುಣ್ಯವಂತರಾಗಿ" ಎಂದು ಹರಸುವನು. ಪುರಂದರದಾಸರ ಹಾಗೆಯೇ ಆತನ ಹೆಂಡತಿಯೂ ಶ್ರೀಹರಿಯನ್ನು ಆರಾಧಿಸಿ ಧನ್ಯತೆಯನ್ನು ಹೊಂದುವಳು.

ದಾಸವರೇಣ್ಯರಾದ ಪುರಂದರದಾಸರು ತಮ್ಮ ಬದುಕಿನುದ್ದಕ್ಕೂ ಶ್ರೀಹರಿಯನ್ನು ಸ್ತುತಿಸುತ್ತಾ, ಆರಾಧಿಸುತ್ತಾ ಕಾಲಕಳೆವರು. ಮಕ್ಕಳನ್ನು ತಿದ್ದುವ ರೀತಿಯಲ್ಲಿ ಶಿಷ್ಯರನ್ನು, ಸಮಾಜವನ್ನು ತಿದ್ದಿ ಸರಿಯಾದ ದಾರಿಯಲ್ಲಿ ಕ್ರಮಿಸುವಂತೆ ಮಾರ್ಗದರ್ಶನ ಮಾಡುವರು. ಕಲಿಯುಗದಲ್ಲಿ ಜನರು ಮುಕ್ತಿಯನ್ನು ಗಳಿಸುವ ಮಾರ್ಗವನ್ನು ತಿಳಿಸುವರು.

ಒಂದು ಲಕ್ಷ ಇಪ್ಪತ್ತೈದು ಸಾವಿರ ತೀರ್ಥ ಕ್ಷೇತ್ರಗಳ ಮಹಿಮೆ. ಶ್ರೀಮದ್ವಾಚಾರ್ಯರ ಮಹಿಮೆ ತಂತ್ರಸಾರ, ತಾರತಮ್ಯ ಐದು ಸಾವಿರ, ತೊಬತ್ತು ಸಾವಿರ ಬ್ರಹ್ಮಲೋಕ, ಕೈಲಾಸ, ದಿಕ್ಪಾಲಕರ ಲೋಕಗಳ ವರ್ಣನೆ. ತೊಂಬತ್ತು ಸಾವಿರ ಪುರಾಣ ಕಥೆಗಳ ಸಾರ. ದೇವತೆಗಳ ಮಹಾತ್ಮೆ ಮೂರ್ತಿ ಕಲ್ಯಾಣ ಚರಿತ್ರೆಗಳು ಅರವತ್ತು ಸಾವಿರ. ಅಹ್ನಿಕಪದ್ದತಿ ಏಕಾದಶಿ ಜಯಂತಿ ನಿರ್ಣಯ ಕುರಿತು ಅರವತ್ತು ಸಾವಿರ ರಚನೆ. ಅರವತ್ನಾಲ್ಕುಸಾವಿರ ಸುಳಾದಿಗಳು, ಇಪ್ಪತ್ತೆರಡುಸಾವಿರ ಹರಿ ಕೀರ್ತನೆಗಳು. ನರಹರಿಯ ದಯದಿಂದ ನಾಲ್ಕು ಲಕ್ಷ, ಯದುಕುಲೇಶನ ದಯದಿಂದ ಎಪ್ಪತ್ತೈದು ಸಾವಿರ ರಚನೆಗಳನ್ನು ರಚಿಸಿ ಪುರಂದರದಾಸರು ಶ್ರೀಹರಿಗೆ ಅರ್ಪಿಸಿದರು. (ನೋಡಿ ಸ.ದಾ.ಸಾ.ಸಂ.೧೮ ಭಾಗ ೨ ನಿ.ಜೀ.ಕೀ.ಪು.ಸಂ.೩೮೦) ಹೀಗೆ ಜೀವೂಬಾಯಿಯು ಪುರಂದರದಾಸರ ಕೀರ್ತನೆಗಳ ಸಂಖ್ಯೆಯನ್ನು ತಿಳಿಸಿರುವಳು. ಈ ಹಿನ್ನೆಲೆಯಲ್ಲಿ ಇನ್ನೂ ಬಹಳಷ್ಟು ಪುರಂದರದಾಸರ ರಚನೆಗಳು ನಮಗೆ ಲಭ್ಯವಾಗಬೇಕಿದೆ.

ಇಂಥ ದಾಸರ ಚರಿತೆಯನ್ನು ಕೇಳುತ್ತಾ ನಾರದರು ತಂಬೂರರು ಹಾಡಲು ಕಂಭಾದಿಗಳೆಲ್ಲರು ಪ್ರೀತಿಯಿಂದ ಕುಣಿದಾಡುವರು.

"ಯತಿಗಣ ಪ್ರಾಸನೇಮಗಳನರಿಯದೆನ್ನನು
ಹಿತದಿ ಪಾಲಿಸಿ ತಪ್ಪುಗಳ ತಿದ್ದಿ ಆದರಿಸಿ
. . . . . . . . . . . . . . . . . . . . .
ಸುತರ ತೆರದಿ ಪಾಲಿಸಿ ರಕ್ಷಿಸುವುದೆಂದು
ನುತಿಸಿ ನಿಮ್ಮಡಿಗಳಿಗೆ ಕರ ಮುಗಿದು ಪ್ರಾರ್ಥಿಪೆನು"[೭೮]

ಎನ್ನುತ ಎಲ್ಲ ಬುದ್ಧಿವಂತರಲ್ಲಿ, ಓದುಗರಲ್ಲಿ ಜೀವಮ್ಮಳು ಸಿರಬಾಗಿ ಬೇಡಿಕೊಳ್ಳುವಳು. ಈ ಚರಿತ್ರೆಯ ಫಲಶ್ರುತಿಯ ಕುರಿತು 'ಯಾರು ಈ ಚರಿತೆಯನು ಕೊಂಡಾಡುತ ನಲಿದಾಡುವರೋ ಅವರ ಮನದಲ್ಲಿ ಶ್ರೀಹರಿಯು ಸದಾಕಾಲ ನಲಿದಾಡುವನು' ಎಂದಿರುವಳು. ಈ ಚರಿತ್ರೆಯಲ್ಲಿ ಜೀವೂಬಾಯಿ ಪುರಂದರದಾಸರ ತಾಯಿಯ ಹೆಸರು ಮತ್ತು ಮಕ್ಕಳ ಹೆಸರುಗಳನ್ನು ಎಲ್ಲಿಯೂ ಪ್ರಸ್ತಾಪಿಸಿಲ್ಲ.

ಮಂಗಲಪದ್ಯದೊಂದಿಗೆ ಕೃತಿ ಸಮಾಪ್ತಿಯಾಗುತ್ತದೆ. ಇಡೀ ಚರಿತ್ರೆಯು ಓದುಗರ ಮುಂದೆ ಪುರಂದರದಾಸರ ಬದುಕಿನ ಘಟನೆಗಳನ್ನು ಕಣ್ಣಿಗೆ ಕಟ್ಟುವಂತೆ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ವೈಕುಂಠದಿಂದ ಆರಂಭಗೊಂಡು, ಭೂಲೋಕದಲ್ಲಿ ವಿಸ್ತರಿಸಿಕೊಂಡು ಮತ್ತೆ ವೈಕುಂಠದಲ್ಲಿ ಸೇರಿ ಕತೆ ಮುಗಿಯುತ್ತದೆ. 'ದಾಸರೆಂದರೆ ಪುರಂದರದಾಸರು' ಎಂಬ ನಿತ್ಯಸತ್ಯವನ್ನು ಜೀವಮ್ಮ ಈ ಕೃತಿ ಮೂಲಕ ಮನಗಾನಿಸಿದ್ದಾಳೆ.

ಪುರಂದರದಾಸರು ಕೀರ್ತನಸಾಹಿತ್ಯದ 'ದಾಸವರೇಣ್ಯರೆಂದು' ಹೆಸರಾದವರು. ಕವಯಿತ್ರಿ ಜೀವೂಬಾಯಿಯವರು ತನಗಿಂತ ಹಿಂದಿನ ಶ್ರೇಷ್ಠ ಕೀರ್ತನಕಾರರ ಚರಿತ್ರೆಯನ್ನು ಹೇಳುವ ಮೂಲಕ 'ಕವಿಗೆ ಕವಿ ಮುನಿವನು' ಎಂಬ ಮಾತನ್ನು ಹುಸಿಗೊಳಿಸಿದ್ದಾಳೆ. ಈ ಚರಿತ್ರೆಯನ್ನು ಬರೆಯುವ ಮೂಲಕ ಜೀವಮ್ಮ ಪುರಂದರದಾಸರಿಗೆ ಗೌರವ ಸಲ್ಲಿಸಿರುವಳು. ಇದು ಓರ್ವ ಕವಿ ಮತ್ತೋರ್ವ ಕವಿಗೆ ಗೌರವ ಸಲ್ಲಿಸಬೇಕೆಂಬ ಅಂಶವನ್ನು ತಿಳಿಸುತ್ತದೆ. ಈ ಭೂಮಿಯ ಮೇಲೆ ಎಂಥ ಶ್ರೀಮಂತನಿದ್ದರೂ ಆತನಿಗೆ ನೆಮ್ಮದಿ ದೊರೆಯದು. ಹಣವಿದ್ದಾಗ ದಾನ, ಧರ್ಮಗಳನ್ನು ಮಾಡಬೇಕು. ಈ ಮೂಲಕ ಮನಸ್ಸಿಗೆ ನೆಮ್ಮದಿಯನ್ನು ಕಂಡುಕೊಳ್ಳಬೇಕು. ತನ್ನ ಬದುಕಿನಲ್ಲಿ ಅಪಾರ ಶ್ರೀಮಂತಿಕೆಯಿಂದ ಬೀಗುತ್ತಿರುವ ವೆಂಕಟಪ್ಪನಿಗೆ ನೆಮ್ಮದಿಯಿರಲಿಲ್ಲ. ಎಷ್ಟೇ ಗಳಿಸಿದರೂ ಇನ್ನೂ ಗಳಿಸಬೇಕೆಂಬ ಧನಲೋಭ ಆತನನ್ನು ಕಾಡುತ್ತಿತ್ತು. ಹೆಂಡತಿಯ 'ಮೂಗುತಿ' ದಾನದ ಮೂಲಕ ಮನ ಪರಿವರ್ತನೆಗೊಂಡ ವೆಂಕಟಪ್ಪ ಪುರಂದರದಾಸನಾಗಿ ತನ್ನೆಲ್ಲ ಆಸ್ತಿಯನ್ನು ತೊರೆದು ಪರಮಾತ್ಮನನ್ನು ಕಂಡು ಪರಮಾನಂದ ಹೊಂದುತ್ತಾನೆ. ಇಂದಿಗೂ ಬಹಳಷ್ಟು

ಜನ ಆಸ್ತಿಯ ಸಂಪಾದನೆಯಲ್ಲಿಯೇ ತಮ್ಮ ಜೀವನವನ್ನು ಕಳೆಯುತ್ತಿದ್ದಾರೆ. ಇದರಿಂದ ಮನಸ್ಸಿನ ನೆಮ್ಮದಿಯನ್ನು ಕಳೆದುಕೊಂಡಿದ್ದಾರೆ. ಆಸ್ತಿ, ಅಧಿಕಾರ ಮತ್ತು ಅಂತಸ್ತುಗಳಿಂದ ನೋವು ದೊರೆಯುತ್ತದೆ ಹೊರತು, ಆನಂದ ದೊರೆಯದು. ಇಂಥ ಲೋಭಿ ಜನರಿಗೆ ಈ ಕೃತಿಯು ದಾನ, ಧರ್ಮವನ್ನು ಮಾಡುವ ಮೂಲಕ ತಮ್ಮ ಬದುಕಿನಲ್ಲಿ ನೆಮ್ಮದಿ ಮತ್ತು ಶಾಂತಿಯನ್ನು ಪಡೆದುಕೊಳ್ಳಲು ಸಾಧ್ಯವೆಂಬ ಸತ್ಯವನ್ನು ತಿಳಿಸುತ್ತದೆ.

ದಾಸಸಾಹಿತ್ಯದ ಚರಿತ್ರೆಯಲ್ಲಿ ಈ ವರೆಗೆ ಪುರಂದರ ದಾಸರನ್ನು ಕುರಿತು ಕೃತಿ ರಚನೆಯಾಗಿರಲಿಲ್ಲ. ವಚನ ಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ, ಬಸವಣ್ಣನವರ ನಂತರ ಬಂದ ಹಲವು ಕವಿಗಳು ಅವರನ್ನು ಕುರಿತು ಬಸವರಾಜ ದೇವರ ರಗಳೆ(ಹರಿಹರ), ಬಸವಪುರಾಣ (ಭೀಮ ಕವಿ), ಸಿಂಗಿರಾಜ ಪುರಾಣ (ಸಿಂಗಿರಾಜ), ವೃಷಭೇಂದ್ರ ವಿಲಾಸ(ಷಡಕ್ಷರದೇವ) ಕೃತಿ ರಚಿಸಿದಂತೆ ಪುರಂದರ ದಾಸರನ್ನು ಕುರಿತು ಕೃತಿ ರಚಿಸಿದವರಲ್ಲಿ ನಿಡಗುರುಕಿ ಜೀವೂಬಾಯಿ ಮೊದಲಿಗಳು. ಪುರಂದರದಾಸರ ಜೀವನ ಚರಿತ್ರೆಯನ್ನು ಮುಕ್ತ ಛಂದಸ್ಸಿನಲ್ಲಿ ಬರೆದಿದ್ದಾಳೆ. ಇದು ಜೀವೂಬಾಯಿಯವರ ಹೆಚ್ಚುಗಾರಿಕೆಯಾಗಿದೆ. ಮುಂದೆ ಬರುವಂತಹ ಪುರಂದರ ದಾಸರ ಬಗೆಗಿನ ಕೃತಿಗಳಿಗೆ ಇದು ಆಕರವಾಗಬಲ್ಲುದಾಗಿದೆ. ಹೀಗೆ ಜೀವೂಬಾಯಿಯವರಿಂದ ಸಾಹಿತ್ಯ ಪುನರ್ ಸೃಷ್ಟಿ ನಡಿಯಿತು.

### ೫.೬ – ಶ್ರೀಹರಿ ಮಾನಸ ಪೂಜಾ

ಈ ಕೃತಿಯನ್ನು ತಮ್ಮ ತಾಯಿ ಮತ್ತು ಅಜ್ಜಿಯರು ಹಾಡುತ್ತಿದ್ದ ಹಾಡನ್ನು ಕೇಳಿ ಅದನ್ನೇ ಆಧಾರವಾಗಿಟ್ಟುಕೊಂಡು ರಚಿಸಿರುವುದಾಗಿ ಜೀವೂಬಾಯಿ ಹೇಳಿಕೊಂಡಿದ್ದಾಳೆ.

ಶ್ರೀಹರಿಯ ಪೂಜೆಯ ವ್ಯವಸ್ಥಿತವಾದ ಕ್ರಮವನ್ನು ಕವಯಿತ್ರಿ ಇದರಲ್ಲಿ ಅತ್ಯಂತ ಭಕ್ತಿ ಮತ್ತು ಶ್ರದ್ಧೆಯಿಂದ ಪರಿಚಯಿಸಿದ್ದಾಳೆ. ಶ್ರೀಹರಿವಾಯುಗಳ ಆಶೀರ್ವಾದದಿಂದ ಸೌಮ್ಯನಾಮ ಸಂವತ್ಸರ ಅಧಿಕ ಆಷಾಢ ಮಾಸದ ಪೂರ್ಣಿಮೆ ಭಾನುವಾರ; ಅಂದರೆ ೨೬ನೇ ಜುಲೈ ೧೯೬೯ ರಂದು ಇದನ್ನು ಬರೆದುದಾಗಿ ಕೊನೆಗೆ ಹೇಳಿದ್ದಾಳೆ.

ತುಂಬು ಕುಟುಂಬದ ಗೃಹಿಣಿಯೋರ್ವಳು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡು ಮಾಡುವ ಹರಿ ಪೂಜಾ ವಿಧಾನ ಹೀಗಿದೆ. ಉದಯ ಕಾಲದಲ್ಲಿ ಎದ್ದು ನದಿಯ ಸ್ನಾನಕೆ ಹೋಗಿ, ಎಲ್ಲ ಕಾರ್ಯಗಳನ್ನು ಮುಗಿಸಿಕೊಂಡು, ನದಿಯ ನಡುವೆ ಶ್ರೀಹರಿಯನ್ನು ಭಜಿಸುತ, ಹರಿಯ ರಥವನ್ನು ತೊಳೆಯುವೆನೆಂಬ ಭಾವದಿಂದ ಸ್ನಾನ ಮುಗಿಸಿ, ನದಿಯ ನೀರನು ತುಂಬಿಕೊಂಡು ವಿವಿಧ ಸ್ತೋತ್ರಗಳ ಹಾಡುತ ಮಂದಿರಕೆ ಬರುವಳು.

ಮಂಟಪವ ರಚಿಸಿ ಎಲ್ಲೆಡೆ ರಂಗೋಲಿ ಹಾಕುವಳು. ಇದರ ಮಧ್ಯೆ ಮುತ್ತುರತ್ನಗಳಿಂದ ಕೆತ್ತಿದ ಮಂಟಪ (ಮಂಚ) ವನ್ನು ಇಡುವಳು. ಸುತ್ತಲು ವಿವಿಧ ಮಾಟದ ಕಂಬಗಳನ್ನು ನಿಲ್ಲಿಸುವಳು. ಮುತ್ತು ರತ್ನಗಳಿಂದ ಶೋಭಿಸುವ ಪೀಠವನ್ನಿಟ್ಟು ಸುತ್ತಲು ಜಲ್ಲರಿ, ಚಿನ್ನದ ಪದಕಗಳನ್ನು ಕಟ್ಟುವಳು. ಜಂಬೀರ, ಕಿತ್ತಲೆ, ದಾಳಿಂಬೆ ಮುಂತಾದ ಹಣ್ಣುಗಳು; ಕೇದಗೆ, ಸಂಪಿಗೆ, ಮಲ್ಲಿಗೆ ಬಗೆಬಗೆಯ ಹೂಗಳು ತಳಿರು ತೋರಣಗಳಿಂದ ದೇವನನ್ನು ಭಜಿಸುವಳು. ಬಂಗಾರದ ಸಮಯ ಅಥವಾ ಸಮೇವು (ದೀಪ)ಗಳು, ಛತ್ರಿ-ಚಾಮರ, ತರತರದ ದೀಪಗಳು, ನಕ್ಷತ್ರ ಮಾಲೆಯಲ್ಲಿ ಶೋಭಿಸುತ್ತಿರುವ ದೇವನನ್ನು ಮಂಟಪದ ಮಧ್ಯೆ ಇರಿಸುವಳು. ಗಂಗೆ, ಗೋದಾವರಿ, ತುಂಗೆ, ಕಾವೇರಿ ಹಲವು ನದಿಗಳ ಉದಕದಿಂದ ಅಭಿಷೇಕ ಮಾಡುವಳು. ಶ್ರೀಹರಿಯ ವಿವಿಧ ರೂಪ, ಮೂರ್ತಿಗಳನ್ನು ಪೂಜಿಸಿ ಕೈಮುಗಿದು ಪ್ರಾರ್ಥಿಸುವಳು. ಸಪ್ತರ್ಷಿಗಳು ಆದರದಿಂದ ಆರಾಧಿಸುವ ಸರ್ವಜ್ಞನನ್ನು ಧ್ಯಾನಿಸುವಳು.

ಮುತ್ತಿನ ಸರ, ಕೌಸ್ತುಭಹಾರ, ರತ್ನ-ನಕ್ಷತ್ರ ಮಾಲೆ, ಸರಿಗಿ, ಏಕಾವಳಿ ಸರ, ಬೆರಳಿನ ಉಂಗುರು, ರತ್ನ ಖಚಿತ ಕರ್ಣ ಕುಂಡಲ, ಮುತ್ತು ರತ್ನ ಖಚಿತ ಕಿರೀಟ, ಹಣೆಗೆ ಕಸ್ತೂರಿ ತಿಲಕ, ವಿವಿಧ ಆಭರಣಗಳಿಂದ ಅಲಂಕರಿಸುವಳು. ಕೇತಕಿ, ಕರವೀರ, ಬಕುಳಿ, ಶಾವಂತಿ, ಜಾಜಿ, ಮಲ್ಲಿಗೆ, ಸಂಪಿಗೆ ಇರುವಂತೆ ಬಗೆಬಗೆ ಹೂಗಳಿಂದ ಅರ್ಚಿಸುವಳು. ಗಂಧಾಕ್ಷತೆ, ಮದ್ದಲೆ, ಭೇರಿ, ಮೃದಂಗ, ತಾಳಗಳ ಸಂಗೀತ; ಜಾಗಟೆ, ಶಂಖ-ಗಂಟೆ, ತಂಬೂರಿ ನೀನಾದಗಳಿಂದ ಆರತಿ ಎತ್ತುವಳು.

ಹಪ್ಪಳ-ಸಂಡಿಗೆ, ಹಾಲು-ಮೊಸರು, ಬೆಣ್ಣೆ, ಮಂಡಿಗೆ, ಬುಂದಿಲಾಡು, ಚಿರೋಟಿ, ಪಂಚಭಕ್ಷ, ಚಿತ್ರಾನ್ನದ ದ್ಯಾನ್ನ, ಶಾಲ್ಯನ್ನ ಸೂಪಗಳು, ಪಾಯಸ, ಹಾಲು, ಸಕ್ಕರೆ ನೈವೇದ್ಯ ಅರ್ಪಿಸಿ ಎಳೆ ನೀರು, ತಿಳಿನೀರು ತಾಂಬೂಲಗಳನ್ನು ನೀಡಿ ಧನ್ಯಳಾಗುವಳು. ಉತ್ತತ್ತಿ, ಅಂಜೂರ, ಖರ್ಜೂರ, ಕತ್ತರಿಸಿದ ಕಬ್ಬು, ಬಾದಾಮಿ, ಮಾವು, ಬಾಳೆ ಪಂಚಾಮೃತಗಳನ್ನು ಅರ್ಪಿಸಿ ಗುಣಗಾನ ಮಾಡುವಳು. ಧೂಪದಾರತಿ, ಕದಲದಾರತಿ, ಕುಂಭಾರತಿ, ಕರ್ಪೂರದಾರತಿ, ವಿವಿಧ ಬಗೆಯ ಆರತಿಗಳನ್ನು ಬೆಳಗುವಳು.

ತೂಗುಮಂಚವ ಕುಂದಮಂದಾರದಿಂದ ರಚಿಸಿ, ಪೀತಾಂಬರ ಹಾಸುತ್ತ ಮುತ್ತಿನ ತಲೆದಿಂಬುಗಳನ್ನಿಟ್ಟು ಶಯ್ಯಾಗಾರ ನಿರ್ಮಿಸಿ ಇಂದುಮುಖಿ ಶ್ರೀಭೂದೇವಿಯರೊಡಗೂಡಿ ಚಂದದಿಂದಿರುವ ಹರಿಯನು ಮನದುಂಬಿ ಸ್ತುತಿಸಿ ವಂದಿಸುವಳು.

ಹೀಗೆ ಶ್ರೀಹರಿಯ ಪೂಜೆಗೈದು ಬ್ರಹ್ಮನಿಗೆ ನೈವೇದ್ಯ ಅರ್ಪಿಸಿ, ಹರಿಯ ಪ್ರಾರ್ಥಿಸಿ, ದಂಡ ಪ್ರಣಾಮವ ಅರ್ಪಿಸಿ, 'ಹರಿಯೆ ರಕ್ಷಿಸುವ, ರಕ್ಷಿಸೆನುತ' ಪ್ರಾರ್ಥಿಸುವಳು. ಛತ್ರಿ-ಚಾಮರ, ದರ್ಪಣ ಸೇವೆ, ನೃತ್ಯ ಗೀತೆಗಳ ಸೇವೆಯ ಸಲ್ಲಿಸಿ ಪೂಜೆಯನ್ನು ಮುಗಿಸುವಳು. ಈ ಇಡೀ ಕೃತಿಯು ಶ್ರೀಹರಿಯನು ಹೇಗೆ ಪೂಜಿಸಬೇಕು, ಯಾವ ಯಾವ ಪದಾರ್ಥಗಳನ್ನು ಸಂಗ್ರಹಿಸಿಕೊಳ್ಳಬೇಕು, ಪೂಜೆಯ ಕ್ರಮ ಯಾವುದು ಎಂಬ ವಿವರಗಳನ್ನು ತಿಳಿಸಿಕೊಡುತ್ತದೆ.

ಇಂಥ ಪೂಜಾ ಕ್ರಮವನ್ನು ಜೀವೂಬಾಯಿಯವರು ತಮ್ಮ ಮನೆ ಹಾಗೂ ಮನೆತನದ ಪರಂಪರೆಯಲ್ಲಿ ಆಚರಿಸುತ್ತಿದ್ದರೆಂಬುದನ್ನು ಇಲ್ಲಿ ಗ್ರಹಿಸಬಹುದಾಗಿದೆ. ಇಂಥ ಒಂದು ದೀರ್ಘ ಪೂಜಾ ಪರಂಪರೆಯು ಅಂದಿನ ಸಾಂಪ್ರದಾಯಿಕ, ವೈದಿಕ ಕೌಟುಂಬಿಕ ಪರಿಸರದಲ್ಲಿ ನಿರಂತರವಾಗಿ ನಡೆದುಕೊಂಡು ಬಂದಿತ್ತೆಂದು ಗ್ರಹಿಸಲು ಸಾಧ್ಯವಿದೆ.

'ಪೂಜೆ' ಎಂಬುದು ಭಗವಂತನನ್ನು ಆರಾಧಿಸುವ ಒಂದು ಕ್ರಮ. ವಚನಕಾರರು, ಕೀರ್ತನಕಾರರು ತಮ್ಮ ಬದುಕು ಮತ್ತು ಬರಹಗಳೆರಡರಲ್ಲಿಯೂ ಬಹಿರಂಗದ ಆಡಂಬರದ ಪೂಜೆಗಿಂತ ಅಂತರಂಗದ ಮಾನಸಪೂಜೆಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವರು. ಆಡಂಬರದ ಪೂಜೆಯಿಂದ ಹಣ, ಶ್ರಮ ಮತ್ತು ಸಮಯಗಳು ನಾಶವಾಗುತ್ತವೇ ಹೊರತು, ಯಾವ ಪ್ರಯೋಜನವೂ ದೊರೆಯದು. ಇದರ ಬದಲಿಗೆ ಭಗವಂತನನ್ನು ಮನೋಮಂದಿರದಲ್ಲಿಯೇ ನೆಲೆಗೊಳಿಸಿಕೊಂಡು ನಿಷ್ಕಪಟ ಭಕ್ತಿ ಭಾವದಿಂದ ಆರಾಧಿಸಿದರೆ ನೆಮ್ಮದಿ ಮತ್ತು ಸಂತೃಪ್ತಿ ದೊರೆಯುವುದು. ಇಂದು ಹೆಚ್ಚಾಗಿ ಜನರು ಆಡಂಭರದ ಪೂಜೆಗಳಲ್ಲಿ ಕಾಲ ಕಳೆಯುತ್ತಿರುವರು. ಅಂಥ ವ್ಯಕ್ತಿಗಳಿಗೆ ಮಾನಸಪೂಜೆಯ ಮಹತ್ವವನ್ನು ಈ ಕೃತಿಯು ಸಾರಿ ಹೇಳುತ್ತದೆ.

**೫.೭ – ಗಾಲವ ಚರಿತ್ರೆ**

"ಯಕ್ಷಗಾನದಲ್ಲಿ ಬರುವ ಕೃಷ್ಣಾರ್ಜುನರ ಕಾಳಗ ಆಧಾರದ ಮೇಲೆ ಮತ್ತು ಹರಿಕಥೆಯಲ್ಲಿ ಕೇಳಿದ ವಿಷಯದ ಹಿನ್ನಲೆಯಲ್ಲಿ ಜೀವೂಬಾಯಿಯು ಅದೇ ಧಾಟಿಯಲ್ಲಿ ಈ ಕೃತಿಯನ್ನು ವಿಸ್ತರಿಸಿ ಬರೆದಿರುವಂತೆ ಕಾಣುತ್ತದೆ" ಎಂದು ಲೀಲಾವತಿ ಎಸ್.ರಾವ್ ಅವರು ಅಭಿಪ್ರಾಯ ಪಟ್ಟಿರುವುದು ಸರಿಯಾಗಿದೆ. ಪುರಾಣದಲ್ಲಿ ಬರುವ ವಿಶ್ವಾಮಿತ್ರನ ಶಿಷ್ಯನಾದ ಗಾಲವನಿಗೂ ಇಲ್ಲಿಯ ಗಾಲವನಿಗೂ ಯಾವುದೇ ಸಂಬಂಧಗಳು ಸರಿ ಹೊಂದುವುದಿಲ್ಲ. ಈ ಕೃತಿಯು 'ಗಯ' ವೆಂಬ ಗಂಧರ್ವನ ಕತೆಯನ್ನು ಹೋಲುತ್ತದೆ.

ಗಯೋಪಾಖ್ಯಾನವೆಂದು ಪ್ರಸಿದ್ಧಿ ಪಡೆದ ಈ ಕಥೆಯು ಮಹಾಭಾರತ ಮತ್ತು ಭಾಗವತಗಳಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. 'ಗಯ' ತಾಂಬೂಲವನ್ನು ಉಗುಳಲು ಅದು ಕೃಷ್ಣನ ಅರ್ಘ್ಯದ ನೀರ ಬೊಗಸೆಯಲ್ಲಿ ಬೀಳುತ್ತದೆ. ಕುಪಿತನಾದ ಕೃಷ್ಣ ಅವನನ್ನು ಕೊಲ್ಲುವ ಪ್ರತಿಜ್ಞೆ ಮಾಡುವನು. ಭಯಭೀತನಾದ ಗಯನು ನಾರದರ ಸೂಚನೆಯಂತೆ ಅರ್ಜುನನಲ್ಲಿ ಸಹಾಯ ಯಾಚಿಸಲು ಯಾವುದನ್ನೂ ವಿಚಾರಿಸದೆ ಆತನು ನಿನ್ನನ್ನು ರಕ್ಷಿಸುತ್ತೇನೆಂದು ಮಾತು ಕೊಡುವನು. ನಂತರ ವಿಷಯ ತಿಳಿದು ತನ್ನನ್ನು ಬೈದುಕೊಳ್ಳವನು. 'ಗಯ' ನ ಸಲುವಾಗಿ ಕೃಷ್ಣಾರ್ಜುನರಲ್ಲಿ ಕಾಳಗ ನಡೆಯಬೇಕಾದ ಪ್ರಸಂಗ ನಿರ್ಮಾಣವಾಗುತ್ತದೆ. ಆಗ ಎಲ್ಲ ದೇವತೆಗಳು ಸೇರಿ 'ಗಯ' ನಿಂದ ಕೃಷ್ಣನಲ್ಲಿ ಕ್ಷಮೆ ಕೇಳುವಂತೆ ಒತ್ತಾಯಿಸಿ, ಆತನ ಪಾದದ ಮೇಲೆ ಬೀಳುವಂತೆ ಮಾಡಿದಾಗ ಕೃಷ್ಣನಿಂದ ಗಯನಿಗೆ ಕ್ಷಮಾದಾನ ಸಿಗುತ್ತದೆ.

ಆದರೆ ಜೀವೂಬಾಯಿಯವರ ಗಾಲವ ಚರಿತೆ ಒಂದಿಷ್ಟು ಭಿನ್ನವಾಗಿದೆ. ನಲ್ವತ್ತಾರು ಪುಟಗಳ ಈ ಕೃತಿಯು ಬಹು ವ್ಯಾಪಕತೆಯನ್ನು ಪಡೆದುಕೊಂಡಿದೆ.

ಎಲ್ಲ ಕೃತಿಗಳ ಹಾಗೆ ಇದೂ ಸಹ ಗಣೇಶ ಸ್ತುತಿಯೊಂದಿಗೆ ಆರಂಭಗೊಂಡು, ಶಿವ, ಪಾರ್ವತಿ, ಶ್ರೀ ಭಾರತಿ, ಶ್ರೀ ಸರಸ್ವತಿ, ಮಹಾಲಕ್ಷ್ಮಿ, ನಾಗಶಯನ ಮುಂತಾದ ದೇವಾದಿದೇವತೆಯರಿಗೆ ವಂದಿಸಿ ಗುರು–ಹಿರಿಯರಿಗೆ ನಮಸ್ಕರಿಸಿ

"ಭಾಗವತೋತ್ತಮರಾದ ಗಾಲವ ಚರಿತ್ರೆಯನು
ಪೇಳುವೆ ಮುದದಿ"[೭೯]

ಎಂದು ಗಾಲವ ಚರಿತ್ರೆಯನ್ನು ಆರಂಭಿಸುವಳು.

ಗಾಲವ ಮುನಿಗಳು ಒಂದು ದಿನ ಸ್ನಾನಕ್ಕಾಗಿ ನದಿಗೆ ಬಂದಿರುತ್ತಾರೆ. ಶ್ರೀಹರಿಯನ್ನು ಕುರಿತು ಸ್ಮರಣೆ ಮಾಡುತ್ತ ನಿಸರ್ಗ ಸೌಂದರ್ಯವನ್ನು ಆಶ್ವಾದಿಸುತ್ತ ಸ್ನಾನ ಮಾಡುತ್ತಿದ್ದರು. ಮರದ ಮೇಲೆ ಹಕ್ಕಿಗಳ ಕಲರವ, ನವಿಲಿನ ನರ್ತನ, ಪಾರಿವಾಳ ಕೋಗಿಲೆಗಳ ಹಾಡು, ಸಾರಂಗ–ಜಿಂಕೆಯ ನಡಿಗೆ, ನದಿಯೊಳಗಿನ ತಾವರೆ ರೂಪ, ಚಕ್ರವಾಕ ಮತ್ತು ಶುಕಪಿಕಗಳ ಚಲ್ಲಾಟ, ಜಲಚರ ಹಕ್ಕಿಗಳ ನೀರ ಮೇಲಿನ ಹೊಯ್ದಾಟ ಎಲ್ಲವನ್ನು ಕಂಡ ಗಾಲವರು ಬಹು ಪುಳಕಿತರಾಗಿದ್ದರು. ಸ್ನಾನ ಮುಗಿಸಿ ಸೂರ್ಯನಿಗೆ ಅರ್ಘ್ಯವ ಕೊಡುವ ಸಂದರ್ಭದಲ್ಲಿ ಬೊಗಸೆಯೊಳಗೆ ನೀರು ಹಿಡಿದು ನೋಡಲು ಅವೆಲ್ಲ ಮಲಿನವಾಗಿದ್ದವು. ಇದರಿಂದ ಮುನಿಗಳು ಬಹುವ್ಯಾಕುಲಕ್ಕೊಳಗಾದರು.

"ಸ್ವಚಿತ್ತವಿಲ್ಲದಿರುವ ಮನದಿ ಯೋಚಿಸಿ
ಅಸ್ತಮಾನದೊಳವನ ಸಿರವ ತರಿವೆನೆನುತಲಿ"[೮೦]

ಇದಕ್ಕೆ ಕಾರಣನಾದವನನ್ನು ಕೊಲ್ಲುವುದಾಗಿ ಪ್ರಮಾಣಮಾಡಿ ಶಾಪ ನೀಡುವರು. ನಂತರ ಗಾಲವರು ಯೋಚಿಸಿ 'ನಾನು ಕೆಟ್ಟೆ' ಎಂದು ಕಳವಳ ಪಡುತ್ತಾ ತೆರಳುವರು. ಅದೇ ವೇಳೆಗೆ ದೇಶ ಸಂಚಾರಿಯಾದ ನಾರದರು ಗಾಲವರಿಗೆ ಭೆಟ್ಟಿಯಾಗುವರು. 'ಮುನಿಗಳೆ ಇಷ್ಟೇಕೆ ವ್ಯಾಕುಲತೆಗೆ ಒಳಗಾಗಿದ್ದೀರಿ' ಎಂದು ನಾರದರು ಕೇಳುವರು. ಗಾಲವರು ಎಲ್ಲ ವಿಷಯವನ್ನು ತಿಳಿಸುವರು. ಎಲ್ಲವನ್ನು ಕೇಳಿದ ನಾರದರು ಒಂದಿಷ್ಟು ಆಲೋಚಿಸಿ 'ಗಾಲವರೇ ಈಗಾಗಲೇ ವೇಳೆ ಆಗುತ್ತಿದೆ. ಕುಳಿತರೆ ನಿಮ್ಮ ಪ್ರತಿಜ್ಞೆ ಈಡೇರದು. ನೀವು ಈ ಕಾರ್ಯವನ್ನು ಹೇಗೆ ಈಡೇರಿಸುತ್ತೀರಿ' ಎನ್ನುವರು. ಗಾಲವರು ಮೌನವಾಗಿರಲು 'ಈ ಕಾರ್ಯ ದ್ವಾರಕಾದೀಶ ಶ್ರೀಕೃಷ್ಣನಿಂದಲ್ಲದೇ ಬೇರೆ ಯಾರಿಂದಲೂ ಸಾಧ್ಯವಿಲ್ಲ' ಎಂದು ನಾರದರು ತಿಳಿಸುವರು. ಆಗ ಗಾಲವರು ನಾರದರ ಪಾದವ ಹಿಡಿದು 'ನಾರದರೆ ನೀವೆ ಈ ಕಾರ್ಯ ಮಾಡಬೇಕೆಂದೆನಲು' ನಾರದರು

'ನಿಮ್ಮ ಪ್ರತಿಜ್ಞೆ ಸಾಫಲ್ಯಗೊಳ್ಳಬೇಕಾದರೆ ಮಾರರಮಣನನ್ನೇ ಬೇಡಿಕೊಳ್ಳಬೇಕೆಂದು ಪುನಃ ಹೇಳುವರು. ನಾರದರು ಗಾಲವರನ್ನು ಕರೆದುಕೊಂಡು ಕೃಷ್ಣನೆಡೆಗೆ ಪ್ರಯಾಣ ಹೊರಟರು.

ಅತ್ಯಂತ ವೈಭವದಿಂದಿರುವ ದ್ವಾರಕಾ ಪಟ್ಟಣದ ಸೌಂದರ್ಯ ಮತ್ತು ಅಲಂಕಾರವನ್ನು ಸವಿಯುತ್ತ ಇರ್ವರು ಹರಿಪುರದ ದ್ವಾರದಲ್ಲಿ ಬಂದು ನಿಂತರು. ಆಗ ನಾರದರು

"ನಾನಿಲ್ಲಿಯೇ ಕುಳಿತಿರುವೆನು ಮುನಿಗಳೆ
ಸಾನುರಾಗದಿ ಎಲ್ಲವ ಪೇಳಿ
ದಾನವಾಂತಕನಿಂದ ಅಭಯವ
ಧ್ಯಾನಿಸಿ ಪಡೆಯಿರೆಂದು"[೮೧]

ಗಾಲವ ಮುನಿಗಳಿಗೆ ಹೇಳಿ ಒಳಗೆ ಕಳುಹಿಸುವರು. ಭೋಗಶಯನ ಆನಂದದಿಂದ ಮಲಗಿರುವುದನ್ನು ನೋಡಿ ಗಾಲವರು ಅತಿ ವಿನಯದಿಂದ, ಭಕ್ತಿಯಿಂದ ಶ್ರೀಹರಿಗೆ ವಂದಿಸಿ, ದಶಾವತಾರಗಳನ್ನು ಆಯಾ ಅವತಾರಗಳಲ್ಲಿ ವಿವಿಧ ಕಾರ್ಯ ಗೈಯ್ದ ಹರಿಯನ್ನು ಕುರಿತು

"ಭಾನು ಅಸ್ತಕೆ ಎನ್ನ ವೈರಿಯಸಿರವ ತರಿವೆ
ಎಂದೆನ್ನ ನಾಲಿಗೆಯಿಂದ ನೀನು ನುಡಿಸಿರುವಿ
ಮುಂದಿನ ಕಾರ್ಯ ನಿನಗೊಪ್ಪಿಸಿರುವೆನೊ ದೇವ"[೮೨]

ಎಂದು ಕೈಮುಗಿದು ಗಾಲವರು ಬಂದ ಕಾರಣ ತಿಳಿಸುವರು. ಇದಕ್ಕೆ ಶ್ರೀಹರಿಯು 'ಆಗಲಿ ನೋಡೋಣ ಹೋಗಿ ಬನ್ನಿರಿ' ಎಂದು ಗಾಲವರನ್ನು ಕಳುಹಿಸುವನು. ನಾರದರ ಮುಂದೆ ಇದನ್ನು ಗಾಲವರು ಹೇಳಲು 'ಇಂದು ನಿಮ್ಮ ಕಾರ್ಯ ಆಗುವುದಿಲ್ಲ' ಎಂದು ನಗಲು, ಗಾಲವರು ಗಾಭರಿಗೊಳ್ಳುವರು. ಮತ್ತೇ ನಾರದರು

"ಆಗಲಿ ನೋಡೋಣವೆಂದು
ಆಗದ ಹೋಗದ ಮಾತು ನಂಬಿ
ಈಗ ನಿಮ್ಮ ಶಪಥವು ಎಂತು
ಆಗುವುದೆಂದೆನಲು "[೮೩]

ಈ ಮಾತುಗಳನ್ನು ಕೇಳಿದ ಗಾಲವರು ಮತ್ತೊಮ್ಮೆ ಹರಿಯನ್ನು ಕೇಳುವೆನೆಂದು ಹೋಗುವನು. ಕಡಲಶಯನನು ಮಡದಿಯರೊಂದಿಗೆ ಮಲಗಿದ್ದ. ಶ್ರೀಹರಿಯು

"ಮನಹ ಬಂದಿರಿ ಯಾತಕೆ ಮುನಿಗಳೆ
ಮನದ ಚಿಂತೆಗಳೇನು ಪೇಳಿ

ಅನುಮಾನಗಳಿಲ್ಲದೆ ಪೇಳಿರಿ ನಿ-

ಮ್ಮನಸಿನ ಕಾರ್ಯಗಳು"[೮೪]

ಎಂದು ಗಾಲವರನ್ನು ಕೇಳಲು "ತಾವು ವಚನಕೊಡಬೇಕೆಂದು" ಮುನಿಗಳು ಕೇಳುವರು. ಇದು ನಾರದ ತಂತ್ರವೆಂದು ತಿಳಿದ ನಾರಾಯಣನು

"ತಂದೆ ತಾಯಿಗಳಾಣೆ ಕೊಡುವೆ

ಬಂಧುಬಳಗಗಳಾಣೆ ಕೊಡುವೆ

ಮುಂದೆ ಅಗ್ರಜ ಬಲರಾಮನ ಆಣೆ

ಚಂದದಿ ನಂಬುವುದು"[೮೫]

ತಂದೆ-ತಾಯಿ, ಬಂಧು-ಬಳಗ ಮತ್ತು ಅಣ್ಣನ ಮೇಲೆ ಪ್ರಮಾಣ ಮಾಡಿ ಹೇಳಲು, ಗಾಲವರು ಸಂತೋಷದಿಂದ ನಾರದರ ಬಳಿ ಬಂದು ತಿಳಿಸುವರು. 'ತಂದೆ-ತಾಯಿಗಳಿಲ್ಲದ, ಬಂಧು-ಬಾಂಧವರಿಲ್ಲದ, ಅಣ್ಣನಿಲ್ಲದ ಹರಿಯ ವಚನವನ್ನು ನಂಬಬೇಡ ಗಟ್ಟಿ ವಚನವನ್ನು ಕೇಳಿ ಬನ್ನಿ' ಎಂಬ ನಾರದರ ನುಡಿ ಕೇಳಿ, ಮುನಿಗಳು ಮತ್ತೆ ಹರಿಯ ಬಳಿ ಹೋಗಿ ಕೇಳಲು 'ಹರಿಭಕ್ತರ ಪಾದದಾಣೆಗೂ ನಿಮ್ಮ ಸಲಹುವೆನು' ಎಂದು ವಚನ ನೀಡುವನು. ನಾರದರು ಮತ್ತೇ 'ಗಾಲವರೇ ನೀವು ಕೆಟ್ಟಿರಿ' ಎಂದು ಹೇಳಿ

"ಕೃಷ್ಣ ವಚನವೋ ರಾಮವಚನವೋ

ಮತ್ತೊಮ್ಮೆ ಕೇಳುವುದು"[೮೬]

ಎಂದು ತಿಳಿಸಿ ಗಾಲವರನ್ನು ಪುನಃ ಕೃಷ್ಣನೆಡೆಗೆ ಕಳುಹಿಸುವರು. ಗಾಲವನ ನುಡಿ ಕೇಳಿ ಇದೆಲ್ಲ ನಾರದರ ಉಪಾಯವೆಂದರಿತು

"ಸಂದೇಹವೇತಕೆ ಗಾಲವರೆ

ರಾಮನ ನುಡಿಯೆಂದ"[೮೭]

ಶ್ರೀಹರಿಯ ಮಾತು ಕೇಳಿ ಗಾಲವರು 'ಕೊಟ್ಟ ಮಾತಿಗೆ ತಪ್ಪದ ರಾಮನ ವಚನವನ್ನು' ಪಡೆದ ಖುಷಿಯಲ್ಲಿ ನಾರದರ ಬಳಿ ಓಡಿಬಂದು ಎಲ್ಲ ವಿಷಯ ಒಪ್ಪಿಸಿದರು. ಆಗ ನಾರದರು 'ಮುನಿಗಳೇ ನಿಮ್ಮ ಕಾರ್ಯ ಮುಗಿಯಿತು ಮುಂದೆ ಸಾಗಿರಿ' ಎಂದರು.

ಗಾಲವರು ಅತ್ತ ತೆರಳಲು ನಾರದರು ಹರಿನಾಮ ಸ್ಮರಣೆಯನ್ನು ಮಾಡುತ್ತ ಶ್ರೀಕೃಷ್ಣನ ಮಂದಿರವನ್ನು ಪ್ರವೇಶಿಸಿದರು. ರುಕ್ಮಿಣಿಸಮೇತರಿರುವ ಹರಿಯನ್ನು ಕಂಡು ಶಿರಬಾಗಿ ವಂದಿಸಿದ ನಾರದರನ್ನು ನಾರಾಯಣನು ಷೋಡಶ ಉಪಚಾರಗಳಿಂದ ಸತ್ಕರಿಸಿದನು. ನಾರದರು ಶ್ರೀಹರಿಯನ್ನು "ಗಾಲವರು ಏಕೆ

ಬಂದಿದ್ದರು, ಎಂದು ಕೇಳಲು; ಎಲ್ಲ ವೃತ್ತಾಂತ ತಿಳಿಸಿದನು. "ಚಿಕ್ಕಪರಾಧಕ್ಕೆ ಇಷ್ಟೊಂದು ಶಿಕ್ಷೆಯನ್ನು ನೀಡುವುದು ಸರಿಯಾದುದಲ್ಲ ಇದನ್ನು ಬಿಟ್ಟುಬಿಡು" ಎಂದು ನಾರದರು ನಾರಾಯಣನಿಗೆ ಹೇಳಲು

"ಆಡಿದ ಮಾತು ತಪ್ಪುವವನಲ್ಲವು
ರೂಢಿಗೊಡೆಯ ರಾಮನ ವಚನ
ನೀಡಿಹೆ ಭಾಷೆಯ ತಪ್ಪಲಸಾಧ್ಯವು
ಮಾಡಿಯೇ ತೀರುವೆನೀ ಕಾರ್ಯ"[೮೮]

ಶ್ರೀಹರಿಯು 'ಕೊಟ್ಟ ಮಾತನ್ನು ತಪ್ಪುವುದಿಲ್ಲ ಎಷ್ಟೆ ತೊಂದರೆ ಬಂದರು ಇದನ್ನು ನೆರವೇರಿಸಿ ಬಿಡುವೆ' ಎಂದು ಗಟ್ಟಿಯಾಗಿ ಹೇಳುವನು. ಈ ಮಾತುಗಳನ್ನು ಕೇಳಿ ನಾರದರು ಅಲ್ಲಿಂದ ನೇರವಾಗಿ ಚಿತ್ರರಥನಲ್ಲಿಗೆ ಬಂದರು. ಆ ಗಂಧರ್ವನನ್ನು ಕಂಡು, ಎಡಬಲದಲ್ಲಿ ಸತಿಯರ ವಿನೋದದಲಿ ತಲ್ಲೀನನಾಗಿರುವುದನ್ನು ಗಮನಿಸಿದ ನಾರದರು

"ಚಿತ್ರರಥನನು ನೋಡುತೊಮ್ಮೆಗೆ
ಮತ್ತೆ ಸೂರ್ಯನ ನೋಡುತೊಮ್ಮೆಗೆ
ವ್ಯರ್ಥವಾದುದು ಇಂಥ ಗಾನವು
ಸತ್ತನುಗಂಧರ್ವ"[೮೯]

ಎಂದು ಯೋಚಿಸುತ್ತಿರಲು ಗಂಧರ್ವನ ಹೆಂಡತಿಯರು ಇದಕ್ಕೆ ಪರಿಹಾರವೇನೆಂದು ಬಲು ಹೆದರಿಕೆಯಿಂದ ಕೇಳಲು, ನಾರದರು ಪಾದಕ್ಕೆರಗಿದ ಆ ಸತಿಯರಿಗೆ ಸಾಂತ್ವನ ಹೇಳಿದನು. ಚಿತ್ರರಥನು ದು:ಖಿತನಾಗಿ

"ನೀವಲ್ಲದೆ ರಕ್ಷಿಕರಿನ್ನಾರು
ಸಾವಧಾನದಿ ಪೇಳಿರಿ ಗುರುಗಳೆ
ಯಾವ ಪರಿಯಲ್ಲಾದರೂ ರಕ್ಷಿಸ
ಬೇಕೆಂದೆನುತಿರಲು"[೯೦]

ನಾರದರು ಅವನನ್ನು ಕರೆದುಕೊಂಡು ಯಮುನಾನದಿ ಬಳಿ ಬಂದು ಹಬ್ಬಿರುವ ವಿಶಾಲವಾದ ವೃಕ್ಷವನು ಕಂಡು, ಚಿತ್ರರಥನಿಗೆ

"ಚಿತ್ರರಥ ಈ ವೃಕ್ಷವನೇರಿ
ಸುತ್ತ್ಯಾರಾದರು ಬರುವರೋ ನೋಡಿ
ಮತ್ತ್ಯಾರಾದರು ಅರಿಯದ ಹಾಗೆ
ಹತ್ತಿರದಲ್ಲಿ ಕೂಡೆಂದ"[೯೧]

ನಾರದರ ಸಲಹೆಯ ಮೇರೆಗೆ ಚಿತ್ರರಥನು ಯಮುನಾನದಿ ತೀರದ ಮಹಾವೃಕ್ಷವನ್ನು ಏರಿ 'ದೂರದಲ್ಲಿ ನಾರಿಯರು ನದಿ ಸ್ನಾನಕ್ಕೆ ಬರುತ್ತಿರುವರೆಂದು' ಹೇಳುವನು. 'ಅಲ್ಲಿಯೇ ಮೌನವಾಗಿ ಕುಳಿತುಕೋ. ನಾನು ಕರತಾಡನವನ್ನು ಮಾಡುತ್ತೇನೆ. ಅದೇ ವೇಳೆಗೆ ನೀನು ಮರದಿಂದ ಕೆಳಗಿಳಿದು, ಬರುತ್ತಿರುವ ನಾರಿಯರಲ್ಲಿ ಅತಿ ಹಿರಿಯಳಾಗಿರುವವಳ ಪಾದವನ್ನು ಹಿಡಿದುಕೊಂಡು ರಕ್ಷಿಸುವಂತೆ ಬೇಡಿಕೊಳ್ಳಬೇಕೆಂದು' ನಾರದರು ಗಂಧರ್ವನಿಗೆ ಹೇಳುವರು. ತಕ್ಷಣ ಅವಳು

"ಕರುಣದಿ ನಿನಗೆ ಅಭಯವ ಕೊಡುವಳು
ತ್ವರಿತದಿ ಕರೆದೊಯ್ಯುವಳು ತನ್ನ ಮನೆಗೆ
ದುರಿತವ ತಪ್ಪಿಸಿ ಕಾಪಾಡುವಳು
ಸರಿ ಮಾಳ್ಪೊಳು ಕಾರ್ಯ"[೨]

ವೆಂದು ನಾರದರು ಗಂಧರ್ವನಿಗೆ ಎಲ್ಲ ರೀತಿಯ ಮುಂದಾಲೋಚನೆ ಮತ್ತು ಸಾಧ್ಯತೆಯನ್ನು ಹೇಳಿ ಅಲ್ಲಿಯೇ ಮರದ ಕೆಳಗೆ ಕುಳಿತರು. ಅಷ್ಟರಲ್ಲಿ ಸ್ನಾನಕ್ಕೆ ಬಂದ ನಾರಿಯರು ಲಗುಬಗೆಯಿಂದ ನದಿಯಲ್ಲಿಳಿದರು. ಸಂಕಲ್ಪ ಹೇಳಲು ಪುರೋಹಿತರಿಲ್ಲವಲ್ಲ ಹೇಗೆ ಮಾಡುವುದೆಂದು ಚಿಂತಿಸತೊಡಗಿದರು. ಮೌನವಾಗಿ ಕುಳಿತಿದ್ದ ನಾರದರನ್ನು ಕಂಡು ಸಂಕಲ್ಪ ಹೇಳಬೇಕೆಂದು ಕೇಳಿಕೊಂಡರು. ನಾರದರು ಸುಭದ್ರೆಯ ಮುಖವ ನೋಡಿ ನೀವೆಲ್ಲರೂ ನದಿಯಲ್ಲಿ ಮುಳುಗಿ ಏಳುತ ಕೈಮುಗಿದು ನಾ ಹೇಳುವ ಸಂಕಲ್ಪವನ್ನು ನೀವು ಹೇಳುವಂತೆ ತಿಳಿಸಿದನು. ಅವರೆಲ್ಲರೂ ನಾರದರ ಉಪದೇಶದಂತೆ ನದಿಯಲ್ಲಿ ಮುಳುಗೆದ್ದು ಕೈಮುಗಿದು ನಿಂತರು.

"ಶರಣಾಗತ ಸಂರಕ್ಷಣೆ ಮಾಳ್ಪೆನೆಂದು
ಭರದಿ ಪೇಳ್ವ ಈ ಮಂತ್ರವನು"[೩]

ನಾರದರು ನಾರಿಯರಿಗೆ ಬೋಧಿಸಿದರು. ಅದಕ್ಕೆ ನಾರಿಯರು ಸ್ನಾನದ ವೇಳೆಗೆ ಇಂಥ ಮಂತ್ರ ಏಕೆ, ನಮಗೆ ಸ್ನಾನ ಮಾಡುವಾಗಿನ ಸಂಕಲ್ಪ ಬೇಕೆಂದು ಕೇಳುವರು. ನಾರದರು 'ಹರಿ ಸಂಕಲ್ಪ ಹೀಗೆಯೆ ಇದೆ' ಎಂದು ಹೇಳಲು ಅದೇ ಸಂಕಲ್ಪವನ್ನು ನಾರಿಯರು ಹೇಳುವರು. ಆಗಲೇ ನಾರದರು ಸನ್ನೆ ಮಾಡಲು ಗಂಧರ್ವನು ಮರದಿಂದ ಕೆಳಗಿಳಿದು, ಸುಭದ್ರೆಯ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, ಕಣ್ಣೀರು ಸುರಿಸುತ್ತಾ

"ರಕ್ಷಣೆ ಮಾಳ್ಪೆನೆಂದಭಯವ ಕೊಟ್ಟು
ರಕ್ಷಿಸಬೇಕು ಅನಾಥನ್ನ'[೪]

ಎನ್ನುತ್ತಾ ಚಿತ್ರರಥನು ಅಪಾರದು:ಖದಿಂದ ಸುಭದ್ರೆಯಲ್ಲಿ ಪ್ರಾರ್ಥಿಸಿಕೊಳ್ಳುವನು.

"ರಕ್ಷಿಸುವೆನು ಪೇಳು ಮನದಿಷ್ಟ ನಿನಗೆ
ಕಷ್ಟವದ್ಯಾವುದು ನುಡಿಬೇಗ"[೫]

ವೆಂದು ಚಿತ್ರರಥನನ್ನು ಸುಭದ್ರೆ ಕೇಳುವುಳು. ವೈರಿಯು ನನ್ನ ಬೆನ್ನಟ್ಟಿ ಬರುತ್ತಿದ್ದಾನೆ. ಸೂರ್ಯಾಸ್ತದೊಳಗೆ ನನ್ನ ಶಿರವನ್ನು ಕತ್ತರಿಸುತ್ತೇನೆಂಬ ಭಯಂಕರ ನುಡಿಕೇಳಿ ಭಯಭೀತನಾಗಿ ನಿನ್ನ ಮೊರೆ ಹೊಕ್ಕಿರುವೆ. ನುಡಿದ ಮಾತು ತಪ್ಪುವವಳಲ್ಲವೆಂದರಿತು ಬಂದಿದ್ದೇನೆ. ಶರಣು ಹೊಕ್ಕವರನ್ನು ರಕ್ಷಿಸುವುದು ನಿಮ್ಮ ಪರಮಕಾರ್ಯ. ನಾನು ನಿನಗೆ ಶರಣಾಗಿದ್ದೇನೆ. ನಿನ್ನ ಪತಿಯಾಣೆಯ ಮಾಡಿಹೇಳು, ಭಾಷೆ ನೀಡೆಂದು ಕೇಳಲು

"ಕೇಳು ಫಲ್ಗುಣನ ಪಾದದಾಣೆಗೂ ನಿನ್ನನ್ನು
ರಕ್ಷಿಸುವ ಭಾರ ನನಗಿರಲೆಂದು"[೬]

ಚಿತ್ರರಥನ ಅಸಾಹಾಯಕ ಸ್ಥಿತಿಯನ್ನು ಕಂಡು, ತಾನು ಮಾಡಿದ ಸಂಕಲ್ಪದ ಪ್ರಕಾರ ಕಡುಧೈರ್ಯದಿಂದ ತನ್ನ ಪತಿಯ ಮೇಲೆ ಪ್ರಮಾಣ ಮಾಡಿ ರಕ್ಷಿಸುವೆನೆಂದು ಅಭಯ ನೀಡಿದಳು. ಅಲ್ಲೇ ಇದ್ದ ನಾರದರು 'ಸುಭದ್ರೆ ವೈರಿ ಯಾರೆಂದು ನೀನು ತಿಳಿದಿರುವೆಯೇನು?' ಎಂದು ಕೇಳಿ 'ಶ್ರೀಕೃಷ್ಣನೇ ವೈರಿ' ಎಂದು ಹೇಳಲು ಸುಭದ್ರೆ ದಿಕ್ಕು ತೋಚದೆ ನೆಲಕ್ಕೆ ಕುಸಿದಳು. ಜೊತೆಗಿದ್ದ ಸಖಿಯರೆಲ್ಲರೂ ಅವಳನ್ನು ಎಚ್ಚರಿಸಿ

"ಕೇಳವ್ವ ಸುಭದ್ರಿ ಬಹಳ ಬಳಲಬೇಡ
ಹೇಳು ನಿನ್ನರಸಗೆ ಪಾಲಿಸವನ"[೭]

ಚಿತ್ರರಥನನ್ನು ಪಾಲಿಸುವ ಉಪಾಯವನ್ನು ಸಖಿಯರು ಸುಭದ್ರೆಗೆ ತಿಳಿಸುವರು. ಅಣ್ಣನ ಜೊತೆ ಯುದ್ಧ ಮಾಡುವುದು ಹೇಗೆ ಎಂದು ಯೋಚಿಸುತಿರಲು ಸುಭದ್ರೆಗೆ ಧೈರ್ಯದಿಂದಿರಲು ಹೇಳಿ ಸಖಿಯರು ಅವಳನ್ನು ಅರಮನೆಗೆ ಕರೆದೊಯ್ದರು. 'ನೀನು ಯಾರೊಂದಿಗೂ ಮಾತನಾಡಬೇಡ ಆ ಫಲ್ಗುಣ ಬಂದು ಕೇಳಲು' 'ಭಾಷೆಕೊಟ್ಟರೆ ಪೇಳ್ವೆ' ನೆಂದು ಹೇಳು. ಆಗ ಫಲ್ಗುಣನು ಮಾತು ಕೊಡುವನು. ನಂತರ ಗಂಧರ್ವನ ರಕ್ಷಣೆಯನ್ನು ಕುರಿತು ವಿಷಯ ತಿಳಿಸು. ಆಗ ಅರ್ಜುನನು ಸಮ್ಮತಿಸುವನು' ಎಂದು ಸಖಿಯರು ಹೇಳಲು ಸುಭದ್ರೆ ಒಪ್ಪಿಕೊಂಡು, ಆ ಗಂಧರ್ವನನ್ನು ತನ್ನ ಮನೆಗೆ ಕರೆದುಕೊಂಡು ಬಂದು ಗೌಪ್ಯ ಗೃಹದಲ್ಲಿಟ್ಟಳು. ತಾನು ಧರಿಸಿದ ಒಡವೆ ವಸ್ತ್ರಗಳನ್ನೆಲ್ಲ ಹುಚ್ಚು ಹಿಡಿದ ಹಾಗೆ ಮನ ಬಂದಂತೆ ಮನೆ ತುಂಬಾ ಬೀಸಾಡಿದಳು. ಮಂಚದ ಮೇಲೆ ಮುಸುಕು ಹಾಕಿಕೊಂಡು ಮಲಗುವಳು. ಅರ್ಜುನ ಹೆಂಡತಿಯನ್ನು ಹುಡುಕುತ್ತಾ ಬಂದು ಮಲಗಿದ ಹೆಂಡತಿಯನ್ನು ಕಂಡು 'ಏಕೆ ಮಲಗಿರುವೆ' ಎನ್ನಲು 'ಭಾಷೆ ಕೊಟ್ಟರೆ ಹೇಳುವೆ'ನೆಂದು ಆಡಲು ಅರ್ಜುನನು 'ಕೊಡುವೆ ಭಾಷೆಯನು ನೀ ಕೇಳು ತಡ ಮಾಡದಲೆ' ಎಂದು ಮಾತು ನೀಡುವನು. ಆಗ ಸತಿಯು ಎದ್ದು ಗಂಧರ್ವನನ್ನು ತೋರಿಸಿ ಪಾರ್ಥನ ಪಾದಕ್ಕೆರಗಿ

"ಆ ದಿನದ ಅಸ್ತಮಾನದೊಳವನ ಶಿರವನು ಉಳಿಸಿ
ಕಾಪಾಡಬೇಕೆಂದು . . . . . . . . . . . . . ."[೯೮]

ಸುಭದ್ರೆ ಪತಿರಾಯನಿಗೆ ಹೇಳಿದಳು. ಪ್ರತಿಯಾಗಿ ಫಲ್ಗುಣನು

"ಕೇಳು ಸುಭದ್ರೆ ಕೊಟ್ಟ ಮಾತನು ತಪ್ಪಿದರೀಗ
ಮಾಡುವೆನು ಅಗ್ನಿ ಪ್ರವೇಶವೆನ್ನುತ ತಿಳಿ"[೯೯]

ಸುಭದ್ರೆಯ ಮುಂದೆ ಫಲ್ಗುಣನು ಕೊಟ್ಟ ಮಾತಿನಂತೆ ನಡೆಯದಿದ್ದರೆ ಆತ್ಮಾಹುತಿ ಮಾಡಿಕೊಳ್ಳುವೆನೆಂದು ಉಗ್ರ ಶಪಥವನು ಗೈಯ್ದು, ಮುಂದಿನ ಕಾರ್ಯ ಹೇಗೆಂದು ಆಲೋಚನೆಯಲ್ಲಿ ತೊಡಗಿದನು.

ಸುಭದ್ರೆಯೊಂದಿಗೆ ಚಿತ್ರರಥನನ್ನು ಕಳುಹಿಸಿದ ನಾರದರು ದ್ವಾರಕೆಯನ್ನು ಸೇರಿ ಶ್ರೀಕೃಷ್ಣನಿಗೆ ವಂದಿಸಿ, ಪಾಂಡವರು

"ನಿನ್ನ ವೈರಿಯ ತಡೆದು ಮನ್ನಿಸಿ
ನಿನ್ನೊಡನೆ ಕಾದುವ ಪ್ರಯತ್ನದಿ
ನಿನ್ನ ನೆನಹನು ತಾರದಿರುವರು
ಚನ್ನವೇನೆನುತ"[೧೦೦]

ಗಂಧರ್ವನನ್ನು ಫಲ್ಗುಣನು ರಕ್ಷಿಸುವ ಶಪಥ ಗೈಯ್ದಿರುವ ವೃತ್ತಾಂತವನ್ನು ಹಾಗೂ ಆತನು ಪಾರ್ಥನ ರಕ್ಷಣೆಯಲ್ಲಿರುವನೆಂದೂ ಹರಿಗೆ ಅರುಹಿದನು. ಇದ ಕೇಳಿ ಹರಿಯು ನಗುತ

"ಕೇಳಿ ನಾರದರೆ ಈ ವೇಳೆ ಪೋಗುತ
ಸೂರ್ಯಾಸ್ತಮಾನದೊಳು ಶತ್ರುಶಿರ ಕತ್ತರಿಸಿ
ಬರುವೆನೀ ಕಾರ್ಯ ಎನಗದ್ಭುತವೆ ಎಂದೆನುತ"[೧೦೧]

ನುಡಿಯಲು, ನಾರದರು "ಹಾಗಲ್ಲ ಶ್ರೀಹರಿ ಶರಣಾಗತರನ್ನು ರಕ್ಷಿಸದೇ ಬಿಟ್ಟರೆ ನಮ್ಮ ಕುಲಕ್ಕೆ ಕಳಂಕ, ಗಂಧರ್ವನನ್ನು ರಕ್ಷಿಸದಿದ್ದರೆ ಬೆಂಕಿಗೆ ಆಹುತಿಯಾಗಿ ಜೀವ ಬಿಡುವೆನೆಂದು ಪಾರ್ಥ ಶಪಥ ಗೈದಿದ್ದಾನೆ" ಎಂದು ತಿಳಿಸಿ ಅಲ್ಲಿಂದ ಮುಂದೆ ನಡೆದರು.

ಶ್ರೀಹರಿಯು ಗಾಲವರಿಗೆ ಕೊಟ್ಟ 'ರಾಮವಚನ' ಉಳಿಸಿಕೊಳ್ಳಲು ತನ್ನೆಲ್ಲ ಕುಲದ ವೀರರನ್ನು ಕರೆಸಿ, ತನ್ನ ಭಕ್ತನಾದ ಗಾಲವನ ಶಪಥ ಈಡೇರಿಸಲು ಅನಿಯಾದನು. ನಾನಾ ಪ್ರಕಾರದ ರಣದುಂದುಭಿಗಳು ಮೊಳಗಲು ಅರಂಭವಾದವು. ಶಂಖ, ಗದೆ, ಪದ್ಮ, ಚಕ್ರಗಳನ್ನು ಕೈಯಲ್ಲಿ ಹಿಡಿದು ಕೃಷ್ಣನು ಯುದ್ಧಕ್ಕೆ

ಸಿದ್ಧಗೊಂಡನು. ಈ ಸಂದರ್ಭದಲ್ಲಿ ಜೀವಮ್ಮಳು ಶ್ರೀಹರಿಯ ಸೌಂದರ್ಯವನ್ನು, ವೀರಾವೇಶವನ್ನು ಬಹು ಸುಂದರವಾಗಿ ವರ್ಣಿಸಿರುವಳು.

ಕೃಷ್ಣಾರ್ಜುನರ ನಡುವಿನ ಕಾಳಗವನ್ನು ನೋಡಲು ದೇವತೆಗಳೆಲ್ಲರೂ ಆಕಾಶದಲ್ಲಿ ಸಾಲುಸಾಲಾಗಿ ನಿಂತರು. ಕೃಷ್ಣನು ಯುದ್ಧ ಮಾಡಲು

"ಬಾರೈ ಫಲ್ಗುಣ ತೋರೈ ಶೌರ್ಯವ
ಮೀರಿದ ಕಾರ್ಯವ ಮಾಡಿರುವೆ
ವೀರನು ನೀನಾದರೆ ಈ
ಕಾರ್ಯದಿ ಶೌರ್ಯವನು ತೋರೆನಲು"[೧೦೨]

ಅರ್ಜುನನನ್ನು ಆಹ್ವಾನಿಸುತ್ತಾ "ಪಾರ್ಥನೇ ನಿನ್ನ ಶೌರ್ಯ ಮೀರಿದ ಕೆಲಸವನ್ನು ಮಾಡಿರುವಿ, ನಿಜವಾಗಿ ನೀನು ವೀರನಾಗಿದ್ದರೆ ಇಂದು ಅದನ್ನು ತೋರಿಸು"ವಂತೆ ಸವಾಲು ಹಾಕುವನು. ಧರ್ಮರಾಜನು ಯುದ್ಧ ಮಾಡುವುದು ಬೇಡವೆನ್ನುವನು. ಆದರೆ ಭೀಮನು 'ನುಡಿದಂತೆ ಯುದ್ಧ ನಡೆಯಲಿ' ಎಂದು ಗರ್ವದಿಂದ ನುಡಿವನು. ಕೃಷ್ಣನು ಅರ್ಜುನನಿಗೆ 'ಯುದ್ಧವನ್ನು ಬಿಟ್ಟುಬಿಡು, ನಾನು ನಿನ್ನನ್ನು ಕಾಪಾಡುವೆನೆಂದು ನುಡಿಯಲು' ಅರ್ಜುನನು ಇದನ್ನು ವಿರೋಧಿಸಿ 'ನಾನು ಯುದ್ಧವನ್ನು ಬಿಡುವುದಿಲ್ಲ ಇದು ನನ್ನ ಕೀರ್ತಿಯ ಪ್ರಶ್ನೆಯಾಗಿದೆ'ಎಂದು

"ಜಯವು ಅಪಜಯವು ನಿನ್ನನ್ನು ಕೂಡಿಹುದು ಸ್ವಾಮಿ
ನಿನ್ನೊಡನೆ ಯುದ್ಧ ಮಾಡಲು ನೀನೆ ಪ್ರೇರಕನೊ"[೧೦೩]

ಎನ್ನುತ್ತ ಶ್ರೀಹರಿಗೆ ವಂದಿಸಿ, ಹರಿಯೊಂದಿಗೆ ಯುದ್ಧಕ್ಕೆ ಸನ್ನದ್ಧನಾಗಿ ನಿಲ್ಲುವನು. ಇಬ್ಬರೂ ಅತೀ ವೀರಾವೇಷದಿಂದ ಬಗೆಬಗೆಯ ಬಾಣಗಳನ್ನು ಪ್ರಯೋಗಿಸಿ ಶರವೃಷ್ಟಿಯನ್ನು ಹರಿಸಿದರು. ಅರ್ಜುನನು ಬಿಟ್ಟ ಎಲ್ಲ ಬಾಣಗಳು ನಿಷ್ಫಲಗೊಳ್ಳಲು, ಶ್ರೀಹರಿಯು ಸೂರ್ಯಾಸ್ತವಾಗುತ್ತಿರಲು ಚಿತ್ರರಥನ ಶಿರವನ್ನು ಕತ್ತರಿಸಿ ಸೈನ್ಯ ಸಮೇತ ಜಯಶಾಲಿಯಾಗಿ ದ್ವಾರಕೆಗೆ ತೆರಳಿದನು.

ಇದನ್ನು ಕಂಡ ನಾರದರು 'ಅರ್ಜುನನೇ ನೀನು ವಚನಭ್ರಷ್ಟನಾದೆ' ಎಂದೊಡನೆ ಪಾರ್ಥನು ಶಫಥ ಗೈದಂತೆ ಅಗ್ನಿಗೆ ಆಹುತಿಯಾಗಲು ಚೆಂಕಿಯನ್ನು ನಿರ್ಮಿಸಿ ದೇಹವನ್ನು ಅಗ್ನಿಗೆ ಅರ್ಪಿಸಲು ಸ್ನಾನ ಮಾಡಿ ಶುಭ್ರ ಬಟ್ಟೆಗಳನ್ನು ಧರಿಸಿ ಸಿದ್ಧನಾದನು. ಅಗ್ನಿಗೆ ಪ್ರದಕ್ಷಿಣೆ ಹಾಕಿ ಮನದಲ್ಲಿ ಶ್ರೀಹರಿಯನು ಸ್ಮರಿಸಿ ಶರೀರ ಆಹುತಿಗೆ ತಯಾರಾದನು. ಈ ವಿಷಯವು ಶ್ರೀನಾರಾಯಣನಿಗೆ ತಿಳಿಯಲು, ಗರುಡವನೇರಿ ವಾಯುವೇಗದಲ್ಲಿ ಅಲ್ಲಿಗೆ ಬರಲು, ದೇವ-ಗಂಧರ್ವರಿಂದ ಹೂಮಳೆ ಎರಗಿತು. ಅರ್ಜುನನನ್ನು ಕಂಡ ಹರಿಯು

"ತಡಿ ತಡಿ ತಡಿ ತಡಿ ಫಲ್ಗುಣ
ದುಡುಕುವುದೇತಕ್ಕೆ ನಾನಿರುತಿರಲು
ಬಿಡು ಬಿಡು ಅಗ್ನಿ ಪ್ರವೇಶವಾ
ಸಡಗರವೇನಿದು ಸರಿಯಲ್ಲವು ಪಾರ್ಥ"[೧೦೪]

ಅರ್ಜುನನ್ನು ಅಗ್ನಿಗಾಹುತಿಯಾಗದಂತೆ ತಡೆಯುವನು. ಆಗ ಅರ್ಜುನನು ತನ್ನ ಅಶ್ರು ಜಲದಿಂದ ಕೃಷ್ಣನ ಪಾದವನ್ನು ತೊಳೆದು, ಅಂದರೆ ಶ್ರೀಹರಿಯ ಪಾದದ ಮೇಲೆ ಬಿದ್ದು ಅಳುತ್ತಾ ತನ್ನ ತಪ್ಪುಗಳನ್ನು ಮನ್ನಿಸುವಂತೆ ಕೇಳಿಕೊಂಡು "ಕಮಲಾಕ್ಷನೇ ರಕ್ಷಿಸು ಗಂಧರ್ವನ" ಎನ್ನುತಾ ಬೇಡಿಕೊಳ್ಳವನು. ಆಗ ಶ್ರೀಹರಿಯು

"ಹೊಂದಿಸಿಡು ರುಂಡಮುಂಡಗಳ ಪಾರ್ಥನೆ ಎನಲು
ಹರಿಯು ನುಡಿಯುವಂದದಲಿ ನಟಿಸಿದನು ಫಲ್ಗುಣನು
ಮುರವೈರಿ ಕರುಣಾಕಟಾಕ್ಷದಿಂದೀಕ್ಷಿಸಲು
ಚಿತ್ರರಥ ಮೈಮುರಿದು ಎದ್ದು ಕುಳಿತಿರಲಾಗ"[೧೦೫]

ಎಲ್ಲ ಪಾಂಡವರು, ಗಂಧರ್ವರು ಅತೀ ಹರುಷಿತರಾಗಿ ಶ್ರೀಹರಿಯ ಪಾದಕ್ಕೆ ವಂದಿಸಿ ಪೂಜೆ ಸಲ್ಲಿಸಿದರು. ಅರ್ಜುನನು ಕರುಣಾಕರನ ಪಾದಕ್ಕೆ ಶಿರತಾಗಿಸಿ ಬಾಷ್ಪಾಂಜಲಿಯಿಂದ ಅಭಿಷೇಕ ಗೈಯ್ದು ಕ್ಷಮೆಯಾಚಿಸಿದನು.

ಶ್ರೀಹರಿಯು ಅರ್ಜುನ ಮೊದಲುಗೊಂಡು ಎಲ್ಲ ಪಾಂಡವ ಪರಿವಾರವನ್ನು ಸಂತೈಸಿ, ಕಾಂತೇಯರಿಂದ ಪೂಜಿಸಿಕೊಂಡು ಹರಸಿ, ಗರುಡನೇರಿ ದ್ವಾರಕೆಗೆ ತೆರಳಿದನು.

"ಶ್ರೀ ಕೃಷ್ಣ ಲೀಲಾಮೃತವ ಕಥೆಯ ವಿಸ್ತಾರದಿ
ಹೇಳಿ ಕೇಳುವವರಿಗೆ ಶ್ರೀ ಹರಿಯು ಒಲಿಯುವನು
ಭಕ್ತಿಯಿಂದಲಿ ಈ ಚರಿತ್ರೆ ಪಠಿಸುವವರನು
ಭಕ್ತವತ್ಸಲ ತನ್ನ ಭಕ್ತ ಸಂಗದೊಳಿಟ್ಟು
ಅತ್ಯಂತ ಹರುಷದಿಂದ ಕಾಪಾಡುವನು"[೧೦೬]

ಜೀವಮ್ಮಳು ಈ ರೀತಿಯ ಫಲಶ್ರುತಿಯೊಂದಿಗೆ ಕೃತಿಗೆ ಮಂಗಳ ಹಾಡಿರುವಳು. ಮತ್ತೇ ವಿದ್ವಾಂಸರು ತಪ್ಪುಗಳನ್ನು ಎಣಿಸದೆ ಪರಮಪುಣ್ಯರ ಚರಿತೆಯನ್ನು ಆದರದಿಂದ ಒಪ್ಪಿಕೊಳ್ಳಬೇಕೆಂದು ವಿನಂತಿಸಿಕೊಳ್ಳುವಳು.

ಇಡೀ ಕೃತಿಯು 'ಭಾಷೆ'ಯ ಮೇಲೆ ನಿಂತಿದೆ. ಕೊಟ್ಟ ಭಾಷೆಯನ್ನು ಉಳಿಸಿಕೊಳ್ಳಲು ಶ್ರೀಕೃಷ್ಣ, ಸುಭದ್ರೆ, ಪಾರ್ಥ ಮೂವರು ಪ್ರಯತ್ನಿಸುವರು. ಈ ಎಲ್ಲ ಕಥೆಯ ಸಂಚಾಲಕನಾಗಿ ನಾರದ ಕಾರ್ಯ

ನಿರ್ವಹಿಸಿದ್ದಾನೆ. 'ಗಾಲವ' ಈ ಕೃತಿಯ ನಾಯಕನಾಗಿ ಕಂಗೊಳಿಸಿದ್ದಾನೆ. ಆದರೂ ಚಿತ್ರರಥನೂ ಸಹ ನಾಯಕನಂತೆ ಕಂಗೊಳಿಸುವನು. ನರ-ನಾರಾಯಣರ ಯುದ್ಧವನ್ನು ಜೀವಮ್ಮ ವಿಶೇಷ ಜಾಣ್ಮೆಯಿಂದ, ಪ್ರತಿಭಾ ಶಕ್ತಿಯಿಂದ ಹೆಣೆದಿದ್ದಾಳೆ. ಮೊರೆ ಹೊಕ್ಕವರನ್ನು, ಆರ್ತರನ್ನು ಕಾಯಬೇಕೆಂಬ ಸಂದೇಶವೂ ಇಲ್ಲಿದೆ.

ಮಾತಿಗೆ ತಪ್ಪದೇ ನಡೆದುಕೊಳ್ಳವುದು ಒಂದು ವ್ರತ. ಇದನ್ನೇ ವಚನಪರಿಪಾಲನೆ ಎಂದು ಕರೆಯುವರು. ಶ್ರೀರಾಮ ತಂದೆಯ ವಚನ ಪರಿಪಾಲನೆಗೆ ವನವಾಸಕ್ಕೆ ತೆರಳಿದ, ಸತ್ಯವ್ರತಕ್ಕೆ ಬದ್ಧನಾದ ಹರಿಶ್ಚಂದ್ರ ಸ್ಮಶಾನ ಕಾಯ್ದನು. ಹೀಗೆ ವಚನ ಪರಿಪಾಲನೆಯು ಬೇರೆ ಬೇರೆ ಕಾಲಗಳಲ್ಲಿ ನಿರೂಪಿತಗೊಂಡಿದೆ. ಶ್ರೀ ಕೃಷ್ಣ ಮತ್ತು ಅರ್ಜುನರು ವಚನ ಪರಿಪಾಲನೆಗಾಗಿಯೇ ಸಂಬಂಧವನ್ನು ಮರೆತು ಹೋರಾಡಬೇಕಾದ ಸಂದರ್ಭ ಈ ಕೃತಿಯಲ್ಲಿ ಮೂಡಿಬಂದಿದೆ. ಇಲ್ಲಿ ಸಂಬಂಧಗಳಿಗಿಂತ ಕೊಟ್ಟ ವಚನ ಪರಿಪಾಲನೆಯೇ ಮುಖ್ಯವಾಗುತ್ತದೆ.

### ೫.೮ ಶ್ರೀ ವರಮಹಾಲಕ್ಷ್ಮಿಯ ಕಥೆ

ಜೀವೂಬಾಯಿಯು ಶ್ರೀಹರಿಯ ಮಹಿಮೆಯನ್ನು ಹೊಗಳುವುದರ ಜೊತೆಗೆ ಇನ್ನುಳಿದ ದೇವ-ದೇವತೆಗಳನ್ನೂ ಸಹ ಸ್ತುತಿಸಿದ್ದಾಳೆ. ಈ ಕೃತಿಯಲ್ಲಿ ಮಹಾಲಕ್ಷ್ಮಿಯ ಮಹಿಮೆಯನ್ನು ಭಕ್ತಿಯಿಂದ ನಿರೂಪಿಸಿದ್ದಾಳೆ. ಇದು ಸಂಪ್ರದಾಯದ ಹಾಡುಗಳಿಂದ ಕೂಡಿದ್ದು, ಶ್ರಾವಣ ಮಾಸದ ವರಮಹಾಲಕ್ಷ್ಮಿಯ ಪೂಜೆಯಂದು ಪಠಿಸಲು ಯೋಗ್ಯವಾಗಿದೆ ಎಂದು ಲೀಲಾವತಿ ಎಸ್.ರಾವ್. ಅವರು ಅಭಿಪ್ರಾಯ ಪಟ್ಟಿರುವುದು ಸಮಂಜಸವಾಗಿದೆ. ಗಣಪತಿ, ಸರಸ್ವತಿ, ಭಾರತಿ, ವರಮಹಾಲಕ್ಷ್ಮಿಗೆ, ವಿಠ್ಠಲನಿಗೆ, ಗುರುಹಿರಿಯರಿಗೆ ವಂದಿಸಿ ಚರಿತ್ರೆಯನ್ನು ಆರಂಭಿಸುವಳು.

ಕೈಲಾಸದಲ್ಲಿ ಒಂದು ದಿನ ಪರಶಿವನು ಸುಂದರಿಯಾದ ಪಾರ್ವತಿಯ ಜೊತೆಗೆ ಕುಳಿತಿರುವಾಗ ಪಾರ್ವತಿಯು ಶಿವನಿಗೆ ವಂದಿಸಿ 'ಹರಿ ಮಹಿಮೆಯಲ್ಲಿ ಚಂದದ ಚರಿತೆಯ ಹೇಳಬೇಕೆಂದು' ಕೇಳಿದಳು. ಆಗ ಶಿವನು

"ಹರಿಭಕ್ತನು ಬಡ ಬ್ರಾಹ್ಮನನೋರ್ವನು
ಇರುತಿರೆ ಒಂದು ಪಟ್ಟಣದಲ್ಲಿ
ಪರಮಪತಿವ್ರತೆಯು ಆತನ ಪತ್ನಿಯು
ಇರುತ್ತಿದ್ದಳು ಸನ್ಮಾರ್ಗದಲಿ"[೧೦೭]

ಪ್ರತಿದಿನ ಸೂರ್ಯೋದಯಕೆ ಸರಿಯಾಗಿ ಎದ್ದು ಪತಿಗೆ ವಂದಿಸಿ, ಸತ್ಕಾರ್ಯಗಳ ಮಾಡಿ ಗುರುಹಿರಿಯರಿಗೆ ವಂದಿಸಿ

ನಿರ್ವಹಿಸಿದ್ದಾನೆ. 'ಗಾಲವ' ಈ ಕೃತಿಯ ನಾಯಕನಾಗಿ ಕಂಗೊಳಿಸಿದ್ದಾನೆ. ಆದರೂ ಚಿತ್ರರಥನೂ ಸಹ ನಾಯಕನಂತೆ ಕಂಗೊಳಿಸುವನು. ನರ-ನಾರಾಯಣರ ಯುದ್ಧವನ್ನು ಜೀವಮ್ಮ ವಿಶೇಷ ಜಾಣ್ಮೆಯಿಂದ, ಪ್ರತಿಭಾ ಶಕ್ತಿಯಿಂದ ಹೆಣೆದಿದ್ದಾಳೆ. ಮೊರೆ ಹೊಕ್ಕವರನ್ನು, ಆರ್ತರನ್ನು ಕಾಯಬೇಕೆಂಬ ಸಂದೇಶವೂ ಇಲ್ಲಿದೆ.

ಮಾತಿಗೆ ತಪ್ಪದೇ ನಡೆದುಕೊಳ್ಳವುದು ಒಂದು ವ್ರತ. ಇದನ್ನೇ ವಚನಪರಿಪಾಲನೆ ಎಂದು ಕರೆಯುವರು. ಶ್ರೀರಾಮ ತಂದೆಯ ವಚನ ಪರಿಪಾಲನೆಗೆ ವನವಾಸಕ್ಕೆ ತೆರಳಿದ, ಸತ್ಯವ್ರತಕ್ಕೆ ಬದ್ಧನಾದ ಹರಿಶ್ಚಂದ್ರ ಸ್ಮಶಾನ ಕಾಯ್ದನು. ಹೀಗೆ ವಚನ ಪರಿಪಾಲನೆಯು ಬೇರೆ ಬೇರೆ ಕಾಲಗಳಲ್ಲಿ ನಿರೂಪಿತಗೊಂಡಿದೆ. ಶ್ರೀ ಕೃಷ್ಣ ಮತ್ತು ಅರ್ಜುನರು ವಚನ ಪರಿಪಾಲನೆಗಾಗಿಯೇ ಸಂಬಂಧವನ್ನು ಮರೆತು ಹೋರಾಡಬೇಕಾದ ಸಂದರ್ಭ ಈ ಕೃತಿಯಲ್ಲಿ ಮೂಡಿಬಂದಿದೆ. ಇಲ್ಲಿ ಸಂಬಂಧಗಳಿಗಿಂತ ಕೊಟ್ಟ ವಚನ ಪರಿಪಾಲನೆಯೇ ಮುಖ್ಯವಾಗುತ್ತದೆ.

### ೫.೮ ಶ್ರೀ ವರಮಹಾಲಕ್ಷ್ಮಿಯ ಕಥೆ

ಜೀವೂಬಾಯಿಯು ಶ್ರೀಹರಿಯ ಮಹಿಮೆಯನ್ನು ಹೊಗಳುವುದರ ಜೊತೆಗೆ ಇನ್ನುಳಿದ ದೇವ-ದೇವತೆಗಳನ್ನೂ ಸಹ ಸ್ತುತಿಸಿದ್ದಾಳೆ. ಈ ಕೃತಿಯಲ್ಲಿ ಮಹಾಲಕ್ಷ್ಮಿಯ ಮಹಿಮೆಯನ್ನು ಭಕ್ತಿಯಿಂದ ನಿರೂಪಿಸಿದ್ದಾಳೆ. ಇದು ಸಂಪ್ರದಾಯದ ಹಾಡುಗಳಿಂದ ಕೂಡಿದ್ದು, ಶ್ರಾವಣ ಮಾಸದ ವರಮಹಾಲಕ್ಷ್ಮಿಯ ಪೂಜೆಯಂದು ಪಠಿಸಲು ಯೋಗ್ಯವಾಗಿದೆ ಎಂದು ಲೀಲಾವತಿ ಎಸ್.ರಾವ್. ಅವರು ಅಭಿಪ್ರಾಯ ಪಟ್ಟಿರುವುದು ಸಮಂಜಸವಾಗಿದೆ. ಗಣಪತಿ, ಸರಸ್ವತಿ, ಭಾರತಿ, ವರಮಹಾಲಕ್ಷ್ಮಿಗೆ, ವಿಠ್ಠಲನಿಗೆ, ಗುರುಹಿರಿಯರಿಗೆ ವಂದಿಸಿ ಚರಿತ್ರೆಯನ್ನು ಆರಂಭಿಸುವಳು.

ಕೈಲಾಸದಲ್ಲಿ ಒಂದು ದಿನ ಪರಶಿವನು ಸುಂದರಿಯಾದ ಪಾರ್ವತಿಯ ಜೊತೆಗೆ ಕುಳಿತಿರುವಾಗ ಪಾರ್ವತಿಯು ಶಿವನಿಗೆ ವಂದಿಸಿ 'ಹರಿ ಮಹಿಮೆಯಲ್ಲಿ ಚಂದದ ಚರಿತೆಯ ಹೇಳಬೇಕೆಂದು' ಕೇಳಿದಳು.
ಆಗ ಶಿವನು

"ಹರಿಭಕ್ತನು ಬಡ ಬ್ರಾಹ್ಮನನೋರ್ವನು
ಇರುತಿರೆ ಒಂದು ಪಟ್ಟಣದಲ್ಲಿ
ಪರಮಪತಿವ್ರತೆಯು ಆತನ ಪತ್ನಿಯು
ಇರುತ್ತಿದ್ದಳು ಸನ್ಮಾರ್ಗದಲಿ"[೧೦೭]

ಪ್ರತಿದಿನ ಸೂರ್ಯೋದಯಕೆ ಸರಿಯಾಗಿ ಎದ್ದು ಪತಿಗೆ ವಂದಿಸಿ, ಸತ್ಕಾರ್ಯಗಳ ಮಾಡಿ ಗುರುಹಿರಿಯರಿಗೆ ವಂದಿಸಿ

"ಲೋಕವಾರ್ತೆಗೆ ತಾ ಕಿವಿ ಗೊಡದಲೆ
ಮೂಕನಂತೆ ವರ್ತಿಸುತಿಹಳು"[೧೦೮]

ಹೀಗೆ ಹರಿಸ್ಮರಣೆಯಲ್ಲಿ ಕಾಲಕಳೆಯುತ್ತಿರುವ ಪತಿವ್ರತೆಯಾದ ಚಾರುಮತಿಯು ಒಂದು ದಿನ ಮೂರು ಝಾವವು ಕಳೆಯಲು ಒಂದು ಕನಸನ್ನು ಕಂಡಳು. 'ಶ್ರೀಲಕ್ಷ್ಮಿಯು ಕೈಯಲ್ಲಿಯ ಕಮಲವ ತಿರುವುತ್ತ ಬರುತ್ತಿರಲು ಚಾರುಮತಿಯು ಅವಳ ಕೈ ಹಿಡದು ಪೀಠದಿ ಕೂಡ್ರಿಸಿ ಅತ್ಯಂತ ಶ್ರದ್ಧೆ ಭಕ್ತಿಯಿಂದ ನಾನಾ ರೀತಿಯಲ್ಲಿ ಪೂಜಿಸಿದಳು' ಇದು ಕನಸೆಂದು ತಿಳಿದು ಎಚ್ಚರಾಗಿ ಚಾರುಮತಿಯು ತನ್ನ ಗಂಡನಿಗೆ ಸಂಭ್ರಮದಿಂದ ವಂದಿಸುವಳು. ಸ್ನಾನವ ಮಾಡಿ ಮಡಿ ಉಟ್ಟು ನಿತ್ಯಕರ್ಮ ಮುಗಿಸಿ ತುಳಸಿಯನ್ನು ಪೂಜಿಸಿದಳು. ನಂತರ ವಯಸ್ಸಾದ ಮುತ್ತೈದೆಯರನ್ನು ಹರುಷದಿಂದ ಕರೆದು ಅವರಿಗೆಲ್ಲ ತಾನು ಕಂಡ ಕನಸನ್ನು ತಿಳಿಸಿ ಇದರ ಅರ್ಥವೇನೆಂದು ಕೇಳಲು, ಆ ಮುತ್ತೈದೆಯರು

"ಸತ್ಯ ಮೂರುತಿ ಸತಿಯು ಬಂದಳು
ಸಾರ್ಥಕವಾಯಿತು ಜನುಮವು
ಪ್ರೀತಿಯಿಂದಲಿ ಪೂಜಿಸೀಕೆಯ"[೧೦೯]

ಎಂಬ ನೀತಿಗಳನ್ನು ಚಾರುಮತಿಗೆ ತಿಳಿಹೇಳಿದರು. ಮತ್ತೇ

"ಶ್ರಾವಣ ಮಾಸದಲಿ ಪೌರ್ಣಿಮೆ
ಭಾರ್ಗವ ಮಾಸದಲಿ
ಚಾರುಮತಿ ನೀ ಪೂಜಿಸೆನ್ನುತ
ನಾರಿಯರೆಲ್ಲ ನುಡಿದು"[೧೧೦]

ಈ ನುಡಿಯ ಕೇಳಿ ಆ ಪತಿವ್ರತೆಯು ತಕ್ಷಣ ಆ ಮುತ್ತೈದೆಯರಿಗೆಲ್ಲ ಬಾಗೀನವನ್ನು ಕೊಟ್ಟು ಶ್ರೀಹರಿಯ ಧ್ಯಾನದಲ್ಲಿ ಮೈಮರೆಯುವಳು.

ದಿನದಿನವೂ ಶ್ರಾವಣ ಮಾಸದ ಬರುವಿಕೆಗಾಗಿ ಚಾರುಮತಿಯು ಸಂಭ್ರಮದಿಂದ ಕಾಯುತ್ತಿರುವಳು. ಶ್ರಾವಣ ಬರಲು ಚಾರುಮತಿಯು ಮನೆಯನೆಲ್ಲ ಸಾರಿಸಿ, ಸುಣ್ಣ ಬಳಿದು, ಚಿತ್ರಗಳನ್ನು ಕೊರೆದು, ತಳಿರು–ತೋರಣಗಳಿಂದ ಶೃಂಗರಿಸಿದಳು. ಬಗೆ ಬಗೆಯ ಫಲ ಪುಷ್ಪಗಳಿಂದ ಮಂಟಪವನ್ನು ಅಲಂಕರಿಸಿದಳು. ನಡುವೆ ಅಕ್ಕಿಯನ್ನು ಹಾಕಿ ಕಲಶದಲ್ಲಿ ಐದು ಬಗೆಯ ಎಲೆಗಳನ್ನು ಹಾಕಿದಳು. ಪೀತಾಂಬರವನ್ನುಟ್ಟು ಹರಿದ್ರಾ, ಕುಂಕುಮ, ಸುಗಂಧ ದ್ರವ್ಯಗಳನ್ನು ಚಾರುಮತಿಯು ಪೂಸಿಕೊಂಡು ಪೂಜೆಗೆ ಸಿದ್ಧಳಾದಳು. ಅಷ್ಟರಲ್ಲಿ ಎಲ್ಲ ಮುತ್ತೈದೆಯರು ಅಲ್ಲಿಗೆ ಬಂದರು.

"ಹೆಜ್ಜೆಯ ಪಾದ ಧ್ವನಿಗಳ ಮಾಡುತ
ಹೆಜ್ಜೆಯ ಮೇಲೆ ಹೆಜ್ಜೆಯನಿಡುತ
ಸಜ್ಜನರೆಸಗುವ ಸೇವೆ ಕೈಗೊಳ್ಳುತ
ಅರ್ಜುನ ಸಖನ ಪಟ್ಟದ ರಾಣಿ ಹರುಷದಲಿ

ಕೋಟಿಸೂರ್ಯರ ಕಾಂತಿತೋರುವ ನಗೆಮುಖ
ಲಲಾಟದಿ ಕೇಸರಿ ಕುಂಕುಮ ಹೊಳೆಯುತ
ಸಾಟಿಯಾರು ಮೂರ್ಜಗದಿ
ಕೋಟಿ ಮನ್ಮಥರ ಸೋಲಿಪ ದೇವನರಿಸಯೆ
ಬಾರಮ್ಮ ಭಾರ್ಗವಿಯೆ ಭಕ್ತವತ್ಸಲೆ ಹರಿಪ್ರಿಯಳೆ"[೧೧೧]

ಎಂದು ಮಹಾಲಕ್ಷ್ಮಿಯನ್ನು ಚಾರುಮತಿಯು ತಮ್ಮ ಮನೆಗೆ ಕರೆಯುವಳು. ಈ ರಚನೆ ನೋಡಿದಾಗ ಪುರಂದರದಾಸರ "ಭಾಗ್ಯದ ಲಕ್ಷ್ಮೀ ಬಾರಮ್ಮ, ನಮ್ಮಮ್ಮ ನೀ ಸೌಭಾಗ್ಯದಾ ಲಕ್ಷ್ಮೀ ಬಾರಮ್ಮ" ಕೀರ್ತನೆಯ ಸಾಲುಗಳು ನೆನಪಿಗೆ ಬರುತ್ತವೆ. ಜೀವೂಬಾಯಿಯವರ ರಚನೆಗಳ ಮೇಲೆ ಪುರಂದರದಾಸರ ಕೀರ್ತನೆಗಳ ಪ್ರಭಾವವು ದಟ್ಟವಾಗಿ ಆಗಿರುವುದು ಇಲ್ಲಿ ಕಂಡು ಬರುತ್ತದೆ.

ಚಾರುಮತಿಯ ಕೋರಿಕೆಯ ಮೇರೆಗೆ ಶ್ರೀಲಕ್ಷ್ಮಿಯು ಕಾಲುಗೆಜ್ಜೆಯ ಸ್ವರವ ಮಾಡುತ, ಪೀತಾಂಬರವನ್ನುಟ್ಟು, ನಡುವಿನಲ್ಲಿ ರತ್ನಪಟ್ಟಿಯ ತೊಟ್ಟುಕೊಂಡು, ಕಂಕಣ, ವಂಕಿ, ನಾಗಮುರಿಗಳನ್ನು ಧರಿಸಿಕೊಂಡು ಅತೀ ಸುಂದರಿಯಾಗಿ, ಕಾಂತಿಯುತೆಯಾಗಿ, ಕಂಗೊಳಿಸುತ ದಯಪಾಲಿಸುವಳು.

"ಮಂಗಳಾಂಗಿಯ ಪಾಂಡು–
ರಂಗನರ್ಧಾಂಗಿಯ
ಕಂಗಳಿಂದಲಿ ನೋಡಿ
ಶೃಂಗಾರ ರೂಪವ"[೧೧೨]

ಕಂಡು ಚಾರಮತಿಯು ಅಪಾರ ಹರುಷದಿಂದ ಶ್ರೀಲಕ್ಷ್ಮಿಯನ್ನು ಪದ್ಮಪುಷ್ಪಗಳಿಂದ ಅರ್ಚಿಸಿದಳು. ಕನಕಾಭರಣಗಳಿಂದ ಹರಿರಾಣಿಯನ್ನು ಅಲಂಕರಿಸುವಳು. ಬಿಡಿ ಮುತ್ತುಗಳು, ಲಿಂಬೆ, ಕಿತ್ತಳೆ, ದಾಳಿಂಬೆ, ಬಾಳೆ, ಮಾವಿನ ಫಲಗಳು, ಕೊಬ್ಬರಿ, ಕಡಲೆ, ಅರಿಶಿಣ ಬೇರು, ಅಡಿಕೆಗಳಿಂದ ಉಡಿಯ ತುಂಬಿದಳು. ಜರದ ಪೀತಾಂಬರ, ಸರಿಗೆ ಅಂಚಿನ ಕುಪ್ಪಸವನ್ನು ಉಡುಗೊರೆಯಾಗಿ ನೀಡಿದಳು, ಎಲ್ಲ ನಾರಿಯರೊಡಗೂಡಿ ರಮಣರಮೆಗೆ ಆರತಿ ಬೆಳಗಿದರು.

ಚಾರುಮತಿಯು ಧನ್ಯತೆಯಿಂದ ಹಲವು ರೀತಿಯಲ್ಲಿ ಖಗವಾಹನನ ಸತಿಯನ್ನು ಸ್ತುತಿಸುವಳು.

"ಪದ್ಮಸಂಭವೆ ಪದ್ಮಪಾಣಿಯೆ
ಪದ್ಮಪದಯುಗ ಪದ್ಮನಯನೆ
ಪದ್ಮಮುಖಿಯೆ ಪದ್ಮನಾಭನ ಹೃ-
ತ್ಪದ್ಮವಾಸಳೆ ಮುದ್ದುರಮೆಯೆ
ಪದ್ಮರಮಣನ ಧ್ಯಾನ ಹೃ-
ತ್ಪದ್ಮದೊಳಗೆ ಬಿಡದೆ ಮಾಳ್ಪ
ಸದ್ಬುದ್ಧಿ ಕೊಟ್ಟು ಪಾಲಿಸೆನ್ನ
ಉದ್ಧರಿಸೆನುತಾ ನಮಿಪೆ"[೧೧೩]

ಹೀಗೆ ಹಲವಂದದಲ್ಲಿ ಲಕ್ಷ್ಮಿಯನ್ನು ಸ್ತುತಿಸಿ ಶರಣಾಗುವಳು. ಧೂಪ-ನೈವೇದ್ಯಗಳಿಂದ ಅರ್ಚಿಸುವಳು. ಬಂದ ಸುವಾಸಿನಿಯರಿಗೆಲ್ಲ ಅರಿಶಿನ ಕುಂಕುಮಗಳನ್ನು ನೀಡಿ, ಉಡಿಯನ್ನು ತುಂಬಿ ಚಂದದಿಂದ ಕಳುಹಿಸುವಳು.

"ಪ್ರಾರ್ಥನೆ ಪಾಡುತ ಶ್ರೀ ಮಹಾಲಕ್ಷ್ಮಿಗೆ
ಪ್ರೀತಿಲಿ ಪುನ: ಪೂಜೆಯ ಮಾಡಿ
ಪ್ರಾರ್ಥಿಸಿಕೊಂಡಳು ಮನದ ಇಷ್ಟಾರ್ಥವ
ಪ್ರತಿಮಾಸದಿ ಪೂಜಿಸುತಿಹಳು"[೧೧೪]

ಈ ಚರಿತೆಯನ್ನು ಉಮಾಪತಿಯು ಕೈಲಾಸದಲ್ಲಿ ತನ್ನ ಅರ್ಧಾಂಗಿಯೆನಿಸಿದ ಉಮೆಗೆ

"ಇಂದಿರೇಶನ ರಮಣಿಯ ಪೂಜೆಯು
ಇಂದು ನಿನಗರುಹಿದೆನೆಂದೆನೆ ಶಿವನು"[೧೧೫]

ಪಾರ್ವತಿಯು ಪತಿಯ ಪಾದಕ್ಕೆರಗಿ ಅಪಾರ ಆನಂದದಿಂದ ನಲಿದಾಡಿ ಹೇಳುವವರು, ಕೇಳುವವರು ನಾಳೆ-ಇಂದು ಎನ್ನದೆ ನಿತ್ಯ ಪಠಿಸುವಂತಾಗಲಿ ಎನ್ನುವಳು.

"ಹರಿ ಸತಿಯಳು ಬಹು ಭಕ್ತಿಯಲಿ ಭಜಿಪರ
ಪರಿಪರಿ ಕ್ಲೇಷವ ಕಳೆಯುವರು
ದುರಿತಗಳವರ ಸಮೀಪಕೆ ಸೇರದು
ಹರಿವುದು ಭವ ತಾಪತ್ರಯಗಳು"[೧೧೬]

ಇಂತು ಫಲಶ್ರುತಿಯನ್ನು ಕೊನೆಗೆ ಹೇಳಿದ ಜೀವೂಬಾಯಿಯು ಇದನ್ನು ಹರಿವಾಯು ಗುರುಗಳು ಕೃಪೆದೋರಿ ಬರೆಸಿದರು. ಶ್ರೀಮತ್ಕೀಲನಾಮ ಸಂವತ್ಸರ ಶ್ರಾವಣ ಶುದ್ಧ ಶುಕ್ರವಾರ, ಅಂದರೆ ೨ನೇ ಅಗಸ್ಟ ೧೯೬೯ ರಂದು ರಚಿಸಿರುವುದಾಗಿ ದಾಖಲಿಸಿರುವಳು.

ಪೂಜೆ ವ್ರತಗಳೆಂದರೆ ಹೆಣ್ಣುಮಕ್ಕಳಿಗೆ ಸಡಗರವೇ ಸಡಗರ. ಅದರಲ್ಲಿಯೂ ಸುಮಂಗಲೆಯರು ಹಲವಾರು ವ್ರತಗಳನ್ನು ಆಚರಿಸುವುದು ಕಂಡುಬರುತ್ತದೆ. ಜೀವೂಬಾಯಿ ತಿಳಿಸಿರುವ ಮಹಾಲಕ್ಷ್ಮಿಯ ವ್ರತವು ಇಂದಿಗೂ ಮುಂದುವರೆದುಕೊಂಡು ಬಂದಿದೆ. ಆಧುನಿಕತೆಯ ನಡುವೆಯೂ ಶ್ರಾವಣಮಾಸ, ಮಾರ್ಗಶಿರ ಮಾಸಗಳಲ್ಲಿ ಶ್ರೀ ಲಕ್ಷ್ಮಿ, ವೈಭವ ಲಕ್ಷ್ಮಿ, ಸಂತಾನ ಲಕ್ಷ್ಮಿ, ವರಮಹಾಲಕ್ಷ್ಮಿಯ ವ್ರತಗಳನ್ನು ಮುತ್ತೈದೆಯರು ಬಹುಭಕ್ತಿಯಿಂದ ಮಾಡುತ್ತಿರುವರು. ಶ್ರೀಲಕ್ಷ್ಮಿಗೆ ಉಡಿಯನ್ನು ತುಂಬುವುದು, ಲಕ್ಷ್ಮಿಯ ಕಥೆಯನ್ನು ಓದುವುದು, ಸುಮಂಗಲೆಯರಿಗೆ ಉಡಿಯನ್ನು ತುಂಬುವದು ಅವ್ಯಾಹತವಾಗಿ ನಡೆದುಕೊಂಡು ಬಂದಿದೆ. ಈ ಕೃತಿಯು ಇಂದಿಗೂ ಪ್ರಸ್ತುತವಾಗಿದೆ.

**೫.೯ – ಶ್ರೀ ಪಾಂಡುರಂಗ ಚರಿತ್ರೆ**

ಗುರುಸ್ತುತಿ, ಹನುಮ, ಗಣೇಶರ ಸ್ತುತಿ ಗೈಯ್ದು ಕೃತಿ ಆರಂಭಿಸುವಳು. ಪಂಡರಪುರದಲ್ಲಿ ಓರ್ವ ಮುತ್ತೈದೆಯು ಪುತ್ರ ಸಂತಾನವಿಲ್ಲದೆ ಬಲುನೊಂದು ಶ್ರೀಹರಿಯನ್ನು ಆರಾಧಿಸುತ್ತಿದ್ದಳು. 'ಬಾಲಕರಿಲ್ಲದ ಬಾಲಿದ್ಯಾತರ ಜನ್ಮ, ಬಾಳೆಲೆ ಹಾಸ್ಯೂಂಡು ಬೀಸಿ ಒಗೆದ್ಹಾಂಗ' ಎಂಬಂತೆ ಅವಳು

"ಕಂದರಿಲ್ಲದ ಬಹು ನಿಂದ್ಯದ ಜನುಮವ
ಪೊಂದಿದೆ ವ್ಯರ್ಥದಿ ಇಂದಿರೆ ರಮಣನೆ"[೧೧೭]

ಎನ್ನುತ ಕಂದರಿಲ್ಲದ ವೇದನೆಯನ್ನು ಶ್ರೀಹರಿಯಲ್ಲಿ ಬಹು ಬಗೆಯಲಿ ನಿವೇದಿಸಿಕೊಳ್ಳವಳು. ಕಂದನ ಲೀಲೆಗಳನ್ನು, ಕಾಲ್ಗೆಜ್ಜೆಯ ನಾದವನ್ನು ನೋಡದ–ಕೇಳದ ಅವಯವಗಳೆಲ್ಲ ವ್ಯರ್ಥವಾಗಿವೆ. ಈ ನೋವು, ವೇದನೆ, ಕೊರತೆಯನ್ನು ಕಳೆಯಲು ಪಾಂಡುರಂಗನಲ್ಲಿ

"ಬಾಲಕನಾದರೆ ಆಳನು ಮಾಡುವೆ
ಬಾಲಕಿಯಾದರೆ ಧಾರೆಯನೆರೆಯುವೆ"[೧೧೮]

ಎಂಬ ಹರಕೆಯನ್ನು ಹೊರುವಳು. ಮತ್ತೆ ಮತ್ತೆ ಹಲವಂದದಲ್ಲಿ ಹರಿಯನ್ನು ಪುತ್ರ ಸಂತಾನ ದಯಪಾಲಿಸುವಂತೆ ಪರಿತಾಪಿಸಿ ಪ್ರಾರ್ಥಿಸಿಕೊಳ್ಳುವಳು.

ಶ್ರೀ ಹರಿಯು ಆ ಗೃಹಿಣಿಯ ಪ್ರಾರ್ಥನೆಗೆ ತೃಪ್ತನಾಗಿ ವರ ನೀಡಿದನು. ಇದರಿಂದ ಆ ಗೃಹಿಣಿಯು ಗರ್ಭವತಿಯಾದಳು. ಶುಭಲಗ್ನದಲ್ಲಿ ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಪ್ರೀತಿಯಿಂದ ಆ ಮಗುವನ್ನು

ಮುದ್ದಿಸುತ ಸಲಹುತ್ತಿದ್ದಳು. ಒಂದು ತಿಂಗಳಾಗಲು ಹರಿ ಬಂದು 'ಶಿಶುವ ಕೊಡು' ಎಂದು ಕೇಳುವನು. 'ಕೊರಳು ಚಂದದಲಿ ಕೊಡುವೆ' ಎನ್ನುವಳು. ಮತ್ತೆ ಕೆಲ ದಿನದ ನಂತರ ಹರಿ ಬರಲು 'ಕುಳಿತಾಡುವ ಹರ್ಷವ ನೋಡಿ ನೀಡುವೆ' ಎನ್ನುವಳು. ಬಂದಾಗೊಮ್ಮೆ ಒಂದು ರೀತಿಯಲ್ಲಿ 'ಬಗೆ ಬಗೆ ಆಟ ನೋಡುವೆ' 'ನಡೆದಾಡಲಿ' ಎಂಬ ನೆವ ಹೇಳಿ ಆ ಮಾನಿನಿಯು ಶಿಶುವನ್ನು ನೀಡದೆ ಹರಿಯನ್ನು ಕಳುಹಿಸುವಳು.

ಇದರಿಂದ ಬೇಸತ್ತ ಶ್ರೀಹರಿಯು ಈಕೆಯ ಗರ್ವವನು ಮುರಿಯುವೆನೆಂದು ಹಲವು ವರ್ಷ ಕಳೆಯಲು ಆ ಹೆಣ್ಣಿಗೆ ತಂದೆ ತಾಯಿಗಳು ವರಾನ್ವೇಷಣೆಯಲ್ಲಿ ತೊಡಗುವರು. ಒಂದು ವರನನ್ನು ನಿಶ್ಚಯಿಸಿ ಲಗ್ನವನ್ನು ನೇಮಿಸುವರು. ಎಲ್ಲೆಡೆಗೆ ಲಗ್ನ ಪತ್ರಗಳನ್ನು ಹಂಚಿದರು. ಬೇರೆಬೇರೆಕಡೆಯಿಂದ ಜನ ಬಂದು ಪಂಡರಪುರವನ್ನು ಸೇರಿದರು. ಆ ವೇಳೆಯಲ್ಲಿ ಕೃಷ್ಣನು ಈ ಮಾನಿನಿಯನ್ನು ಕುರಿತು

"ಏನಿದು ಮಾನಿನಿಯೆ ಈ ವಿಧ ಸೌರಣೆ
ಯಾರಿಗೆ ನೀಡುವೆ ಕನ್ಯೆಯನು
ಆಡಿದ ಮಾತನು ನಡೆಸದಿರುವುದು
ನಾರಿ ನಿನ್ನಪರಾಧವಿದು"[೧೧೯]

ಎಂದು ಎಚ್ಚರಿಸುವನು. ನಿಮ್ಮ ಮಾವನನು ಕೇಳೆಂದು ಆಕೆ ಹೇಳಲು ಕೋಪಗೊಂಡು ಶ್ರೀಹರಿಯು "ಕಾಳಾಹಿವೇಣಿಯನಪರಹರಿಸುವೆನು" ಎಂದು ಸಿಟ್ಟಿನಿಂದ ನುಡಿವನು. ಅಂದು ರಾತ್ರಿ ಲಗ್ನದ ವೇಳೆಯಲ್ಲಿ ಅತೀ ಮಳೆ ಸುರಿಯಿತು. ಹರಿಯು ವರನ ರೂಪದಲ್ಲಿ ಬಂದು

"ಮೀರುವುದು ಶುಭ ಮುಹೂರ್ತವು
ಮೂರು ಜನ ಬಂದಿಹೆವು
ಧಾರೆಯೆರೆದು ಧನ್ಯರಾಗಿರೆಂದು ನುಡಿದನು"[೧೨೦]

ಅಲ್ಲಿ ನೆರೆದಿರುವ ಎಲ್ಲ ಕಮಲಮುಖಿಯರು ಕಮಲನಾಭ ವಿಠ್ಠಲನ ಪಾದವನು ಗಂಗಾಜಲದಿಂದ ತೊಳೆದು ನಮಸ್ಕರಿಸಿ, ಕಳಸಗಿತ್ತಿಯನು ಪೂಜಿಸಿ, ಮಂಗಳಾಷ್ಟಕವನ್ನು ಹಾಡಿ, ಮಂಗಳಾಂಗಿಗೆ ಮಂಗಳ ಸೂತ್ರವ ಕಟ್ಟಿ, ಮುಡಿ ಉಂಗುರ ಹಾಕಿ, ವಧುವರರ ಸೆರಗ ಸೇರಿಸಿ ಕಟ್ಟಿ, ದಂಪತಿಗಳು ಬಕ್ಷ್ಯಗಳಿಂದ ಭೂಮ ಮಾಡಿ ಪವಡಿಸಿದರು. ಹೀಗೆ ತಂದೆತಾಯಿಯರು ಕನ್ಯಾದಾನವನ್ನು ಮಾಡಿ ಧನ್ಯರಾದೆವೆಂದು ಮಲಗಿಕೊಂಡರು.

ಇಷ್ಟೆಲ್ಲ ನಡೆಯುವುದರೊಳಗೆ ಮಳೆ ನಿಂತಿತು. ಬೀಗರು ಆನೆ ಅಂಬಾರಿಸಹಿತ ಬಹು ಸಂಭ್ರಮದಿಂದ ಮದುವೆಯ ಮನೆಗೆ ಬಂದು ಸೇರಿದರು. ಈ ಸಂದರ್ಭದಲ್ಲಿ ಜೀವೂಬಾಯಿಯು ಮದುವೆಯಲ್ಲಿ ನಡೆಯುವ ವಿವಿಧ ಆಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ಮೋಹಕವಾಗಿ ವರ್ಣಿಸಿದ್ದಾಳೆ.

'ಎಲ್ಲ ಜನರಿಗೆ ನೀತಿಯನು ಹೇಳುವ ನೀನು ಹೀಗೇಕೆ ಮಾಡಿದೆ' ಎಂದು ಎಲ್ಲರೂ ಆ ವಧುವಿನ ತಂದೆಯನ್ನು ಪರಿಪರಿಯಾಗಿ ಬೈಯ್ದರು. ಬೀಗರು ಶ್ರೀಹರಿಯನ್ನು ಸ್ತುತಿಸುತ್ತಾ ಕೋಪತಾಪ ಸಹಿಸದೆ ಹೊರಟು ಹೋದರು. ಮುದುವೆಯನ್ನು ಮುಗಿಸಿ ಮಲಗಿರುವ ರಾಜನು ಉದಯದ ನಂತರ ಎದ್ದು ನೋಡಲು, ವಧು-ವರರು ಕಾಣದೆ ಭಯಭೀತರಾಗಿ ಕುಳಿತನು.

ಇತ್ತ ವಿಠ್ಠಲನ ಗುಡಿಯ ಬಾಗಿಲು ತೆರೆದ ಅರ್ಚಕನು ಅಲ್ಲಿಯ ಆಶ್ಚರ್ಯವನ್ನು ಕಂಡು ಜೋರಾಗಿ ಚೀರಿದನು. ಪಂಡರಪುರದ ಎಲ್ಲ ಜನರು ತಕ್ಷಣ ಅಲ್ಲಿ ಸೇರಿದರು. ಶ್ರೀಪತಿಯನ್ನು ಸೇರಿನಿಂತ ವಧುವನ್ನು ಕಂಡು ಬೆರಗಾದರು. ಸೆರಗು ಕಟ್ಟಿರುವುದು, ಶಾವಿಗೆ ಪರಮಾನ್ನ, ಪಾದದ ಅರಿಶಿಣ ಹೊಳೆಯುತ್ತಿರುವುದನ್ನು ಕಂಡು ಆ ತರುಣಿಯನ್ನು 'ನಿನ್ನನ್ನು ಇಲ್ಲಿಗೆ ಯಾರು ಕರೆತಂದರು' ಎಂದು ಕೇಳುವರು. ಅದಕ್ಕೆ ಅವಳು "ನೀವೇ ನನ್ನನ್ನು ಧಾರೆ ಎರೆದು ಕೊಟ್ಟಿರುವಿರಿ" ಎಂದು ಹೇಳಲು ಎಲ್ಲರು ಆಶ್ಚರ್ಯಚಕಿತರಾದರು.

"ನಡಿ ನಡಿ ಸುಕುಮಾರಿಯೆ ನಿನಗಿದು
ತರವಲ್ಲವು ಇಂದಿನ ಕಾರ್ಯ
ಮದುವೆಯ ಗಂಡನು ಶಿಲೆಯಾಗಿರುತಿರೆ
ಮುದ ತೋರುವುದಿಲ್ಲವು ಎನಗೆ"[೧೨೧]

ಎಂದು ತರುಣಿಯನು ನೃಪನು ಕರೆಯುವನು, ಆಗ ಶ್ರೀಹರಿಯು ಆ ಮಾನಿನಿಗೆ ಹಿಂದಿನ ಸಂಗತಿಯನ್ನು ಜ್ಞಾಪಿಸಲು, ದಂಪತಿಗಳು ತಮ್ಮ ತಪ್ಪನ್ನು ಅರಿತುಕೊಂಡು, ಶ್ರೀಹರಿಗೆ ಮಗಳನ್ನು ಒಪ್ಪಿಸಿ ಧನ್ಯತೆಯಿಂದ ಸ್ತುತಿಗೈಯ್ಯುವರು.

"ಒಲ್ಲೆನು ಮಾನವ ವಲ್ಲಭೆಯನು ನಾ
ಕಲ್ಲಾಗಿರುತಿಹೆನಿದು ನೋಡಿ
ಮೆಲ್ಲನೆ ನಿಮ್ಮಯ ಸ್ಥಳಕೆ ಪೋಗಿ ಎನ್ನ
ಉಲ್ಲಾಸದಿ ಸ್ತುತಿ ಮಾಡಿರೆನೆ"[೧೨೨]

ಹರಿಯು ನುಡಿಯಲು ಮಗಳನ್ನು ಕರೆದುಕೊಂಡು ಆ ದಂಪತಿಗಳು ಶ್ರೀಹರಿಯ ಸ್ಮರಣೆಯಲ್ಲಿ ತಲ್ಲೀನರಾದರು.

"ಗುರುಗಳು ಕರುಣದಿ ನುಡಿಸಿದ ನುಡಿಗಳು
ನರಹರಿ ಪಾದಕೆ ಅರ್ಪಿತವು
ಅರಿತ ಸಜ್ಜನರು ಜರಿಯದೆ ಆಲಿಸಿ
ಸರಿ ಮಾಳ್ಪರು ತಪ್ಪುಗಳನ್ನು
ಅರಿಯೆನು ಒಂದನು ಬರೆಯಲು ಗುರುಗಳು
ಬರೆಸಿದರಿದು ಬೇಸರಿಸದಲೆ
ಹಿರಿಯರು ಆದರದಲಿ ಕೇಳುವುದು ಶ್ರೀ
ಪಾವನಂತರ್ಯಾಮಿಯ ಚರಿತೆಯನು"[೧೨೩]

ಎಂದು ಜೀವೂಬಾಯಿಯು ಈ ಕೃತಿಯನ್ನು ನರಹರಿಗೆ ಅರ್ಪಿಸಿದ್ದಾಳೆ. ಎಲ್ಲರೂ ಈ ಪರಮ ಚರಿತೆಯನ್ನು ಭಕ್ತಿಭಾವದಿಂದ ಮತ್ತು ಆದರದಿಂದ ಕೇಳಿ ಕೃತಾರ್ಥರಾಗಬೇಕೆಂದು ಫಲಶ್ರುತಿಯಲ್ಲಿ ತಿಳಿಸಿರುವಳು. ಮಂಗಲದೊಂದಿಗೆ ಮುಕ್ತಾಯವಾಗುತ್ತದೆ. ೨೧ನೇ ಮೇ ೧೯೪೭ರಂದು ಬರೆದಿರುವುದಾಗಿ ದಾಖಲಿಸಿದ್ದಾಳೆ.

ಈ ಕೃತಿಗೆ ಪಾಂಡುರಂಗ ಚರಿತ್ರೆ ಎಂಬ ಹೆಸರಿದ್ದರೂ ಇದು ಪುಂಡಲೀಕನ ಕತೆಯಲ್ಲ. ಇದರ ಮೂಲ ಯಾವುದು ಎಂಬುದರ ಬಗ್ಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ.

**೫.೧೦ – ರಾಧಾಮಾಧವ ವಿಲಾಸ**

ಈ ಕೃತಿ ಎರಡು ಭಾಗಗಳನ್ನು ಒಳಗೊಂಡಿದೆ. ಮೊದಲರ್ಧಭಾಗ ಕೃಷ್ಣನ ಬಾಲಲೀಲೆಗಳನ್ನು ಒಳಗೊಂಡರೆ, ಕೊನೆಯರ್ಧಭಾಗವು ರಾಧಾಮಾಧವರ ಪ್ರಣಯ ವಿಲಾಸದಿಂದ ಕೂಡಿದೆ. ಗಣೇಶ ಸ್ತುತಿಯು ಆರಂಭದಲ್ಲಿದೆ.

"ಗುರುಹಿರಿಯರಡಿಗಳಿಗೆ ಎರಗೆ ವಂದನೆ ಮಾಡಿ
ವರದ ಲಕ್ಷ್ಮಿರಮಣ ನಡೆಸಿರುವ ಲೀಲೆಗಳ
ಪರಮಗುರುಗಳ ಕರುಣದಿಂದ ಪೇಳುವೆನೀಗ
ವರಕೊಟ್ಟು ಪಾಲಿಸು ಸರ್ವರಾದರದಿ ಎನ್ನ"[೧೨೪]

ಎಂದು ಬೇಡಿಕೊಂಡು ಜೀವಮ್ಮ ಕತೆಯನ್ನು ಹೇಳಲು ಆರಂಭಿಸವಳು.

ಒಂದು ದಿನ ಯಶೋಧೆಯು ತನ್ನ ಮಗನನ್ನು ತೊಟ್ಟಿಲೊಳು ಹಾಕಿ, ಆನಂದದಿಂದ ಮುದ್ದಾದ ಮುಖವನ್ನು ನೋಡುತ್ತ ಸಂತೋಷಪಡುತ್ತಿದ್ದಳು. ಆಗ ಅಲ್ಲಿಗೆ ನಂದಗೋಪನು ಕಂದನನ್ನು ಹರುಷದಿಂದ ಮುದ್ದಾಡುತ್ತ, ಇಂದಿರೇಶನು ಮಾಡಿದ ಲೀಲೆಗಳನ್ನು ಒಂದೊಂದಾಗಿ ಪೂತನಿಯ ಕೊಂದನು, ಶಕಟನನು

ಸಂಹರಿಸಿದನು, ಕೇಶಿಧೇನುಕ ಬಕಾಸುರನ ಕೊಂದನು, ಒರಳನೆಳೆದು ಮರವ ಮುರಿದನು, ಹರಿವ ಹಾವನ್ನು ಹಿಡಿದನು, ಗೋಪಿಯರ ವಸ್ತ್ರ ಕದ್ದನು, ಕಾಳಿಂಗ ಸರ್ಪನ ಹೆಡೆ ತುಳಿದನು, ಬೆಟ್ಟವನ್ನು ಬೆರಳಿನಿಂದ ಎತ್ತಿದನು ಮುಂತಾಗಿ ಕೊಂಡಾಡುವನು. ಮಗುವನ್ನು ಮುದ್ದಿಸಿ ಬಗೆ ಬಗೆ ಆಟಗಳನ್ನು ಆಡಿಸುವನು. ಕರುಗಳ ಬಾಲ ಹಿಡಿಯುತ ಹೆಜ್ಜೆ ಇಡಲು, ಬೀಳಲು, ಗೋಪಿಯು ಓಡಿ ಬಂದು ಬಾಲಕನೆಂದು ಎತ್ತಲು ಅತೀ ಭಾರವೆನಿಸಿ 'ಬಾಲಕನು ಇವನಲ್ಲವೆನುತ' ತೊಡೆಯ ಮೇಲಿಂದ ಕೆಳಗೆ ಇಳಿಸಿದಳು. ಆಗ ಬಾಲಕೃಷ್ಣನು ಜೋರಾಗಿ ಅಳಲು ಆರಂಭಿಸುವನು. ತಾಯಿಯು ದೃಷ್ಟಿ ತೆಗೆಯುವಳು.

"ಬಾರೊ ಬಾರೊ ಎನ್ನ ಮೋಹದರಗಿಣಿ ನಿನಗೆ
ನೀಡುವೆನು ಪಾಲ್ಬೆಣ್ಣೆ ಮೊಸರು ಕಜ್ಜಾಯಗಳು
ಹೋಳಿಗೆಣ್ಣೊರಿಗೆಯು ಕಡಬು ದೋಸೆಗಳನ್ನು
. . . . . . . . . . . . . . . . . . . . . . .
ಕಡೆದ ಹೊಸ ಬೆಣ್ಣೆ ಕಜ್ಜಾಯಗಳ ಕೊಡುವೆನು"[೧೨೫]

ಎನ್ನುತ ಮಗುವನ್ನು ಸಮಾಧಾನ ಪಡಿಸಿ 'ಬೇರೆಯವರ ಮನೆಗೆ ಹೋಗಬೇಡ ನಿನ್ನನ್ನು ಕಡೆಗೆ ದೂರುವರು' ಎಂದು ಮಗನಿಗೆ ಎಚ್ಚರಿಕೆ ನೀಡಿ ಜೋಗುಳ ಹಾಡುವಳು. ಎಷ್ಟೇ ಹಾಡಿದರೂ ಮಗು ಮಲಗದಿದ್ದಾಗ ದಶಾವತಾರಗಳನ್ನು ಎತ್ತಿ, ಮಾಡಿರುವ ಕಾರ್ಯವನ್ನು ವರ್ಣಿಸುತ್ತಾ, ಇದರಿಂದ ಆಯಾಸವಾಗಿದೆಯೋ ಎಂದು ಹಾಡುವಳು. ಬಾಲ ಗೋಪಾಲನು ತಾಯಿಯ ಕೈಹಿಡಿದು

"ಅಂಗಳದೊಳು ಬಾರೆ ಬೆಳದಿಂಗಳ ನೋಡುವೆ
ಅಂಗೈಯಲ್ಲಿ ಚಂದ್ರನ ತಂದು ಕೊಡಮ್ಮ
ಕಂಗಳಿಗೆ ನಿದ್ರೆ ಬಾರದೆ ಯಶೋಧೆ
ಚಂದದಿ ಆಟವ ಆಡಬೇಕೆಂದೆನ್ನುವೆ"[೧೨೬]

ತನ್ನ ಮನದಾಸೆಯನ್ನು ತಾಯಿಗೆ ತಿಳಿಸುವನು. ಮಗನ ಮಾತುಗಳನ್ನು ಕೇಳಿ ಯಶೋಧೆಯು ಆಶ್ಚರ್ಯ ಚಕಿತಳಾಗಿ, ಮಗುವನ್ನು ಮುದ್ದಿಸಿ, ಆಗಸದಲ್ಲಿ ಬೆಳಗುವ ಚಂದ್ರನನ್ನು ತಂದುಕೊಡುವ ಬಗೆ ನನಗೆ ಗೊತ್ತಿಲ್ಲವೆಂದು ತನ್ನ ಅಸಹಾಯಕತೆಯನ್ನು ತಿಳಿಸಿದಳು. ಆಗ ತಾಯಿಯ ಮಾತುಗಳನ್ನು ಕೇಳಿ

"ಅಂಥ ಮಾತನು ಕೇಳಿದ ಯಶೋಧೆ ನೋಡೆ
ಚಂದ್ರನ ಕರೆಸುವೆನೆ
ಮಂದರೋದ್ಧಾರ ಕಮಲನಾಭ ವಿಠ್ಠಲ ಕರದಿ
ಚಂದ್ರನ ಪಿಡಿದು ಮಾತೆಗೆ ತೋರಿದ"[೧೨೭]

ಜೀವೂಬಾಯಿಯ ಈ ಕಲ್ಪನೆ ಹೊಸ ಬಗೆಯದ್ದು. ಹೃದಯಕ್ಕೆ ಆನಂದವನ್ನುಂಟು ಮಾಡುವಂಥದ್ದು, ಸಾಮಾನ್ಯವಾಗಿ ಮಕ್ಕಳಿಗೆ ಚಂದ್ರ ಎಂದರೆ ಬಲು ಪ್ರೀತಿ, ಅಂಥ ಸಹಜತೆಯನ್ನು ಕೃಷ್ಣನ ಮೂಲಕ ವ್ಯಕ್ತಪಡಿಸಿ ಸ್ವತ: ಬಾಲಕನೇ ತಾಯಿಗೆ ಚಂದ್ರನನ್ನು ತನ್ನ ಕೈಯಲ್ಲಿ ತೋರಿಸಿರುವುದು ವಿಶೇಷ.

ಕೃಷ್ಣನ ಮೂಲಕ ಜೀವಮ್ಮ ಬಾಲಕರ ಬಾಲ ಕ್ರೀಡೆಗಳನ್ನು ಹಾಗೂ ಲೀಲೆಗಳನ್ನು ಕಣ್ಮುಂದೆ ತೋರಿಸಿದ್ದಾಳೆ. ಹೀಗೆ ಹಗಲಿರುಳು ತನ್ನ ಬಾಲಲೀಲೆಗಳನ್ನು ತೋರುತ್ತ ಹಠ ಮಾಡುವ ಗೋಪಾಲನನ್ನು ಹೇಗೆ ಸಮಾಧಾನ ಮಾಡುವುದೆಂದು, ಗೋಪಿಯೂ ಮುಂದೇನು ಮಾಡಬೇಕೆಂದು ತಿಳಿಯಲಾರದೆ ಕುಳಿತಿರಲು

"ಬೇಗನೆ ರಾಧೆಯು ಬಂದಳು
ನಾನೆತ್ತುತ ಆಡಿಪೆನೆಂದು"[೧೨೮]

ರಾಧೆಯು ಗೋವಿಂದನನ್ನು ಎತ್ತಿಕೊಂಡು 'ನಮ್ಮ ಮನೆಗೆ ಬಾ ಎಂದು' ವಿನಯದಲ್ಲಿ ಬಾಲಕೃಷ್ಣನನ್ನು ಬೇಡಿದಳು.

"ಚಿಣ್ಣಿಕೋಲು ಚಂಡು ಬಣ್ಣದ ಬುಗುರಿಯು
ರಂಗಯ್ಯ ನಿನಗೆ ಕೊಡುವೆನು ಬಾ
ಸಣ್ಣಬಾಲಕರ ಕೂಡಿ ಬೆಣ್ಣೆ ಮೆಲ್ಲುತ ನಮ್ಮ
ಅಂಗಳದಲ್ಲಿ ಕುಣಿದಾಡಲು ಬೇಡುವೆ"[೧೨೯]

ಇಲ್ಲಿ ಜೀವಮ್ಮ ಬಗೆ ಬಗೆಯ ಗ್ರಾಮೀಣ ಜಾನಪದ ಕ್ರೀಡೆಗಳನ್ನು ಗೋವಿಂದನ ಆಟಗಳೊಂದಿಗೆ ಪರಿಚಯಿಸಿದ್ದಾಳೆ.

"ಅಂದಿಗೆ ಪಾಡಗವು ಪೈಜನಿ ರುಳಿ
ಗುಂಡು ಬಿಂದಲಿ ನೀಡುವೆ
ಅಂಗಿ ತೊಡಿಸಿ ಜರದವಲ್ಲಿ ಹೊದಿಸುವೆ ಉ–
ತ್ತುಂಗ ಮಹಿಮ ಸಾಧುಸಂಗ ವಂದಿತ ದೇವ"[೧೩೦]

ವಿವಿಧ ಆಭರಣಗಳನ್ನು ತೊಡಿಸಿ, ಬಣ್ಣ ಬಣ್ಣದ ಬಟ್ಟೆಯ ತೊಡಿಸಿ, ನಿನ್ನ ಆಟವನ್ನು ಶೃಂಗಾರವನ್ನು ಕಂಡು ಸಂತೋಷ ಪಡೆಯುವೆ ಎಂಬ ಭಾವ ವ್ಯಕ್ತಪಡಿಸುತ್ತಾ, ಕೃಷ್ಣನನ್ನು ತಮ್ಮ ಮನೆಗೆ ಬರುವಂತೆ ವಿವಿಧ ಆಶೆಗಳನ್ನು ತೋರಿಸುವಳು. ಏನೇ ಹೇಳಿದರೂ ನಾನು ನಿನ್ನನ್ನು ನಮ್ಮ ಮನೆಗೆ ಒಯ್ಯಲಾರದೆ ಬಿಡಲಾರೆನು ಎಂದು ರಾಧೆ ಹಠ ಹಿಡಿಯುವಳು.

"ಇಂದಿರೇಯರಸನ ಕರೆದೊಯ್ವೆನು ವರ
ಮಂದಗಮನೆ ತಡಮಾಡದಲೆ
ಚಂದದಿ ಆಡಿಸಿ ಪಾಡಿ ತೂಗುವೆನು"[೧೩೧]

ಎನುತ ರಾಧೆಯು ಬಾಲಗೋಪಾಲನನ್ನು ಪ್ರೀತಿಯಿಂದ ತಮ್ಮ ಮನೆಗೆ ಕರೆದು ತಂದಳು. ಮುದ್ದಿನಿಂದ ಜೋಗುಳ ಹಾಡಿ ಕೃಷ್ಣನನ್ನು ಮಲಗಿಸಿದಳು. ರಾಧೆಯು ಕೃಷ್ಣನ ಲಾಲನೆ–ಪಾಲನೆಯಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಳು. ಬಿಸಿನೀರಿನಿಂದ ಎರೆಯುವಳು, ಮುತ್ತುರತ್ನಗಳ ಆಭರಣ ತೊಡಿಸುವಳು. ಭಾರೀ ಪೀತಾಂಬರ ಉಡಿಸಿ ಶೃಂಗಾರಗೊಳಿಸಿ ಹೂದೋಟಕ್ಕೆ ಕರೆದುಕೊಂಡು ಹೋಗುವಳು. ಅಲ್ಲಿ ಕೃಷ್ಣನೊಂದಿಗೆ ಪರಿ ಪರಿ ಆಟಗಳನ್ನು ಆಡುವಲ್ಲಿ ತಲ್ಲೀನಳಾಗುವಳು. ಉದ್ಯಾನದಲ್ಲಿ ಎಲ್ಲೆಡೆ ಪ್ರಶಾಂತವಾದ ವಾತಾವರಣ ಆವರಿಸಿತ್ತು. "ಗಿಳಿ ಕೋಗಿಲೆಗಳು ನಿನ್ನನ್ನು ಧ್ಯಾನಿಸುತಿವೆ, ಇಂದು ನಾನು ಧನ್ಯಳಾದೆ ನೀನು ನನಗಿಂದು ದರ್ಶನ ನೀಡಬೇಕೆಂದು" ಕೃಷ್ಣನನ್ನು ಕೇಳಲು

"ಸನ್ನುತಾಂಗಿಯೆ ಸಂಶಯವ ಬಿಡು
ಬಿನ್ನವಿಸು ನಿನ್ನ ಮನೋಗತ
ಇನ್ನು ತಡಮಾಡದಲೆ ಬೇಗದಿ
ಮನ್ನಿಸೀಗಲೆ ನಿನಗೆ ವರಗಳ"[೧೩೨]

ನಿನ್ನ ಮನೋಬಯಕೆಯನೆಲ್ಲ ಈಡೇರಿಸುವೆ, ಬೇಗನೆ ನಿನ್ನ ಆಸೆಗಳನ್ನು ತಿಳಿಸು ಎಂದು ರಾಧೆಗೆ ಕೃಷ್ಣ ಹೇಳಲು, ಶ್ರೀಹರಿಯ ಮಾತುಗಳನ್ನು ಕೇಳಿ ರಾಧೆಯು ಸಂತೋಷಭರಿತಳಾಗಿ ಹರಿಯ ಕೈಹಿಡಿದು ರಾಧೆಯು

"ಹಗಲಿರುಳು ನಿನ್ನ ಬಿಡಲಾರೆ ಶ್ರೀ
ಕಮಲನಾಭ ವಿಠ್ಠಲನೆ ನಲಿದು
ಅಗಲದಂತಿರು ಎನ್ನಮನದಲಿ"[೧೩೩]

ನೀನೆಂದೆಂದಿಗೂ ನನ್ನನ್ನು ಅಗಲದಿರು ಎನ್ನುತಾ ರಾಧೆಯು ನಾಗಶಯನನಲ್ಲಿ ಬೇಡಿಕೊಳ್ಳುವಳು. ಆಗ ಕೃಷ್ಣನು 'ನೀನು ಬೇಡಿದ ವರವನ್ನು ನೀಡುವೆನು ಚಿಂತಿಸಬೇಡ, ಇದೋ ಅಭಯ ನೀಡುವೆನು ನಿರ್ಭಯವಾಗಿರು' ಎನ್ನುವನು. ರಾಧೆಯು ಹರಿಯ ಅಭಯವನ್ನು ಪಡೆದು ಮಂದಹಾಸವ ಬೀರುತ ಹರಿಯ ಮುಖ ಚಂದ್ರವನ್ನು ಕಣ್ಣಿವೆ ಮುಚ್ಚದಂತೆ ನೋಡಿ

"ನಾಡೊಳಗೆ ಈ ಪುಣ್ಯಕೆ ಎಣೆಗಾಣೆನೆಂದೆನುತ"[೧೩೪]

ಧನ್ಯತೆ ಹೊಂದಿ, ಇಂಥ ಪುಣ್ಯಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ, ಅಂದರೆ ಪರಮಾತ್ಮನ ದರ್ಶನವೇ ಪರಮಸುಖ ಎಂಬುದನ್ನು ಜೀವಮ್ಮ ರಾಧೆಯ ಮೂಲಕ ತಿಳಿಸಿರುವಳು. ಇದೇ ಧನ್ಯತೆಯಿಂದ ರಾಧೆಯು ಮನೋಲ್ಲಾಸಗೊಂಡು ಬಹುದಿನಗಳನ್ನು ಕೃಷ್ಣನೊಂದಿಗೆ ವಿವಿಧ ಆಟಗಳನ್ನಾಡುತ್ತ ಕಳೆದಳು.

ರಾಧೆ-ಕೃಷ್ಣರು ಹೂದೋಟಗಳಲ್ಲಿ ಆಡುವ ವಿವಿಧ ಲೀಲೆಗಳನ್ನು ಗಗನದಿ ನಿಂತು ನೋಡಿದ ದೇವತೆಗಳು ಮಧುಸೂಧನನಿಗೂ ಸುದತಿ ರಾಧೆಗೂ ಮದುವೆ ಮಾಡಬೇಕೆಂದೆನುತ ತಯಾರಿಯನ್ನು ಆರಂಭಿಸುವರು. ದೇವತೆಗಳೆಲ್ಲ ಸೇರಿ ನಂದಗೋಪನ ಮನೆಗೆ ಬಂದು ಮದುವೆಯ ವಿಷಯ ಮಾತನಾಡುವರು. ಆಗ ನಂದಗೋಪನು ಇಂದೇ ಶ್ರೀಹರಿಯ ಲಗ್ನವೆಂದು ಎಲ್ಲ ಜನತೆಗೆ ವಿಷಯ ತಿಳಿಸಿದನು. ಈ ವಿಷಯ ಕೇಳಿದ ನಗರದ ಜನರೆಲ್ಲರೂ ಸಕಲ ಮನೆಗಳನ್ನು ಅಲಂಕಾರಗೊಳಿಸಿ ಅಮರಾವತಿಯನ್ನೇ ಅಣುಕಿಸುವಂತೆ ಇಡೀ ಪುರವನ್ನು ಶೃಂಗಾರಗೊಳಿಸಿದರು.

ವೈದಿಕ ಪರಂಪರೆಯ ಕೌಟುಂಬಿಕ ಪರಸರದಲ್ಲಿ ಬೆಳೆದು ಬಂದ ಜೀವೂಬಾಯಿಯು ತಾನು ಕಂಡ ಗ್ರಾಮೀಣ ಸಂಪ್ರದಾಯಗಳನ್ನು ಸಹಜವಾಗಿಯೆ ಕೃತಿಯಲ್ಲಿ ಪ್ರಸ್ತಾಪಿಸಿರುವಳು. ಕೃಷ್ಣ ರಾಧೆಯರ ವಿವಾಹವನ್ನು ಕುರಿತು ಹೇಳುವಾಗ ನಂದಿ ಪೂಜೆ, ಹಸೆಯಮೇಲೆ ಕುಳಿಸುವುದು, ಮಹಿತದಂತ: ಪಟವ ಹಿಡಿಯುವುದು, ಮಂಗಳಾಷ್ಟಕ, ಮಂಗಲಾಕ್ಷತೆ ಹಾಕುವುದು, ಲಾಜಹೋಮ, ಉರುಟಣೆ, ಓಕಳಿ, ಬಾಗಿಲು ಕಟ್ಟುವುದು, ನಾಗವಲ್ಲಿಗಳನ್ನು ಸೂಚ್ಯವಾಗಿ ತಿಳಿಸಿದ್ದಾಳೆ.

"ರಾಧಾಮಾಧವರ ವಿಲಾಸವ ಮುದದೊಳು
ಆದರದಿಂದಲಿ ಕೇಳುವರ
ಸಾಧುಗಳರಸನು ಸಂಭ್ರಮದಿಂದಲಿ
ಕಾದುಕೊಂಡಿರುವನು ಹಗಲಿರುಳು"[೧೩೪]

ಎನ್ನುವ ಮಾತುಗಳಲ್ಲಿ 'ರಾಧಾಮಾಧವರ ಚರಿತೆ' ಯನ್ನು ಕೇಳುವ, ಹೇಳುವ ಜನರನ್ನು ಶ್ರೀಹರಿಯು ಸದಾಕಾಲ ರಕ್ಷಿಸುವನು ಎಂಬ ವಿಷಯ ಅಡಗಿದೆ. ಈ ಫಲಶ್ರುತಿಯನ್ನು ಕೊನೆಗೆ ಹೇಳಿದ ಜಿವಮ್ಮ

"ಪಂಕಜಾಕ್ಷನು ನಡಿಸಿದ ಲೀಲೆಯ
ಶಂಕೆ ಇಲ್ಲದಲೆ ನುಡಿಸಿರುವ ನಿ
ಶ್ಯಂಕೆಯಿಂದಲಿ ಶ್ರೀ ಗುರುಗಳ ಪಾದ
ಪಂಕಜಗಳಿಗೆರಗುವೆ ಮುದದಿ"[೧೩೫]

ಶ್ರೀಕೃಷ್ಣನ ಲೀಲೆಯನ್ನು ಸರಾಗವಾಗಿ ನುಡಿಸಿರುವ ಶ್ರೀ ಗುರುವಿಗೆ ತಲೆಬಾಗುವಳು. ಇಲ್ಲಿಯ ಸಕಲ ದೋಷಗಳನ್ನು ಹರಿಯ ಪಾದಕ್ಕೆ ಅರ್ಪಿಸಿ, ಅಜ್ಞಾನಿಯಾದ ಎನ್ನಪರಾಧಗಳನ್ನು ಮನ್ನಿಸುವಂತೆ ಗುರು-

ಹಿರಿಯರಿಗೆ ಮತ್ತು ಸಹೃದಯಿಗರಲ್ಲಿ ಅತೀ ವಿನೀತ ಭಾವದಿಂದ ಕೋರಿಕೊಂಡಿದ್ದಾಳೆ. ಜುಲೈ ೫, ೧೯೫೫ ರಂದು ಇದನ್ನು ರಚಿಸಿದ್ದಾಳೆ.

ರಾಧಾ–ಮಾಧವರು ಕೇವಲ ದ್ವಾಪರಯುಗಕ್ಕೆ ಮಾತ್ರ ಪ್ರಸ್ತುತರಾದವರಲ್ಲ, ಭಕ್ತ ಸಮೂಹ ಇಂದಿಗೂ ಅವರನ್ನು ಅಮರ ಪ್ರೇಮದ ಪ್ರತಿಕೃತಿ ಎಂದು ನಂಬಿದ್ದಾರೆ. ಪ್ರೇಯಸಿಯು ತನ್ನ ಪ್ರೇಮಿಯನ್ನೇ ದೇವನೆಂದು ಆರಾಧಿಸುವುದು ಎಲ್ಲ ಕಾಲಕ್ಕೂ ಸತ್ಯವಾದುದು, ತಂದೆ ತಾಯಿಯರು ತಮ್ಮ ಮಗಳು ಇಲ್ಲವೆ ಮಗನು ಪ್ರೇಮಿಸಿದವರೊಂದಿಗೆ ಮದುವೆ ಮಾಡಿ ಅವರನ್ನು ಆಶೀರ್ವದಿಸಬೇಕು. ಪ್ರೀತಿಗೆ ವಿರುದ್ಧವಾಗಿ ಯಾರೊಬ್ಬರು ವರ್ತಿಸಬಾರದು ಎಂಬ ವಾಸ್ತವಿಕತೆಯನ್ನು ಈ ಕೃತಿಯು ರಾಧಾಮಾಧವರ ಮೂಲಕ ತೋರಿಸಿದೆ.

ಒಟ್ಟಿನಲ್ಲಿ ಜೀವೂಬಾಯಿಯವರ ಈ ಖಂಡಕಾವ್ಯಗಳು ಹರಿಕತೆಯ ಧಾಟಿಯಲ್ಲಿವೆ, ಬಿಡಿ ಕೀರ್ತನೆಗಳ ಗುಚ್ಛದಂತೆ ಕಂಡು ಬರುತ್ತವೆ. ತಾನು ಕಡಿಮೆ ಕಲಿತವಳು, ಹೆಚ್ಚಿನ ತಿಳುವಳಿಕೆ ಎನಗಿಲ್ಲವೆಂಬ ಸಂಕೋಚವನ್ನು ಎಲ್ಲ ಕೃತಿಗಳಲ್ಲಿ ಕಾಣುತ್ತೇವೆ.

"ಅರಿತ ಸಜ್ಜನರು ಜರಿಯದೆ ಆಲಿಸಿ
ಸರಿ ಮಾಳ್ಪುದು ತಪ್ಪುಗಳನ್ನು"
"ತಪ್ಪುಗಳೆಣಿಸಲಾಗದು ಬುಧರು'
ಆದರದಿ ತಪ್ಪುಗಳ ತಿದ್ದುತಲಿ ಮನನಲಿದು
ದೂರಗೈಸಿರಿ ದೋಷರಾಶಿಗಳನೆ"

ಇಂಥ ವಿನಮ್ರತೆಯ ಮಾತುಗಳು ಪ್ರತಿಕೃತಿಯ ಆರಂಭ ಇಲ್ಲವೇ ಕೊನೆಯಲ್ಲಿ ಬಂದಿರುತ್ತವೆ. ತನ್ನೆಲ್ಲ ರಚನೆಗಳಿಗೆ ಶ್ರೀಹರಿವಾಯು ಗುರುಗಳ ಅನುಗ್ರಹ ಮತ್ತು ಪ್ರೇರಣೆಯೆ ಕಾರಣವೆಂದು ಕೃತಿಯಲ್ಲಿ ಹೇಳಿಕೊಂಡಿರುವುದು ತಿಳಿದು ಬರುತ್ತದೆ. ಇನ್ನೊಂದು ವಿಶೇಷತೆ ಎಂದರೆ; ಕೃತಿಗಳ ರಚನೆಯ ದಿನಾಂಕವನ್ನು ನಮೂದಿಸಿ, ಕಮಲನಾಭ ವಿಠ್ಠಲ ನಿಡಗುರುಕಿ ಜೀವೂಬಾಯಿ ಎಂದು ದಾಖಲಿಸಿರುವುದು ಸಹ ಅಪರೂಪದ ಮಾಹಿತಿಯಾಗಿದೆ.

ಕೃತಿಗಳ ರಚನಾ ಕ್ರಮ ಗದ್ಯ ಮತ್ತು ಪದ್ಯಗಳ ಮಿಶ್ರತೆಯಿಂದ ಒಡಗೂಡಿದೆ. ಗಣೇಶ ಸ್ತುತಿ, ಕಥೆಯ ಸೂತ್ರರೂಪದ ಪರಿಚಯವಿದೆ. ಕೆಲವೊಮ್ಮೆ ತಾನೇ ನಿರೂಪಕಿಯಾಗಿ ಕಥೆ ಮುಂದುವರೆಸಿದರೆ ಮತ್ತೆ ಕೆಲವೊಮ್ಮೆ ಬೇರೊಂದು ಪಾತ್ರದ ಮೂಲಕ ಕಥೆಯನ್ನು ಹೇಳಿಸಿದ್ದಾಳೆ. (ಶಿವ, ಶುಕಮುನಿ, ನಾರದರು) ಗ್ರಂಥಸ್ಥ ಸಾಹಿತ್ಯದ ಯಾವುದೇ ಛಂದೋಬಂಧ ಇಲ್ಲಿಲ್ಲ. ಕೃತಿಯಲ್ಲಿ ಅಲ್ಲಲ್ಲಿ ಆರ್ಯ, ಕಂದ, ಷಟ್ಪದಿ, ಸೀಸಪದ್ಯ ಎಂದು ಜೀವಮ್ಮ ಹೆಸರಿಸಿದ್ದಾಳೆ. ಆದರೆ ಅವು ಮಾತ್ರ ಗಣಗಳ ಲೆಕ್ಕಕ್ಕೆ ಹೊಂದಾಣಿಕೆಯಾಗುವುದಿಲ್ಲ. ಎಲ್ಲ ಕೃತಿಗಳು ಹಾಡಿನ ಲಯ ಮತ್ತು ಧಾಟಿಯನ್ನು ಹೊಂದಿವೆ. ಈ ಎಲ್ಲ

ಕೃತಿಗಳು ಗೇಯ ಪ್ರಾಧಾನ್ಯತೆಯನ್ನು ಹೊಂದಿವೆ. "ಅರಿಯೆ ಗಣಪ್ರಾಸಗಳನೆಂದು" ಹೇಳಿಕೊಂಡಿರುವುದು ಜೀವಮ್ಮಳ ಪ್ರಾಮಾಣಿಕತೆಯನ್ನು ಬಿಂಬಿಸುತ್ತದೆ.

ಕೃತಿಗಳು ಕಥಾವಸ್ತುವಿಗಿಂತ ಭಕ್ತಿ ಪ್ರಧಾನವಾದ ರಚನೆಗಳಾಗಿವೆ. ಕೆಲವು ಕಡೆ ಅತಿಯಾದ ಸ್ತುತಿಯಿಂದ ಕಥೆಯ ಓಟಕ್ಕೆ ಮಂದಗತಿ ಪ್ರಾಪ್ತಿಯಾಗಿರುವುದು ಕಂಡುಬರುತ್ತದೆ. ಆದ್ದರಿಂದ ಇಲ್ಲಿ ಕಥಾವಸ್ತುವು ಗೌಣವಾಗಿ ಶ್ರೀಹರಿ ಸ್ತುತಿಯೇ ಪ್ರಧಾನವಾಗಿ ನಿಲ್ಲುತ್ತದೆ. ಶ್ರೀಪುರಂದರ ವಿಠ್ಠಲದಾಸರ ಚರಿತ್ರೆ ಅತೀ ದೀರ್ಘವಾದ ಕೃತಿಯಾಗಿದೆ. ಇದು ಜೀವಮ್ಮಳ ಪ್ರತಿಭೆಗೆ ಸಾಕ್ಷಿಯಾಗಿದೆ. ಹರಿಭಕ್ತಿ ಎಲ್ಲ ಕೃತಿಗಳಲ್ಲಿ ಮುಖ್ಯವಾಗಿ ರೂಪಿತಗೊಂಡಿದೆ. ಅಲ್ಲಲ್ಲಿ ಗಣೇಶ, ಮಹಾಲಕ್ಷ್ಮಿ, ಶಿವಸ್ತುತಿಗಳು ಸುಳಿದು ಮರೆಯಾಗುತ್ತವೆ. ಮಹಾಲಕ್ಷ್ಮಿಯ ಸ್ತುತಿಗಾಗಿಯೇ ಪ್ರತ್ಯೇಕ ಕೃತಿ ರಚಿಸಿರುವುದು ತಿಳಿಯುತ್ತದೆ. ಇಲ್ಲಿಯೂ ಲಕ್ಮಿಯ ಜೊತೆಗೆ ಹರಿಯನ್ನು ಸ್ತುತಿಸಿದ್ದಾಳೆ.

ಪುರವರ್ಣನೆ, ಮದುವೆಯ ವೈಭವ, ಹರಿಯ ಮೋಹಿನಿ ಅಲಂಕಾರ, ದಶಾವತಾರ, ಬಾಲಲೀಲೆಗಳ ವರ್ಣನೆಯಲ್ಲಿ ಜೀವೂಬಾಯಿಯ ವರ್ಣನಾ ಕೌಶಲ್ಯ ವ್ಯಕ್ತವಾಗಿದೆ. ಎಲ್ಲ ಕೃತಿಗಳ ಮುಖ್ಯ ವಿಷಯಗಳು ರಾಮಾಯಣ, ಮಹಾಭಾರತ ಮತ್ತು ಭಾಗವತಗಳಿಂದ ಆಯ್ದುಕೊಂಡವುಗಳು. ಶ್ರೀಹರಿಯ ಸ್ತುತಿಗೆ ಭಕ್ತಿ ರಸವು ಪ್ರಧಾನವಾಗಿ ಎರಕಗೊಂಡಿದೆ. ಶೃಂಗಾರ, ಕರುಣ, ಹಾಸ್ಯ ರಸಗಳು ಪೂರಕವಾಗಿ ಬಂದಿರುವುದು ಗೋಚರಿಸುತ್ತದೆ.

ಯಾವುದೇ ರೀತಿಯ ಅಲಂಕಾರಗಳ ಅತಿಯಾದ ಆಡಂಬರವಿಲ್ಲ. ಪ್ರಾಸವು ನಿಯಮಿತತೆಗೆ ಬದ್ಧವಾಗಿಲ್ಲ. ಅಕ್ಷರೇಡ್ಯ, ಸೋಸಿಲ, ಗಾಢಪ, ಗಾಡನೆ, ಕಡಲೊಡೆಯ ಮುಂತಾದ ಶಬ್ದಗಳು ಪುನರಾವರ್ತನೆಗೊಂಡಿರುವವು. ಮಕ್ಕಳ, ಗಂಡಸರ, ಹೆಂಗಸರ ಜಾನಪದೀಯ ಆಭರಣಗಳು ಕೃತಿಯಲ್ಲಿ ಪ್ರಸ್ತಾಪಿತಗೊಂಡಿವೆ. ದೇಶಿಯ ಕ್ರೀಡೆಗಳು ಉಲ್ಲೇಖಿತಗೊಂಡಿವೆ.

ಕೀರ್ತನೆಗಳ ಸ್ವರೂಪವೆಂದರೆ ಪಲ್ಲವಿ, ಅನುಪಲ್ಲವಿ ಇವು ಕಡ್ಡಾಯ. ಮಧ್ಯದಲ್ಲಿ ಬಾಲಲೀಲೆಯೋ, ಆತ್ಮನಿವೇದನೆಯೋ, ಸಮಾಜ ವಿಮರ್ಷೆಯೋ ಕಂಡುಬರುತ್ತದೆ. ಖಂಡಕಾವ್ಯವೆಂದರೆ ಒಂದು ನಿರ್ದಿಷ್ಠ ಕಥಾಭಾಗವನ್ನು ಕುರಿತು ದೀರ್ಘವಾಗಿ ರಚಿಸಿದ ರಚನೆ. ಇದರಲ್ಲಿ ಒಂದು ಕಥಾಭಾಗ ಮಹಾಕಾವ್ಯದ ವಸ್ತುವಾಗಬಲ್ಲುದು. ಇಂಥ ಮಹಾಕಾವ್ಯದ ಸ್ವರೂಪವನ್ನು ಸಂಕ್ಷಿಪ್ತವಾಗಿ ಭಾಗಭಾಗವನ್ನಾಗಿ ಮಾಡಿ ರಚಿಸುವುದು ಖಂಡಕಾವ್ಯವೆನಿಸುವುದು. ಜೀವೂಬಾಯಿಯು ಈ ಮಾದರಿಯಲ್ಲಿ ಶ್ರೀ ಹರಿಲೀಲಾ, ಶ್ರೀ ಕೃಷ್ಣ ಲೀಲಾ, ಶ್ರೀ ಪರಂದರ ವಿಠ್ಠಲದಾಸರ ಚರಿತ್ರೆ, ಶ್ರೀ ಗಾಲವ ಚರಿತ್ರೆ ಮುಂತಾದ ಹತ್ತು ಖಂಡಕಾವ್ಯಗಳನ್ನು ರಚಿಸಿರುವಳು. ವಿಶೇಷವಾಗಿ ಇವುಗಳಲ್ಲಿ ಭಾಗವಾಗಿ ಜೀವೂಬಾಯಿಯು ರಚಿಸಿರುವುದರಿಂದ ನಾವು ಇವುಗಳನ್ನು ಖಂಡಕಾವ್ಯಗಳನ್ನಾಗಿ ಹೆಸರಿಸುತ್ತೇವೆ.

ಜೀವಮ್ಮಳ ಈ ಕೃತಿಗಳ ಭಾಷೆಯು ಆಡುಭಾಷೆಗೆ ಸಮೀಪ. ಇತ್ತ ಪೂರ್ಣ ಗ್ರಂಥಸ್ಥವೂ ಅಲ್ಲದ ಅತ್ತ ಪೂರ್ಣ ಜಾನಪದವೂ ಅಲ್ಲದ ಎರಡರ ನಡುವಿನ ಭಾಷೆಯನ್ನು ಬಳಸಿದ್ದು ತಿಳಿದುಬರುತ್ತದೆ.

## ಅಡಿ ಟಿಪ್ಪಣಿಗಳು

| | | |
|---|---|---|
| ೧. | ಸಮಗ್ರ ದಾಸಸಾಹಿತ್ಯ ಸಂಪುಟ ೧೮ ಭಾಗ ೨ ಪು.ಸಂ. ೨೩೨ | |
| ೨. | ಅದೇ | ಪು.ಸಂ. ೨೪೪ |
| ೩. | ಅದೇ | ಪು.ಸಂ. ೨೪೪ |
| ೪. | ಅದೇ | ಪು.ಸಂ. ೨೪೭ |
| ೫. | ಅದೇ | (ಪ್ರಸ್ತಾವನೆ) ಪು.ಸಂ. ೪೨ |
| ೬. | ಅದೇ | ಪು.ಸಂ. ೨೫೨ |
| ೭. | ಅದೇ | ಪು.ಸಂ. ೨೫೪ |
| ೮. | ಅದೇ | ಪು.ಸಂ. ೨೫೫ |
| ೯. | ಅದೇ | ಪು.ಸಂ. ೨೫೮ |
| ೧೦. | ಅದೇ | ಪು.ಸಂ. ೨೫೯ |
| ೧೧. | ಅದೇ | ಪು.ಸಂ. ೨೬೩ |
| ೧೨. | ಅದೇ | ಪು.ಸಂ.೨೬೩ |
| ೧೩. | ಅದೇ | ಪು.ಸಂ.೨೬೪ |
| ೧೪. | ಅದೇ | ಪು.ಸಂ.೨೬೬ |
| ೧೫. | ಅದೇ | ಪು.ಸಂ.೨೬೭ |
| ೧೬ | ಅದೇ | ಪು.ಸಂ.೨೬೭ |
| ೧೭ | ಅದೇ | (ಪ್ರಸ್ತಾವನೆ) ಪು.ಸಂ.೪೪ |
| ೧೮. | ಅದೇ | ಪು.ಸಂ.೨೬೯ |
| ೧೯. | ಅದೇ | ಪು.ಸಂ.೨೭೦ |
| ೨೦. | ಅದೇ | ಪು.ಸಂ.೨೭೬ |
| ೨೧. | ಅದೇ | ಪು.ಸಂ.೨೭೮ |
| ೨೨. | ಅದೇ | ಪು.ಸಂ.೨೭೯ |
| ೨೩. | ಅದೇ | ಪು.ಸಂ.೨೭೯ |
| ೨೪. | ಅದೇ | ಪು.ಸಂ.೨೮೦ |
| ೨೫. | ಅದೇ | ಪು.ಸಂ.೨೮೩ |
| ೨೬ | ಅದೇ | ಪು.ಸಂ.೨೮೫ |

| | | |
|---|---|---|
| ೨೭. | ಅದೇ | ಪು.ಸಂ.೨೮೭ |
| ೨೮. | ಅದೇ | ಪು.ಸಂ.೨೮೯ |
| ೨೯. | ಅದೇ | ಪು.ಸಂ.೨೯೦ |
| ೩೦. | ಅದೇ | ಪು.ಸಂ.೨೯೮ |
| ೩೧. | ಅದೇ | ಪು.ಸಂ.೩೦೩ |
| ೩೨. | ಅದೇ | ಪು.ಸಂ.೩೦೪ |
| ೩೩. | ಅದೇ | ಪು.ಸಂ.೩೦೬ |
| ೩೪. | ಅದೇ | ಪು.ಸಂ.೩೦೬ |
| ೩೫. | ಅದೇ | ಪು.ಸಂ.೩೧೧ |
| ೩೬. | ಅದೇ | ಪು.ಸಂ.೩೧೩ |
| ೩೭ | ಅದೇ | ಪು.ಸಂ.೩೧೩ |
| ೩೮. | ಅದೇ | ಪು.ಸಂ.೩೧೩ |
| ೩೯. | ಅದೇ | ಪು.ಸಂ.೩೧೪ |
| ೪೦. | ಅದೇ | ಪು.ಸಂ.೩೧೬ |
| ೪೧. | ಅದೇ | ಪು.ಸಂ.೩೧೭ |
| ೪೨. | ಅದೇ | ಪು.ಸಂ.೩೧೭ |
| ೪೩. | ಅದೇ | ಪು.ಸಂ.೩೧೯ |
| ೪೪. | ಅದೇ | ಪು.ಸಂ.೩೧೯ |
| ೪೫. | ಅದೇ | ಪು.ಸಂ.೩೧೯ |
| ೪೬ | ಅದೇ | ಪು.ಸಂ.೩೨೧ |
| ೪೭ | ಅದೇ | ಪು.ಸಂ.೩೨೧ |
| ೪೮. | ಅದೇ | ಪು.ಸಂ.೩೨೨ |
| ೪೯. | ಅದೇ | ಪು.ಸಂ.೩೨೩ |
| ೫೦. | ಅದೇ | ಪು.ಸಂ.೩೨೩ |
| ೫೧. | ಅದೇ | ಪು.ಸಂ.೩೨೪ |
| ೫೨. | ಅದೇ | ಪು.ಸಂ.೩೨೭ |
| ೫೩. | ಅದೇ | ಪು.ಸಂ.೩೨೯ |
| ೫೪. | ಅದೇ | ಪು.ಸಂ.೩೩೦ |
| ೫೫. | ಅದೇ | ಪು.ಸಂ.೩೩೧ |
| ೫೬ | ಅದೇ | ಪು.ಸಂ.೩೩೫ |
| ೫೭ | ಅದೇ | ಪು.ಸಂ.೩೩೮ |
| ೫೮. | ಅದೇ | ಪು.ಸಂ.೩೩೯ |

| | | |
|---|---|---|
| ೫೯. | ಅದೇ | ಪು.ಸಂ.೩೪೦ |
| ೬೦. | ಅದೇ | ಪು.ಸಂ.೩೪೧ |
| ೬೧. | ಅದೇ | ಪು.ಸಂ.೩೪೧ |
| ೬೨. | ಅದೇ | ಪು.ಸಂ.೩೪೨ |
| ೬೩. | ಅದೇ | ಪು.ಸಂ.೩೪೩ |
| ೬೪. | ಅದೇ | ಪು.ಸಂ.೩೪೬ |
| ೬೫. | ಅದೇ | ಪು.ಸಂ.೩೫೧ |
| ೬೬ | ಅದೇ | ಪು.ಸಂ.೩೫೫ |
| ೬೭ | ಅದೇ | ಪು.ಸಂ.೩೫೭ |
| ೬೮. | ಅದೇ | ಪು.ಸಂ.೩೫೮ |
| ೬೯. | ಅದೇ | ಪು.ಸಂ.೩೫೮ |
| ೭೦. | ಅದೇ | ಪು.ಸಂ.೩೬೪ |
| ೭೧. | ಅದೇ | ಪು.ಸಂ.೩೬೫ |
| ೭೨. | ಅದೇ | ಪು.ಸಂ.೩೬೭ |
| ೭೩. | ಅದೇ | ಪು.ಸಂ.೩೬೭ |
| ೭೪. | ಅದೇ | ಪು.ಸಂ.೩೬೮ |
| ೭೫. | ಅದೇ | ಪು.ಸಂ.೩೭೦ |
| ೭೬ | ಅದೇ | ಪು.ಸಂ.೩೭೧ |
| ೭೭ | ಅದೇ | ಪು.ಸಂ.೩೭೨ |
| ೭೮. | ಅದೇ | ಪು.ಸಂ.೩೮೧ |
| ೭೯. | ಅದೇ | ಪು.ಸಂ.೩೯೧ |
| ೮೦. | ಅದೇ | ಪು.ಸಂ.೩೯೩ |
| ೮೧. | ಅದೇ | ಪು.ಸಂ.೩೯೯ |
| ೮೨. | ಅದೇ | ಪು.ಸಂ.೪೦೦ |
| ೮೩. | ಅದೇ | ಪು.ಸಂ.೪೦೧ |
| ೮೪. | ಅದೇ | ಪು.ಸಂ.೪೦೧ |
| ೮೫. | ಅದೇ | ಪು.ಸಂ.೪೦೨ |
| ೮೬ | ಅದೇ | ಪು.ಸಂ.೪೦೩ |
| ೮೭ | ಅದೇ | ಪು.ಸಂ.೪೦೩ |
| ೮೮. | ಅದೇ | ಪು.ಸಂ.೪೦೬ |
| ೮೯. | ಅದೇ | ಪು.ಸಂ.೪೦೭ |
| ೯೦. | ಅದೇ | ಪು.ಸಂ.೪೦೮ |

| | | |
|---|---|---|
| ೯೧. | ಅದೇ | ಪು.ಸಂ.೪೦೯ |
| ೯೨. | ಅದೇ | ಪು.ಸಂ.೪೦೯ |
| ೯೩. | ಅದೇ | ಪು.ಸಂ.೪೧೧ |
| ೯೪. | ಅದೇ | ಪು.ಸಂ.೪೧೧ |
| ೯೫. | ಅದೇ | ಪು.ಸಂ.೪೧೨ |
| ೯೬ | ಅದೇ | ಪು.ಸಂ.೪೧೨ |
| ೯೭ | ಅದೇ | ಪು.ಸಂ.೪೧೩ |
| ೯೮. | ಅದೇ | ಪು.ಸಂ.೪೧೪ |
| ೯೯. | ಅದೇ | ಪು.ಸಂ.೪೧೫ |
| ೧೦೦. | ಅದೇ | ಪು.ಸಂ.೪೧೬ |
| ೧೦೧. | ಅದೇ | ಪು.ಸಂ.೪೧೬ |
| ೧೦೨. | ಅದೇ | ಪು.ಸಂ.೪೨೧ |
| ೧೦೩. | ಅದೇ | ಪು.ಸಂ.೪೨೨ |
| ೧೦೪. | ಅದೇ | ಪು.ಸಂ.೪೨೭ |
| ೧೦೫. | ಅದೇ | ಪು.ಸಂ.೪೨೮ |
| ೧೦೬. | ಅದೇ | ಪು.ಸಂ.೪೩೧ |
| ೧೦೭. | ಅದೇ | ಪು.ಸಂ.೪೩೩ |
| ೧೦೮. | ಅದೇ | ಪು.ಸಂ.೪೩೩ |
| ೧೦೯. | ಅದೇ | ಪು.ಸಂ.೪೩೬ |
| ೧೧೦. | ಅದೇ | ಪು.ಸಂ.೪೩೬ |
| ೧೧೧. | ಅದೇ | ಪು.ಸಂ.೪೩೭ |
| ೧೧೨. | ಅದೇ | ಪು.ಸಂ.೪೪೦ |
| ೧೧೩. | ಅದೇ | ಪು.ಸಂ.೪೪೫ |
| ೧೧೪. | ಅದೇ | ಪು.ಸಂ.೪೪೫ |
| ೧೧೫. | ಅದೇ | ಪು.ಸಂ.೪೪೬ |
| ೧೧೬ | ಅದೇ | ಪು.ಸಂ.೪೪೬ |
| ೧೧೭. | ಅದೇ | ಪು.ಸಂ.೪೪೯ |
| ೧೧೮. | ಅದೇ | ಪು.ಸಂ.೪೫೦ |
| ೧೧೯. | ಅದೇ | ಪು.ಸಂ.೪೫೪ |
| ೧೨೦. | ಅದೇ | ಪು.ಸಂ.೪೫೫ |
| ೧೨೧. | ಅದೇ | ಪು.ಸಂ.೪೬೧ |
| ೧೨೨. | ಅದೇ | ಪು.ಸಂ.೪೬೮ |

| | | |
|---|---|---|
| ೧೨೩. | ಅದೇ | ಮು.ಸಂ.೪೬೯ |
| ೧೨೪. | ಅದೇ | ಮು.ಸಂ.೪೭೧ |
| ೧೨೫. | ಅದೇ | ಮು.ಸಂ.೪೭೪ |
| ೧೨೬ | ಅದೇ | ಮು.ಸಂ.೪೭೬ |
| ೧೨೭ | ಅದೇ | ಮು.ಸಂ.೪೭೭ |
| ೧೨೮. | ಅದೇ | ಮು.ಸಂ.೪೭೭ |
| ೧೨೯. | ಅದೇ | ಮು.ಸಂ.೪೭೮ |
| ೧೩೦. | ಅದೇ | ಮು.ಸಂ.೪೭೯ |
| ೧೩೧. | ಅದೇ | ಮು.ಸಂ.೪೮೦ |
| ೧೩೨. | ಅದೇ | ಮು.ಸಂ.೪೮೨ |
| ೧೩೩. | ಅದೇ | ಮು.ಸಂ.೪೮೩ |
| ೧೩೪. | ಅದೇ | ಮು.ಸಂ.೪೮೭ |
| ೧೩೫. | ಅದೇ | ಮು.ಸಂ.೪೮೭ |

ಅಧ್ಯಾಯ ೬

# ಜೀವೂಬಾಯಿಯ ಕೀರ್ತನೆಗಳ ಭಾಷೆ ಮತ್ತು ಛಂದಸ್ಸು

ಜೀವೂಬಾಯಿಯು ತನ್ನ ಕೀರ್ತನೆಗಳಲ್ಲಿ ಭಕ್ತಿ, ಆತ್ಮ ನಿವೇದನೆ, ಭಗವಂತನ ಸಂಕೀರ್ತನೆ, ಸಂಪ್ರದಾಯ ಕೀರ್ತನೆಗಳು ಹಾಗೂ ಖಂಡ ಕಾವ್ಯಗಳಲ್ಲಿ ವಿಶಿಷ್ಟವಾದ ಗ್ರಾಮೀಣ ಭಾಷೆಯನ್ನು ಪ್ರಯೋಗಿಸಿರುವಳು. ಅಲ್ಲಿ ಕೆಲವು ಭಾಷಿಕ ವ್ಯತ್ಯಾಸಗಳನ್ನು, ಧ್ವನಿ ವ್ಯತ್ಯಾಸಗಳನ್ನು ಕಾಣುತ್ತೇವೆ. ದ್ವಿರುಕ್ತಿ, ಅನುಕರಣಾವ್ಯಗಳ ಪ್ರಯೋಗವನ್ನು ಕಾಣುತ್ತೇವೆ. ಅವುಗಳ ವಿವೇಚನೆಯನ್ನು ಈ ರೀತಿಯಲ್ಲಿ ಮಾಡಲಾಗಿದೆ.

೧) **ಭಾಷೆ** – ಭಾಷೆಯೆಂಬುದು ಮಾನವನಿಗೆ ದೈವದತ್ತ ಕಾಣಿಕೆ, ಎಲ್ಲ ಪ್ರಾಣಿಗಳ ಹಾಗೆ ಮನುಷ್ಯನೂ ಸಹ ಒಂದು ಪ್ರಾಣಿ. ಉಳಿದ ಪ್ರಾಣಿಗಳಿಗಿಂತ ಮಾನವನು ಭಿನ್ನವಾಗಿರಲು ಕಾರಣ ಆತನಲ್ಲಿರುವ ಬುದ್ಧಿಶಕ್ತಿ ಮತ್ತು ಭಾವನೆಗಳನ್ನು ಹಂಚಿಕೊಳ್ಳುವ ವಿಶೇಷ ಗುಣ. ಇಂಥ ಭಾಷೆಯನ್ನು ಮನುಷ್ಯ ತನ್ನ ದಿನ ನಿತ್ಯದ ಬದುಕಿನಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಳ್ಳತ್ತಿವರುವನು. ಅಂತೆಯೇ ಸಾಹಿತ್ಯದಲ್ಲಿಯೂ ಸಹ ಭಾಷೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ದುಡಿಸಿಕೊಂಡು ತನ್ನ ಭಾವನೆಗಳನ್ನು ಮತ್ತು ಚಿಂತನೆಗಳನ್ನು ಎರಕ ಹೊಯ್ದಿರುವುದು ಗೋಚರಿಸುವ ಸಂಗತಿ. ಜನಪದರಿಂದ ಆರಂಭವಾದ ಈ ಸಾಹಿತ್ಯ ಯಾತ್ರೆ ಶಿಷ್ಟ ಪರಂಪರೆಯ ಮೂಲಕ ವಿಭಿನ್ನ ಅವಸ್ಥೆಗಳಲ್ಲಿ ಹಲವು ರೂಪಗಳಲ್ಲಿ ಹಾಯ್ದು ಮುಂದೆ ಸಾಗಿದೆ.

ಚಂಪೂ ಸಾಹಿತ್ಯದ ಭಾಷೆ ಸಂಸ್ಕೃತ ಭೂಯಿಷ್ಟವಾದದು. ಹಳಗನ್ನಡದ ಅವಸ್ಥೆಯದು. 'ವಿದ್ವಾಂಸರಿಗಾಗಿಯೇ ಸಾಹಿತ್ಯ'ವೆಂಬುದು ರೂಢಿಯಲ್ಲಿತ್ತು. ವಿವಿಧ ಛಂದೋಬಂಧಗಳನ್ನು, ಶಬ್ದ ಚಮತ್ಕಾರಗಳನ್ನು ಬಳಸಿ ಕಾವ್ಯಕ್ಕೆ ಮೆರಗನ್ನು ತಂದುಕೊಟ್ಟರು. ನಂತರದ ವಚನ ಸಾಹಿತ್ಯವು 'ಜನಸಾಮಾನ್ಯರಿಗಾಗಿ ಸಾಹಿತ್ಯ' ಎಂಬುದನ್ನು ಧ್ಯೇಯವನ್ನಾಗಿಟ್ಟುಕೊಂಡು ಜನಭಾಷೆಯನ್ನು ಸಾಹಿತ್ಯಕ್ಕೆ ಬಳಸಿಕೊಂಡರು. ಇದುವರೆಗೆ ಬಹು ಗಾಂಭೀರ್ಯತೆಯಿಂದ ಬೆಳೆದು ಬಂದ ಚಂಪೂ ಶೈಲಿಯನ್ನು ಅನುಸರಿಸದೇ, ತಮ್ಮದೆ ಆದ ಸರಳವಾದ 'ವಚನ' ರೂಪವನ್ನು ಪ್ರಯೋಗಕ್ಕೆ ತಂದರು. ಇದು ಶಿವಶರಣರ ಒಂದು ವಿಶೇಷತೆ. ಜನವಾಣಿಯನ್ನೇ ದೇವವಾಣಿಯನ್ನಾಗಿಸಿದ ಹಿರಿಮೆ ವಚನ ಸಾಹಿತ್ಯದ್ದು. ದೇವರದಾಸಿಮಯ್ಯನಿಂದ ಆರಂಭಗೊಂಡ 'ವಚನ' ಪರಂಪರೆ ಬಸವೋತ್ತರ ಯುಗದವರೆಗೂ

ಮುಂದುವರೆಯಿತು. ವಸ್ತುಕತೆಯನ್ನು ತೊರೆದ ಶಿವಶರಣರು ವರ್ಣಕತೆಯನ್ನು ಮೈಗೂಡಿಸಿಕೊಂಡರು. ಇಂಥ ವಿಭಿನ್ನ ಸಾಹಿತ್ಯ ರೂಪಗಳಿಗೆ ಭಾಷೆಯೆ ಮೂಲ ದ್ರವ್ಯ. ಹಾಗಾದರೆ, ದಾಸ ಸಾಹಿತ್ಯದ ಭಾಷೆಯ ವಿಶೇಷತೆಯೇನು? ಎಂಬ ಪ್ರಶ್ನೆ ನಮ್ಮೆದುರು ನಿಲ್ಲುತ್ತದೆ.

ನರಹರಿತೀರ್ಥರಿಂದ ಆರಂಭಗೊಂಡ ದಾಸಪರಂಪರೆಯು ವ್ಯಾಸರಾಯರಲ್ಲಿ ಒಂದು ನೆಲೆಯನ್ನು ಕಂಡುಕೊಂಡಿತು. ಪುರಂದರದಾಸ ಮತ್ತು ಕನಕದಾಸರಲ್ಲಿ ಉನ್ನತತೆಯನ್ನು ಸಂಪಾದಿಸಿತು. ವಿಜಯನಗರದ ವೈಭವದೊಂದಿಗೆ ದಾಸಸಾಹಿತ್ಯವು ಒಳ್ಳೆಯ ಫಸಲನ್ನು ಪಡೆದುಕೊಂಡಿತು. ವಿಜಯನಗರ ಸಾಮ್ರಾಜ್ಯದ ಪತನಾನಂತರ ವಿಜಯದಾಸರು, ಮಹಿಪತಿದಾಸರು ಮುಂತಾದವರಿಂದ ದಾಸಸಾಹಿತ್ಯ ಪುನರ್ ವೈಭವವನ್ನು ತಂದುಕೊಂಡಿತು. ಈ ದಾರಿಯಲ್ಲಿ ಮಹಿಳೆಯರೂ ಸಹ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಅವರಲ್ಲಿ ಗಲಗಲಿ ಅವ್ವನವರು, ಹರಪನಹಳ್ಳಿ ಭೀಮವ್ವ, ಹೆಳವನಕಟ್ಟೆಯ ಗಿರಿಯಮ್ಮ ಮತ್ತು ನಿಡುಗುರುಕಿಯ ಜೀವೂಬಾಯಿಯರು ಪ್ರಮುಖರು. ಈ ಮಹಿಳಾ ಕೀರ್ತನಕಾರ್ತಿಯರಿಂದ ದಾಸಸಾಹಿತ್ಯದಲ್ಲಿ ಮಹಿಳಾ ಸಂವೇದನೆಗಳು ವ್ಯಕ್ತಗೊಂಡವು.

"ದಾಸರ ಅಭಿವ್ಯಕ್ತಿ ಮಾಧ್ಯಮದಲ್ಲಿ ಭಾಷೆಯೂ ಒಂದಾಗಿದೆ. ಅವರು ಹಾಡು, ಕುಣಿತ, ಸಂಗೀತದೊಂದಿಗೆ ಪ್ರಾದೇಶಿಕ ಭಾಷೆಯನ್ನು ಹಾಡುವಿಕೆಯಲ್ಲಿ ಸಮ್ಮಿಳನ ಮಾಡಲು ಹಾತೊರೆಯುತ್ತಾರೆ. ಇದು ಕೇಳುಗರ ಕುತೂಹಲ, ಆಸಕ್ತಿ ಕೆರಳಿಸಿ ಸಹೃದಯರನ್ನು ಆಕರ್ಷಿಸುತ್ತದೆ"[1] ಈ ಆಕರ್ಷಣೆಯೇ ದಾಸಸಾಹಿತ್ಯದ ಜನಪ್ರೀಯತೆಗೆ ಮುಖ್ಯ ಕಾರಣ. ತಂಬೂರಿ ಮತ್ತು ತಾಳದ ನಿನಾದ, ಗೆಜ್ಜೆಯ ಧ್ವನಿಯ ಮೂಲಕ ದಾಸಸಾಹಿತ್ಯವನ್ನು ರಾಗಬದ್ಧವಾಗಿ ಹಾಡುತ್ತಾ ಮನೆ ಮನೆಗೆ ಮುಟ್ಟಿಸಲು ಕೀರ್ತನೆ ರೂಪವನ್ನು ಹರಿದಾಸರು ಅತ್ಯಂತ ಪರಿಣಾಮಕಾರಿಯಾಗಿ ಬಳಸಿದರು. ತಾವು 'ಪಂಡಿತರು' ಎಂಬ 'ಅಹಂ' ನ್ನು ತೊರೆದು ಜನಸಾಮಾನ್ಯರೊಂದಿಗೆ ಬೆರೆತು ತಮ್ಮೊಳಗಿನ ಆಧ್ಯಾತ್ಮಿಕ, ಲೌಕಿಕ, ವಿಡಂಬನಾತ್ಮಕ ಚಿಂತನೆಗಳನ್ನು ಜನ ಭಾಷೆಯ ಮೂಲಕ ಹರಿಸಿದರು. ಈ ಭಾಷಾಬಂಧವು ಬಹುಜನ ಪ್ರೀತಿ ಮತ್ತು ಆಕರ್ಷಣೆಗೆ ಕಾರಣವಾಯಿತು.

"ದಾಸರ ಕೃತಿಗಳು ರಾಗ, ತಾಳ, ಲಯಬದ್ಧವಾಗಿದ್ದು, ಸರಳ ಶೈಲಿಯಲ್ಲಿ ರಚಿತಗೊಂಡಿರುವುದರಿಂದ ಒಮ್ಮೆ ಓದಿದವರಿಗೆ ಪುನಃ ಓದಬೇಕೆಂಬ, ಓದಿದಮೇಲೆ ಹಾಡಬೇಕೆಂಬ, ಹಾಡಿದ ಮೇಲೆ ಅಲ್ಲಿಯ ತತ್ವಗಳನ್ನು ಅರಿಯಬೇಕೆಂಬ ಆಸಕ್ತಿ ಮೂಡುತ್ತದೆ"[2] ಈ ಮಾತನ್ನು ಜೀವೂಬಾಯಿಯವರ ಕೀರ್ತನೆಗಳಿಗೂ ಅನ್ವಯಿಸಿಕೊಳ್ಳಬಹುದು. ಸಾಮಾಜಿಕ ವ್ಯವಸ್ಥೆ, ಬದುಕಿನ ಕ್ಷಣಿಕತೆ, ಮುಂತಾದ ವಿಷಯಗಳ ಬಗ್ಗೆ ದಾಸರು ನೇರವಾಗಿ ಇಲ್ಲವೇ ಕೆಲವು ಪ್ರತಿಮೆ, ರೂಪಕ, ದೃಷ್ಟಾಂತಗಳ ಮೂಲಕ ಧ್ವನಿಯೆತ್ತಿರುವುದು ಕೀರ್ತನಕಾರರ ವಿಶೇಷತೆ. ಧರ್ಮ, ಜಾತಿ, ಲಿಂಗ, ಆಚಾರ-ವಿಚಾರಗಳ ಬಗ್ಗೆ ಬೇಸರವೆನಿಸಿದಾಗ ವಿಡಂಬನೆ ಮಾಡಿರುವರು. ದಾಸಸಾಹಿತ್ಯದಲ್ಲಿ ಪುರಂದರದಾಸರಷ್ಟು ಪ್ರತಿಮೆ

ರೂಪಕಗಳನ್ನು ಬೇರೆ ಯಾವ ದಾಸರೂ ಬಳಸಿಲ್ಲವೆಂಬುದು ತಿಳಿದು ಬರುತ್ತದೆ. ಎಲ್ಲ ದಾಸರೂ ಗ್ರಾಮೀಣ, ಅದರಲ್ಲಿಯೂ ತಮ್ಮ ಪ್ರಾದೇಶಿಕ ಭಾಷೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ.

ಕನ್ನಡದ ಜೊತೆಗೆ ಬೇರೆ ಬೇರೆ ಭಾಷೆಗಳ ಶಬ್ದಗಳನ್ನು ಕೆಲವೊಮ್ಮೆ ಬಳಸಿಕೊಂಡಿರುವುದು ಕಂಡುಬರುತ್ತದೆ. ಮಗುವಿನ ಭಾಷೆಯನ್ನು, ಸ್ತ್ರೀ ಸಂವೇದನೆಗಳನ್ನು ಹಾಗೂ ಸಂಸ್ಕೃತಿಯನ್ನು ಕೀರ್ತನೆಯಲ್ಲಿ ಮಿಳಿತಗೊಳಿಸಿದ್ದಾರೆ. ಅಂಶ ಗಣದ ಛಂದೋಲಯವನ್ನು ಮತ್ತು ಗೇಯತೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ದುಡಿಸಿಕೊಂಡಿದ್ದಾರೆ. ಈ ಎಲ್ಲ ಭಾಷಿಕ ಅಂಶಗಳನ್ನು ನಿದರ್ಶನದೊಂದಿಗೆ ಹೀಗೆ ಗ್ರಹಿಸಿಕೊಳ್ಳಲಾಗಿದೆ.

**ಪದಪ್ರಯೋಗಗಳು**

- ಅಬಿಂದುಕ ಪದಗಳು ಸಬಿಂದುಕಗಳಾಗಿ ಉಪಯೋಗಿಸಿರುವುದು ಜೀವೂಬಾಯಿಯ ಕೀರ್ತನೆಗಳಲ್ಲಿ ಕಾಣುತ್ತೇವೆ.

  ಉದಾ – ದಾಂಟು < ದಾಟು
  ಸಂತತ < ಸತತ
  ಪನ್ನಂಗ < ಪನ್ನಗ

- ತದ್ಭವಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿರುವಳು, ಇದಕ್ಕೆ ಕಾರಣ ಜನಪದರು ತದ್ಭವದ ಪ್ರಯೋಗವನ್ನು ನಿರರ್ಗಳವಾಗಿ ಮಾಡುವರು.

  ಉದಾ – ಕೀರ್ತಿ > ಕೀರುತಿ ರತ್ನ > ರತನ
  ಸ್ತುತಿಸು > ನುತಿಸು ಭಸ್ಮ > ಭಸುಮ
  ಪದ್ಮ > ಪದುಮ ಭಕ್ತಿ > ಭಕುತಿ
  ನರಸಿಂಹ > ನರಸಿಂಗ ಕ್ಷೀರವಾಣಿ > ಕೀರವಾಣಿ

- ಏ > ಆ್ಯ ಧ್ವನಿಯಾಗಿ ಪರಿವರ್ತನೆಗೊಳ್ಳುವ ಇಲ್ಲವೆ ಪ್ರಯೋಗವಾಗುವ ಉದಾಹರಣೆಗಳು ದೊರೆಯುತ್ತವೆ.

  ಉದಾ – ವೇಳೆ > ವ್ಯಾಳೆ
  ಹೇಗೆ > ಹ್ಯಾಂಗ
  ವೇಳ > ವ್ಯಾಳ

- ಕನ್ನಡ ಪದಗಳ ಜೊತೆಗೆ ಕೆಲವು ಅನ್ಯದೇಶಿಯ ಪದಗಳನ್ನು ಜೀವಮ್ಮ ಬಳಸಿರುವುದು ಕಾಣಬರುತ್ತದೆ.

  ಉದಾ – ಸೌಳಸಾಸಿರ ಚೋರ

ಪಾಹಿ ಜೀಯಾ ಮೋರ

- ದ್ವಿತ್ವಾಕ್ಷರಗಳನ್ನು ಶಿಥಿಲಗೊಳಿಸಿ ಪ್ರಯೋಗಿಸಿರುವ ಬಗೆಗೆ ಹಲವಾರು ನಿದರ್ಶನಗಳು ದೊರೆಯತ್ತವೆ.

ಉದಾ – ಪರಿಯಾಯ(ಪರ್ಯಾಯ) ರುಕುಮಿಣಿ (ರುಕ್ಮಿಣಿ)

ಅಳುತಾರೆ (ಅಳುತ್ತಾರೆ) ಗುಪಿತ (ಗುಪ್ತ)

ಕೋಲಾಪುರ (ಕೊಲ್ಹಾಪುರ) ಪರಿಕಿಸು (ಪರಿಕ್ಷಿಸು)

ಸರುವರು (ಸರ್ವರು) ಗರುವ (ಗರ್ವ)

ನಿಲಿಸು (ನಿಲ್ಲಿಸು)

ಇವುಗಳಲ್ಲಿ ಕೆಲವೊಂದು ತದ್ಭವಗಳು ಸೇರಿಕೊಂಡಿವೆ. ಇದಕ್ಕೆ ಕಾರಣ ಸಂಗೀತಕ್ಕೆ ಅಳವಡಿಸುವಾಗ ದ್ವಿತ್ವಗಳನ್ನು ಅರ್ಥ ವ್ಯತ್ಯಯವಾಗದಂತೆ ಶಿಥಿಲ ಅಥವಾ ತೇಲಿಸಿ ಉಚ್ಚರಿಸುವ ಕ್ರಮವನ್ನು ಎಲ್ಲ ಹರಿದಾಸರೂ ಅನುಸರಿಸಿದ್ದಾರೆ. ಜೀವೂಬಾಯಿಯೂ ಸಹ ಇದನ್ನು ಅನುಸರಿಸಿರುವುದು ತಿಳಿಯುತ್ತದೆ.

- ಕೆಲವೊಮ್ಮೆ ದ್ವಿತ್ವವಿಲ್ಲದ ಸಂದರ್ಭದಲ್ಲಿ ದ್ವಿತ್ವದಂತೆ ಪ್ರಯೋಗಿಸಿರುವುದು ಕಂಡು ಬರುತ್ತದೆ.

ಉದಾ – ಘನ್ನ (ಘನ) ಮೋಹನ್ನ (ಮೋಹನ)

ಏರ್ದ (ಏರಿದ) ಮಾಡ್ದ (ಮಾಡಿದ)

ಮಾಡ್ದವರ (ಮಾಡಿದವರ) ಶಿರಿವೆಂಕಟೇಶನ್ನ (ಸಿರಿವೆಂಕಟೇಶನ)

ಪಾವನ್ನ (ಪಾವನ) ಲಕ್ಕುಮಿ (ಲಕುಮಿ)

- ಪದದ ಆದಿ ಮಧ್ಯ ಇಲ್ಲವೆ ಅಂತ್ಯದಲ್ಲಿ ಅ > ಆ ಬದಲಾವಣೆಯ ಪ್ರಯೋಗಗಳು ಕೆಲವೊಮ್ಮೆ ಆ > ಅ ಪ್ರಯೋಗಗಳು ತೋರುತ್ತವೆ.

ಉದಾ – ಅ>ಆ – ನರಸಿಂಹ > ನಾರಸಿಂಹ

ಶ್ರೀಶ > ಶ್ರೀಶಾ

ಬಹಳ > ಭಾಳ

ಕಂಚಿ > ಕಾಂಚಿ

ಆ>ಅ – ಮಹಾಲಕುಮಿ > ಮಹಲಕುಮಿ

ಪರಿಹಾರ > ಪರಿಹರ

ಪಾದಕೆ > ಪದಕೆ

- ಕೆಲವೆಡೆ ಶಬ್ದದ ಕೊಣೆಗೆ ಐ, ಔಗಳು ಪ್ರಯೋಗವಾಗಿರುವ ಶಬ್ದಗಳು ಕ್ವಚಿತ್ತಾಗಿ ದೊರೆಯುತ್ತವೆ.

  ಉದಾ – ತೋರ್ರೈ (ತೋರೊ) ಬಾರ್ರೈ (ಬಾರೊ)

  ತೋರೌ (ತೋರು) ನೀಡ್ಡೈ (ನೀಡು)

- ಇ>ಎ ಮತ್ತು ಎ>ಇ ಪ್ರಯೋಗಗಳು ಕಂಡು ಬರುತ್ತವೆ.

  ಉದಾ – ಇ>ಎ – ದಯಾನಿಧಿ > ದಯಾನಿಧೆ

  ಪಾರ್ಥಸಾರಥಿ > ಪಾರ್ಥಸಾರಥೆ

  ಸಾರಿ > ಸಾರೆ

  ಪ್ರೀತಿ > ಪ್ರೀತೆ

  ಎ>ಇ – ಹೇಸಿಕೆ > ಹೇಸಿಕಿ

  ನಡಿಸಿ > ನಡೆಸಿ

- ಅಕ್ಷರಲೋಪವಾದ ಪದಗಳ ಪ್ರಯೋಗವಾದುದರ ಬಗ್ಗೆ ನಮಗೆ ಉದಾಹರಣೆಗಳು ದೊರೆಯುತ್ತವೆ.

  ಉದಾ – ಆಸೆಯಲಿ – ಅಸೇಲಿ

  ಹಿಡಿಯವಲಕ್ಕಿ – ಹಿಡಿಯವಲಿ

  ಸಂತೋಷದಿಂದ– ತೋಷದಿಂದ

- ಋ > ರ ಪ್ರಯೋಗಕ್ಕೆ

  ಉದಾ – ಋಷಿವರರಿಗೆ – ರುಷಿವರರಿಗೆ

  ನೃಹರಿ – ನರಹರಿ

- ರ > ರ್ ಪ್ರಯೋಗ

  ಉದಾ – ಹಾರುವ > ಹಾರ್ವ (ಬ್ರಾಹ್ಮಣ)

  ತೋರಿಪ> ತೋರ್ಪ

- ಅಲ್ಪಪ್ರಾಣಕ್ಕೆ ಮಹಾಪ್ರಾಣ ಬಳಕೆಯ ಉದಾಹರಣೆಗಳು

  ಉದಾ – ಬಹಳ – ಭಾಳ

  ಚಂದದಿಂದ – ಛಂದದಿಂದ

- ಓ > ವ ಪ್ರಯೋಗ

  ಉದಾ – ಓಲೈಸು > ವಾಲೈಸು

- ಹ > ಪ ಪ್ರಯೋಗ

    ಉದಾ – ಹುಬ್ಬಿನ > ಪುರ್ಬಿನ

- ಸಮೂಹ ಪದಗಳು

    ಉದಾ – ಕರ್ನೇರು

    ಹೃದ್ಗೃಹ

    ರತುನದಾರತಿ

- ವಿಸರ್ಗ ಪ್ರಯೋಗ

    ಉದಾ – ಧಿಕ್ಕರಿಸು > ಧಿಃಕರಿಸು

- ವಿಶಿಷ್ಠ ಪದಪ್ರಯೋಗ

    ಉದಾ – ಗಾಢನೆ ಗಾಢಿಕಾರ

    ಅಕ್ಷರೇಡ್ಯ ಅಕ್ಷರೇಶಾತ್ಮಕ

- ದ್ವಂದಾರ್ಥ (ನಾನಾರ್ಥ) ಪ್ರಯೋಗ

| | | | |
|---|---|---|---|
| ಉದಾ | – ಚಕ್ರಿ | – ತಿರುಗುವ ಚಕ್ರ | – ಶ್ರೀಹರಿ |
| | ಧರಣಿಧರ | – ಉರಗರಾಜ (ಹಾವು) | – ಭೂಮಿಯನ್ನು ಹೊತ್ತವನು |
| | ಹರಿ | – ಕೋತಿ | – ವಿಷ್ಣು |
| | ನೀಲಕಂಠ | – ನವಿಲಿನಮರಿ | – ಶಿವ |
| | ಸ್ಥಾಣು | – ಮೋಟುಮರ | – ಶಿವ |
| | ಪಶುಪತಿ | – ವೃಷಭರಾಜ | – ಶಿವ |
| | ಶೂಲಿ | – ಭಾದೆಯುಳ್ಳವ | – ತ್ರಿಶುಲಧಾರಿ |

ಈ ಪದಗಳು ಜೀವೂಬಾಯಿಯವರ ಶಬ್ದ ಚಮತ್ಕಾರ ಸಾಮರ್ಥ್ಯವನ್ನು ತಿಳಿಸುತ್ತವೆ.

**ದ್ವಿರುಕ್ತಿಗಳು**

ಕಾರ್ಯದ ತೀವ್ರತೆಯನ್ನು ಕುರಿತು ಹೇಳುವಾಗ ಒಂದೇ ಪದವನ್ನು ಎರಡುಬಾರಿ ಹೇಳುವುದಕ್ಕೆ ದ್ವಿರ್-ಉಕ್ತಿ ಎಂದು ಹೆಸರು. ಇಂಥ ಪ್ರಯೋಗಗಳು ಜೀವುಬಾಯಿಯ ರಚನೆಗಳಲ್ಲಿ ಹೇರಳವಾಗಿ ದೊರೆಯುತ್ತವೆ.

ಉದಾ – ಪರಿಪರಿ ಜನುಮಜನುಮ

ವನವನ ದಿಕ್ಕುದಿಕ್ಕು

| | |
|---|---|
| ದ್ವಾರದ್ವಾರ | ನಲಿನಲಿವ |
| ವಿಧವಿಧ | ಬಾಬಾ |
| ಬಾರಿಬಾರಿ | ಕುಣಿಕುಣಿಯುತ, |
| ಪುಟ್ಟಪುಟ್ಟ | ಬಿಕ್ಕಿಬಿಕ್ಕಿ |
| ಪಾಹಿಪಾಹಿ | ಹರಿಹರಿ |
| ಬಗೆಬಗೆ | ಶುಭಶುಭ |
| ಹಿರಿಹಿರಿ | ಬಿರಿಬಿರಿ |
| ಲೋಕಲೋಕ | ನಗುನಗುತ |
| ಕರೆಕರೆ | ಲಾಲಿಲಾಲಿ |
| ತಂದತಂದ | ನವನವ |
| ತರತರ | ಮಾತುಮಾತಿಗೆ |
| ನುಡಿನುಡಿಗೆ | ಅಡಿಗಡಿಗೆ |
| ನೆನೆನೆನೆದು | ಬಳಲಿಬಳಲಿ |
| ನಳನಳಿಸುವ | ಬಿಡುಬಿಡುತ |
| ಗಿರಿಗಿರಿ | ವೇಳೆವೇಳೆ |
| ಪಾಲಿಪಾಲಿಸು | ಸಾರಿಸಾರಿ |
| ದೇಶದೇಶ | ಜೋಜೋ |
| ಮರಳಿಮರಳಿ | ಮುಳುಮುಳುಗಿ |
| ಕ್ಷಣಕ್ಷಣ | ತೊಳೆತೊಳೆದು |

**ಅನುಕರಣಾವ್ಯಗಳು**

ಯಾವುದೇ ಒಂದು ದ್ವನಿಯನ್ನು ಅನುಕರಿಸಿ ಹೇಳುವ ಪದಗಳಿಗೆ ಅನುಕರಣಾವ್ಯಯಗಳೆಂದು ಹೆಸರು. ಇಂಥ ಅನುಕರಣಾವ್ಯಯಗಳನ್ನು ಜೀವಮ್ಮ ಸಂದರ್ಭಕ್ಕೆ ತಕ್ಕಂತೆ ತನ್ನ ರಚನೆಗಳಲ್ಲಿ ಬಳಕೆ ಮಾಡಿಕೊಂಡಿರುವುದು ತಿಳಿದುಬರುತ್ತದೆ.

| | | |
|---|---|---|
| ಉದಾ – | ಝುಳಝುಳ | ಥಳಥಳ |
| | ಕಲಕಲ | ಫಲಫಲ |
| | ಸರಸರ | ಕಿಲಿಕಿಲಿ |

ಝುಗಝುಗಿಸು ಘುಡುಘುಡಿಸು

ಝೂಮಝೂಮ ದಡದಡ

ಘಮಘಮ ಗುಸುಗುಸು

ಹೀಗೆ ಜೀವಮ್ಮಳು ಜನಪದ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿರುವಳು. ಕೆಲವು ಧ್ವನಿಗಳನ್ನು ಪರ್ಯಾಯವಾಗಿ ಬಳಸಿಕೊಂಡಿರುವಳು. ದ್ವಿರುಕ್ತಿ ಮತ್ತು ಅನುಕರಣಾವ್ಯಗಳನ್ನು ಪ್ರಯೋಗಿಸಿರುವಳು. ಕೆಲವು ಶಬ್ದ ಚಮತ್ಕಾರಗಳನ್ನು ತನ್ನ ರಚನೆಗಳಲ್ಲಿ ಬಳಸಿರುವಳು. ಆ ಮೂಲಕ ಜನಸಾಮಾನ್ಯರಿಗೆ ತನ್ನ ಕೀರ್ತನೆಗಳನ್ನು ತಲುಪಿಸುವಲ್ಲಿ ಯಶಸ್ವಿಯಾಗಿದ್ದಾಳೆ.

**೧) ಛಂದಸ್ಸು**

ಛಂದಸ್ಸು ಎಂದರೆ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವುದು. ಛಂದೋಬದ್ಧ ರಚನೆಗಳು ಸ್ಮರಣೆಗೆ ಅನುಕೂಲವಾಗಿರುತ್ತವೆ. ಒಂದು ಪದ್ಯದ ಲಯಗತಿಯನ್ನು ಗುರುತಿಸಿ ಅದನ್ನು ಅಳೆಯುವ ಮಾಪನ ಛಂದಸ್ಸು. ಪದ್ಯ ರಚನೆಯಲ್ಲಿ ಛಂದಸ್ಸು ಪ್ರಾಮುಖ್ಯ ಸ್ಥಾನವನ್ನು ವಹಿಸುತ್ತದೆ. ಈ ಛಂದಸ್ಸು ಗಣ, ಯತಿ, ಪ್ರಾಸ, ಲಯ ಮುಂತಾದ ಅಂಶಗಳನ್ನು ಒಳಗೊಂಡಿರುವ ಒಂದು ಶಾಸ್ತ್ರ.

"ಛಂದಸ್ಸು ಕಾವ್ಯದ ಸಹಜ ಸುಂದರ ಸ್ವರಾಂದೋಲನ. ಅದು ಪದ್ಯದ ಪ್ರಾಣ. ಕಾವ್ಯಕ್ಕೆ ಚಲನೆಯುಂಟಾಗುವುದು ಛಂದದಿಂದಲೇ ಕಾವ್ಯದೇವಿಯ ಅಂತರಂಗವು ತರಂಗಿತವಾದಾಗ ಅವಳ ಅಂಗವು ಛಂದೋಭಂಗಿಯಲ್ಲಿ ಚಲಿಸುತ್ತದೆ. ಭಾಷೆ ಹೇಗೊ ಹಾಗೇ ಛಂದಸ್ಸು ಕಾವ್ಯ ಕನ್ನಿಕೆ ಮೈಯೂ ಅಲ್ಲ; ಭಾವ ಹೇಗೋ ಹಾಗೆ ಅದು ಅವಳ ಆತ್ಮವೂ ಅಲ್ಲ. ಅದು ಅವಳ ಆತ್ಮಶ್ರೀಯನ್ನು ಅಂಗಾಂಗಗಳ ಚಲನೆಯಿಂದ ಸುಳುಹುಗಾಣಿಸುವ ವಿಧಾನ"[೩] ಇಂಥ ವಿಧಾನವನ್ನು ಎಲ್ಲ ಕವಿಗಳು ತಮ್ಮದೇ ಆದ ರೀತಿಯಲ್ಲಿ ಕಾವ್ಯ ಕನ್ನಿಕೆಗೆ ಅನ್ವಯಿಸಿಕೊಂಡಿರುವುದು ತಿಳಿದುಬರುತ್ತದೆ. ಚಂಪೂ ಕಾವ್ಯಗಳು ಪೂರ್ಣ ಪ್ರಮಾಣದಲ್ಲಿ ಛಂದಸ್ಸನ್ನು ಬಳಸಿಕೊಂಡಿವೆ. ವೃತ್ತಗಳು, ಕಂದ ಮತ್ತು ಕ್ವಚಿತ್ತಾಗಿ ರಗಳೆಯನ್ನು ಚಂಪೂ ಕವಿಗಳು ಬಳಸಿರುವರು. ಹರಿಹರನು ರಗಳೆಯನ್ನು ಬಳಸಿಕೊಂಡು ಅದರಲ್ಲಿ ಯಶಸ್ಸು ಸಾಧಿಸಿದನು. ರಾಘವಾಂಕನು ತನ್ನೆಲ್ಲ ಕೃತಿಗಳಿಗೆ ಷಟ್ಪದಿ ಬಂಧವನ್ನು ಬಳಸುವ ಮೂಲಕ ಷಟ್ಪದಿಯ ಬ್ರಹ್ಮನೆನಿಸಿದ.

ವಚನಕಾರರು ಮತ್ತು ಕೀರ್ತನಕಾರರು ಛಂದಸ್ಸನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳಲಿಲ್ಲ. ಅದಕ್ಕೆ ಕಾರಣವೇನೆಂದರೆ ಇವರೀರ್ವರಿಗೆ ಪಾಂಡಿತ್ಯ ಪ್ರದರ್ಶನ ಮುಖ್ಯವಾಗಿರಲಿಲ್ಲ: ಭಾವಾಭಿವ್ಯಕ್ತಿಯೇ ಮುಖ್ಯವಾಗಿತ್ತು. ಯಾರನ್ನೂ ಮೆಚ್ಚಿಸಬೇಕೆಂಬುದು ಇವರಿಬ್ಬರ ಉದ್ದೇಶವಾಗಿರಲಿಲ್ಲ; ದೇವ ಮೆಚ್ಚಬೇಕೆಂಬುದು ಅವರ ಉತ್ಕಟ ಹಂಬಲವಾಗಿತ್ತು. ಆದ್ದರಿಂದ ಛಂದಸ್ಸನ್ನು ತೊರೆದು ಸ್ವತಂತ್ರವಾಗಿ ತಮ್ಮ ಅನುಭವ-ಅನುಭಾವ ಜ್ಞಾನವನ್ನು ಸುಲಿದ ಬಾಳೆಯ ಹಣ್ಣಿನಂತೆ ಸರಳೀಕರಿಸಿದರು. ವಚನಕಾರರ ಹಾಗೆಯೇ

ಕೀರ್ತನಕಾರರು ತಮ್ಮ ಕೀರ್ತನೆಗಳಿಗೆ ಛಂದಸ್ಸನ್ನು ಆಶ್ರಯಿಸಲಿಲ್ಲ, ಆದರೆ ಕಾವ್ಯಗಳಿಗೆ ಛಂದಸ್ಸನ್ನು ತೊರೆಯಲಿಲ್ಲ. ಲಯಾತ್ಮಕತೆ ಮತ್ತು ಗೇಯತೆಯನ್ನು ಚಾಚೂ ತಪ್ಪದೆ ರೂಪಿಸಿಕೊಂಡು ಬರೆದರು. ಉಳಿದ ಕೀರ್ತನಕಾರರ ಹಾಗೆ ಜೀವುಬಾಯಿಯೂ ಸಹ ತನ್ನ ಖಂಡಕಾವ್ಯಗಳಿಗೆ ಛಂದಸ್ಸನ್ನು ಪೂರ್ಣ ಬಳಸಿಕೊಳ್ಳಲಿಲ್ಲ. ಈ ಕಾವ್ಯಗಳಲ್ಲಿ ಅಲ್ಲಲ್ಲಿ ಕಂದ, ಸೀಸ, ಷಟ್ಪದಿ ಎಂದು ಹೆಸರಿಸಿರುವುದು ಗೋಚರಿಸುತ್ತದೆ. ಆದಿ ಪ್ರಾಸಗಳನ್ನು ಬಳಸಿದ್ದಾಳೆ. ಈ ಎಲ್ಲ ಸಂಗತಿಗಳನ್ನು ಈ ಮುಂದೆ ಚರ್ಚಿಸೋಣ;

**ಪ್ರಾಸ ಬಳಕೆ :-**

ಪ್ರಾಸವೆಂದರೆ ಯಾವುದೇವೊಂದು ನಿರ್ದಿಷ್ಟವಾದ ಅಕ್ಷರ ಪಾದಗಳ ನಿರ್ದಿಷ್ಟ ಸ್ಥಳದಲ್ಲಿ ಪುನರಾವರ್ತನೆಯಾಗುವುದು ಎಂದರ್ಥ. ಪದ್ಯಕ್ಕೆ ಪ್ರಾಸವು ಅನಿವಾರ್ಯ ಮತ್ತು ಅವಶ್ಯ ಎಂಬುದನ್ನು ಸರ್ವಜ್ಞ "ಪ್ರಾಸವಿಲ್ಲದ ಪದವ ತಾಸು ಹಾಡಿದರೇನು ಫಲ?" ಎಂದು ಕೇಳುವ ಮೂಲಕ ಪ್ರಾಸ ಅವಶ್ಯವೆಂದು ಹೇಳಿರುವನು. ಅಂತೆಯೇ ಪೂರ್ವಾಚಾರ್ಯರು ಯತಿಯನ್ನು ಮೀರಿ ಖಂಡಪ್ರಾಸವನ್ನು ಉಳಿಸಿಕೊಂಡರೆಂಬ ಸಂಗತಿ ತಿಳಿದುಬರುತ್ತದೆ. ಪ್ರಾಸಗಳಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳನ್ನು ಛಂದಶಾಸ್ತ್ರಜ್ಞರು ತಿಳಿಸುತ್ತಾರೆ.

**ಉದಾಹರಣೆಗಳು**

**೧- ಆದಿಪ್ರಾಸ -**

ಹರಿಸತಿಯಳು ಬಹುಭಕ್ತಿಲಿ ಭಜಿಪರ
ಪರಿಪರಿ ಕ್ಲೇಶವ ಕಳೆಯುವರು
ದುರಿತಗಳಿವರ ಸಮೀಪಕೆ ಸೇರದು
ಹರಿವುದು ಭವತಾಪತ್ರಯಗಳು [೪]

(ಶ್ರೀ ವರಮಹಾಲಕ್ಷ್ಮೀ ಕಥೆ)

ಬಗೆಬಗೆ ಪೂದೋಟಗಳಲಿ ಶ್ರೀಹರಿ
ಸೊಗಸಿನಿಂದ ರಾಧೆಯ ಕೂಡಿ
ನಗಧರನಾಡಿದ ಲೀಲೆಗಳೆಲ್ಲವು
ಗಗನದಿ ಸುರರೆಲ್ಲರು ನೋಡಿ [೫]

(ರಾಧಾಮಾಧವ ವಿಲಾಸ)

೨– ಅಂತ್ಯಪ್ರಾಸ –

ಹಸುಳೆ ನಿನಗೆ ಹೊಸ ಬೆಣ್ಣೆಯ ನೀವೆ
ಬಿಸಿಬಿಸಿ ಕಡಬು ಕಜ್ಜಾಯವ ಕೊಡುವೆ
ಶಶಿಮುಖಿಯರ ಕೂಡನಾಡದಿರೆನುವೆ
ಮೊಸರು ಬೆಣ್ಣೆ ಪಾಲ್ಸಕ್ಕರೆ ಕೊಡುವೆ [೬]

ಪೊಡವಿಯನಳೆದ ಕರಡಿಗಳ ಚೆಲುವಗೆ
ಕೊಡಲಿಯ ಪಿಡಿದಿಹ ಭಾರ್ಗವಗೆ
ಮಡದಿಯನರಸುತ ನಡೆದ ಶ್ರೀರಾಮಗೆ
ತುಡುಗತನದಿ ಪಾಲ್ಬೆಣ್ಣೆ ಮೆದ್ಧವಗೆ [೭]

(ಸಮುದ್ರ ಮಥನ)

೩–ಮಧ್ಯಪ್ರಾಸ –

ಪಾಹಿ ಕೃಷ್ಣನೆ ಪಾಹಿ ಪಂಕಜಾಕ್ಷ
ಪಾಹಿ ಪದ್ಮನಾಭ ಪಾಲಿಸೆನ್ನನೀಗ [೮]

(ಶ್ರೀಕೃಷ್ಣಲೀಲಾ)

ವಿಶ್ವರೂಪಕ ವಿಶ್ವನಾಮಕ
ವಿಶ್ವತೋಮುಖ ವಿಶ್ವನಾಟಕ
ವಿಶ್ವವ್ಯಾಪಕ ವಿಶ್ವಾಧಾರಕ
ವಿಶ್ವಕುಟುಂಬಿಯೆ ವಿಶ್ವಾಸದಿ ಬಾ [೯]

ಕೀರ್ತನೆಗಳಲ್ಲಿ ಹೆಚ್ಚಾಗಿ ಆದಿಪ್ರಾಸ ಬಳಕೆಯಾಗಿದೆ. ಕ್ವಚಿತ್ತಾಗಿ ಅಂತ್ಯಪ್ರಾಸ ಬಳಕೆಯಾದುದು ಗೊತ್ತಾಗುವುದು. ಆದಿ ಪ್ರಾಸಗಳಲ್ಲಿ ಸಿಂಹ, ಗಜ, ವೃಷಭ, ಅಜ, ಶರಭ ಮತ್ತು ಹಯ ಪ್ರಾಸಗಳೆಂದು ವಿದ್ವಾಂಸರು ಗುರುತಿಸಿದ್ದಾರೆ. "ಇವು ದ್ರಾವಿಡ ಭಾಷೆಗಳ ಸ್ವಭಾವವನ್ನು ಅನುಸರಿಸಿ ಬಂದಿವೆ. .."[೧೦] ಈ ಪ್ರಾಸಗಳನ್ನು ಜೀವಮ್ಮ ತನ್ನ ರಚನೆಗಳಲ್ಲಿ ಪ್ರಯೋಗಿಸಿರುವ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಈ ಆರು ಬಗೆಯ ಪ್ರಾಸಗಳ ನಿಯಮವನ್ನು ನಾಗವರ್ಮ ಹೀಗೆ ಹೇಳಿದ್ದಾನೆ.

ನಿಜದಿಂ ಬಂದೊಡೆ ಸಿಂಗಂ
ಗಜದೀರ್ಘಂ ಬಿಂದು ವೃಷಭ, ವ್ಯಂಜನ ಶರಭಂ,

ಅಜನಂ ವಿಸರ್ಗಂ, ಹಯನಂ
ಬುಜಮುಖಿ ದಡ್ಡಕ್ಕರಗಳಿವು ಷಟ್ ಪ್ರಾಸಂ

**ಸಿಂಹಪ್ರಾಸ** – 'ನಿಜದಿಂ ಬಂದೊಡೆ ಸಿಂಗಂ' ಅಂದರೆ ಪ್ರಾಸಾಕ್ಷರದ ಹಿಂದೆ ಹ್ರಸ್ವವಿದ್ದರೆ ಅದು ಸಿಂಹಪ್ರಾಸ.

"ಅಗಣಿತ ಮಹಿಮಗೆ ಸುಗುಣಗಳನುದಿನ
ಬಗೆಬಗೆ ಸ್ಮರಿಸುವ ಬಗೆ ಮರೆದು
ಹಗಲಿರುಳೆನ್ನದೆ ನಿಗಮವೇದ್ಯನ ನಾಮ
ಬಗೆಬಗೆ ಪೊಗಳಿ ಕೊಂಡಾಡಿ ಸ್ತುತಿಸಿದಲೆ [೧೧]

ಇಲ್ಲಿ ಆದಿಯ ಒಂದೆರಡನೆಯ ಸ್ವರಗಳ ನಡುವೆ 'ಗ' ಅಕ್ಷರವು ನಿಯಮಿತವಾಗಿ ನಾಲ್ಕು ಸಾಲುಗಳಲ್ಲಿ ಬಂದಿವೆ. ಪ್ರಾಸಾಕ್ಷರದ ಹಿಂದನ ಸ್ವರ ಹ್ರಸ್ವವಾಗಿದೆ. ಇಂಥ ಪ್ರಯೋಗಗಳು ಜೀವಮ್ಮಳ ಕೀರ್ತನೆಯಲ್ಲಿ ಇನ್ನೂ ಹಲವಾರು ದೊರೆಯುತ್ತವೆ.

ಬಗೆಬಗೆ ಆಟಗಳಾಡುತ ಬೆಳೆದರು
ಮಿಗೆ ಸಂತೋಷದಿ ಬಾಲಕರು
ಖಗವಾಹನ ಕಮಲನಾಭ ವಿಠ್ಠಲನ
ನಗೆ ಮುಖ ನೋಡಲು ಬಂದ ಮುನಿವರನು [೧೨]

ಹರಿಎಂಬುದ ತಿಳಿಯದೆ ಪರಿಪರಿಯಲಿ
ವರವೃದ್ಧನ ದೂಷಿಸಿಬೈದೆ
ಮರಳಿ ಆ ಮೂರ್ತಿಯ ನೋಡದೆ ವೃಥಾ
ಧರಿಸಲ್ಯಾಕೆ ದೇಹವು ವ್ಯರ್ಥ [೧೩]

ಅಕಳಂಕ ಮಹಿಮನೆ ಶುಕಮುನಿಸೇವ್ಯನೆ
ಶುಕಶೌಕನಾರದ ಮುನಿವಂದ್ಯನೆ
ಭಕುತಿಯ ಮಾರ್ಗವನರಿಯೆನು ಶ್ರೀಹರೆ
ಶುಕ ಭಾಷಣದಿಂ ಸ್ತುತಿಸುವೆ ನಿನ್ನನು [೧೪]

**ಗಜಪ್ರಾಸ** – 'ಗಜದೀರ್ಘಂ' ಪ್ರಾಸಾಕ್ಷರದ ಹಿಂದಿನ ಸ್ವರ ದೀರ್ಘವಾಗಿದ್ದರೆ ಅದು ಗಜಪ್ರಾಸ

ನಾನಾ ಯೋನಿಗಳಲ್ಲಿ ಜನಿಸಿ ಪದ್ಮನಾಭ
ನಾನಾ ಕ್ಲೇಷಗಳಿಂದ ಬಳಲಿ ಪದ್ಮನಾಭ

ನಾ ನಿನ್ನನು ಸ್ಮರಿಸದ್ಹೋದೆ ಪದ್ಮನಾಭ
ನಾನೆಂಬ ದುರ್ಮತಿಯ ಬಿಡಿಸೋ ಪದ್ಮನಾಭ [೧೫]

ಮೇಲಿನ ಪದ್ಯದಲ್ಲಿ 'ನ' ಪ್ರಾಸಾಕ್ಷರದ ಹಿಂದಿನ ಸ್ವರ ದೀರ್ಘವಾಗಿದೆ. ಇದರಲ್ಲಿ ಅಂತ್ಯದ ನಾಲ್ಕು ಸಾಲುಗಳಲ್ಲಿ 'ಪದ್ಮನಾಭ' ಪುನರಾವರ್ತನೆಯಾಗಿರುವುದರಿಂದ ಅಂತ್ಯ ಪ್ರಾಸವನ್ನು ಹೊಂದಿದೆ.

ಕಾಲುಗಳಿರುತಿರೆ ಕಂಸಮರ್ದನನ
ಆಲಯಕ್ಹೋಗದೆ ಮರೆತಿಹವೊ
ಕಾಲಹರಣ ಮಾಡುತಲಿ ಕುಹಕಿಗಳ
ಆಲಯಗಳಿಗೆಲ್ಲ ತೆರಳುವೆವೊ [೧೬]

ರಾಧಾಮಾಧವ ವಿಲಾಸವ ಮುದದೊಳು
ಆದರದಿಂದಲಿ ಕೇಳುವರ
ಸಾಧುಗಳರಸನು ಸಂಭ್ರಮದಿಂದಲಿ
ಕಾದುಕೊಂಡಿರುವನು ಹಗಲಿರುಳು [೧೭]

ಯಾತಕಿಪರಿ ಮೋಹ ಮಾತುರಾಂತಕ ಕೃಷ್ಣ
ಮಾತುಮಾತಿಗೆ ಹರಿಹರಿ ಎನ್ನದೆ
ಸೋತು ಬಂದೆನೊ ದೇವ ಮಾತರಿಶ್ವನಪ್ರಿಯ
ಕೋತಿ ಬುದ್ದಿಯ ಬಿಡಿಸೆಂದು ಸ್ತುತಿಸದಲೆ [೧೮]

**ವೃಷಭ ಪ್ರಾಸ** – 'ಬಿಂದು ವೃಷಭ' ಪ್ರಾಸಾಕ್ಷರದ ಹಿಂದೆ ಬಿಂದು ಅಥವಾ ಅನುಸ್ವರವಿರಲು ವೃಷಭ ಪ್ರಾಸವೆನಿಸುವುದು.

ಮಂದರಧರ ಗೋವಿಂದ ಮುಕುಂದನೆ
ಇಂದಿರೆಯರಸ ಹೃನ್ಮಂದಿರದಿ
ಮಂದಗಮನೆ ಮಹಾಲಕ್ಷ್ಮಿಯೊಡೆಯನೆ ಆ
ನಂದದಿ ನಲಿನಲಿದಾಡುತ ಹರಿ [೧೯]

ಇಲ್ಲಿ 'ದ' ಪ್ರಾಸಾಕ್ಷರದ ಹಿಂದೆ ನಾಲ್ಕು ಪಾದಗಳಲ್ಲಿಯೂ ಬಿಂದು ನಿಯಮಿತವಾಗಿ ಪುನರಾವರ್ತಿತಗೊಂಡಿದೆ. ಆದ್ದರಿಂದ ಇದು ವೃಷಭವೆನಿಸಿಕೊಳ್ಳುವುದು

ರಂಗನ ಮೂರ್ತಿಯ ಕಂಗಳಿಂದಲಿ ನೋಡಿ
ಭಂಗಗಳಳಿಯುವ ಹರಿದಾಸರ
ಸಂಗದೊಳಿರಸು ಉತ್ತುಂಗ ಮಹಿಮ ಪಾಂಡು
ರಂಗನೆ ಈ ಭವಭಂಗ ಬಿಡಿಸೆನ್ನದೆ [೨೦]

ಬಂದು ಮುನಿಯ ಪಾದವ ಪಿಡಿದು
ವಂದಿಸಿ ನಮಿಸುತ ಭಯಭಕ್ತಿಯಲಿ
ಬಂದ ಭಯಕೆ ಕಾರಣಗಳನು
ಚೆಂದದಿ ಕೇಳಿದರು [೨೧]

ಸುಂದರಾಂಗ ಅರವಿಂದ ಮುಕುಂದನು
ಒಂದು ತಿಂಗಳಲಿ ಬಂದು
ಸುಂದರಿ ಕೊಡು ನಿನ್ನ ಛಂದದ ಶಿಶುವನೆ
ನಿಂದರೆ ಕೊರಳು ಚಂದದಲಿ ಕೊಡುವೆನೆಗೆ [೨೨]

**ಹಯಪ್ರಾಸ** – 'ಹಯನಂ ಭುಜಮುಖಿ ದಡ್ಡಕ್ಕರಗಳ್' ಎಂದರೆ ಪ್ರಾಸಾಕ್ಷರವು ಸಜಾತಿಯ ದ್ವಿತ್ವವನ್ನು ಹೊಂದಿದ್ದು ನಾಲ್ಕು ಸಾಲುಗಳಲ್ಲಿಯೂ ಆ ಸಜಾತಿಯ ದ್ವಿತ್ವಾಕ್ಷರ ಪುನರಾವರ್ತನೆಗೊಂಡಿರಬೇಕು. ಇದು ಹಯಪ್ರಾಸ.

ಶುದ್ಧ ತಜ್ಞರು ರಚಿಸಿದ
ಪದ್ಧತಿಯ ಸಾಧಿಸುತ ಸಂತತ
ಶ್ರದ್ಧೆಯೊಳು ಹರಿಕಾರ್ಯ ನಡೆಸುವ
ಶುದ್ಧ ಯತಿಗಳ ಸೇವೆಗೊಲಿಯುವ [೨೩]

ಈ ಕೀರ್ತನೆಯ ಸಾಲುಗಳಲ್ಲಿ 'ದ' ಪ್ರಾಸಾಕ್ಷರವು ಸಜಾತಿಯ ದ್ವಿತ್ವವನ್ನು ಹೊಂದಿ ನಿಯಮಿತ ಸ್ಥಳದಲ್ಲಿ ಬಂದಿದೆ. ಆದ್ದರಿಂದ ಇದು ಹಯಪ್ರಾಸವೆನಿಸಿಕೊಳ್ಳುತ್ತದೆ.

ಅಲ್ಲಿಯ ಪ್ರಜೆಗಳಿಗೆಲ್ಲವು ಸುಖಮಯ
ಬಲ್ಲರು ತಾಪತ್ರಯ ದು:ಖ
ಉಲ್ಲಾಸದಿ ಜನರೆಲ್ಲರು ಪಾಡ್ವರು
ಮಲ್ಲ ಮರ್ಧನ ಗುಣಗಳನು [೨೪]

ಇಬ್ಬರು ಹೊರಟರು ಯಮುನಾ ನದಿಬಳಿ
ಹಬ್ಬಿರುವ ವೃಕ್ಷವನೆ ಕಂಡು
ಕೊಬ್ಬಿಳಿದ ಗಂಧರ್ವನ ನೋಡಿ
ಉಬ್ಬಿಲೆ ನುಡುವನು [೨೫]

ಅಚ್ಚಪೀತಾಂಬ್ರನುಟ್ಟ ಅಚ್ಚುತನರಸಿಗೆ
ಹೆಚ್ಚಿನ ಆಭರಣ ಧರಿಸಿ ಮೆರೆವ ದೇವಿಗೆ
ಅಚ್ಚುತನ ವಕ್ಷಸ್ಥಳದಿ ವಾಸಿಪ ಲಕುಮಿಗೆ
ಅಚ್ಚಮುತ್ತು ಅರಿಶಿನಡಿಕೆ ಉತ್ತತ್ತಿ ಫಲಗಳು [೨೬]

**ಶರಭಪ್ರಾಸ** – 'ವ್ಯಂಜನ ಶರಭಂ' ಪ್ರಾಸಾಕ್ಷರವು ವಿಜಾತಿಯ ದ್ವಿತ್ವವನ್ನು ಹೊಂದಿ ನಿರ್ದಿಷ್ಠ ಸ್ಥಳದಲ್ಲಿ ಪುನರಾವರ್ತಿತಗೊಂಡರೆ ಅದು ಶರಭಪ್ರಾಸ

ರಕ್ಷಿಸೆಮ್ಮ ಬಿಡದೆ ಲಕ್ಷ್ಮಿರಮಣದೇವ
ಕುಕ್ಷಿಯೊಳಗೆ ಬಿಡದೆ ಜಗವ ರಕ್ಷಿಸುತ ಪೊರೆವ
ಸೂಕ್ಷ್ಮ ಸ್ಥೂಲದೊಳು ಪ್ರತ್ಯಕ್ಷನಾದ ಹರಿ ಉ
ಪೇಕ್ಷಿಸದಲೆ ಕಾಯೋ ಪಕ್ಷಿವಾಹನದೇವ [೨೭]

ಇದರಲ್ಲಿ 'ಕ' ಪ್ರಾಸಾಕ್ಷರವು ವಿಜಾತಿಯ ದ್ವಿತ್ವವನ್ನು ಹೊಂದಿ ನಾಲ್ಕು ಸಾಲುಗಳಲ್ಲಿಯೂ ನಿಯಮಿತವಾಗಿ ಬಂದಿದೆ.

ಸತ್ಯಭಾಮೆಯ ಪ್ರೀಯ ಸತ್ಯೇಶನ ಕೃಪೆ
ಸತ್ಯವೆಂದು ತಿಳಿಯುವ ಜನಕೆ
ಸತ್ಯವು ಜಗತ್ತು ಎಂದೆನುತಲಿ
ಸತ್ಯವಾದಿಗಳು ತಿಳಿಯುವುದು [೨೮]

ಅಕ್ಷರೇಡ್ಯ ಅನಿರುದ್ಧನಿಗರ್ಪಿಸಿ
ಲಕ್ಷ್ಯಪದಗಳನು ಭಕ್ತಿಯಲಿ
ಪಕ್ಷಿವಾಹನ ಪ್ರದ್ಯುಮ್ನನಿಗರ್ಪಿಸಿ
ಲಕ್ಷಪದಗಳ ಕ್ಷಿಪ್ರದಲಿ [೯]

ಪದ್ಮಪಾಣಿಯೆ ಪದ್ಮನಯನೆ
ಪದ್ಮಮುಖಿಯೆ ಪದ್ಮವಾಸಳೆ
ಪದ್ಮನಾಭನೊಡನೆ ಹೃ
ತ್ಪದೊಳಗೆ ನೆಲಸು ತಾಯೆ [೩೦]

ವಿಶ್ವರೂಪನೆ ಶ್ರೀಹರಿ ವಿಶ್ವವ್ಯಾಪಕನೆ
ವಿಶ್ವತೋ ಮುಖನೆ ಶ್ರೀಶನೆ
ವಿಶ್ವನಾಟಕನೆ ದೇವನೆ
ವಿಶ್ವೋದ್ಧಾರಕನೆ ವಿಶ್ವಮಯನೆ ಶ್ರೀ ವಿಶ್ವನೆ
ವಿಶ್ವರೂಪ ತಾಯಿಗೆ ಬಾಯೊಳು ತೋರ್ದ
ವಿಶ್ವರೂಪ ಮೈದುನನಿಗೆ ತೋರಿದ
ವಿಶ್ವರೂಪ ಸಭೆಯೊಳು ಭಕ್ತರಿಗೆ ತೋರ್ದ
ವಿಶ್ವವ್ಯಾಪಕ ವಿಶ್ವ ಮೂರುತಿಯೆ [೩೧]

ಛಂದಶಾಸ್ತ್ರದಲ್ಲಿ ಹೇಳಿರುವ ಆರು ರೀತಿಯ ಆದಿ ಪ್ರಾಸಗಳಲ್ಲಿ ಅಜಪ್ರಾಸವನ್ನು ಹೊರತುಪಡಿಸಿ ಇನ್ನುಳಿದ ಐದೂ ಪ್ರಾಸಗಳು ಜೀವೂಬಾಯಿಯ ರಚನೆಗಳಲ್ಲಿ ಬಳಕೆಯಾಗಿರುವುದು ಈ ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ.

ಜೀವೂಬಾಯಿಯು ತನ್ನ ಪೂರ್ವದ ಹರಿದಾಸರಂತೆ ಕೇವಲ ಐದು ಆದಿ ಪ್ರಾಸಗಳನ್ನು ಬಳಸಿದ್ದಾಳೆ 'ಅಜ' ಪ್ರಾಸವನ್ನು ಎಲ್ಲಿಯೂ ಬಳಕೆ ಮಾಡಿರುವುದು ತೋರುವುದಿಲ್ಲ. ಈ ಮಾತು ಎಲ್ಲ ಹರಿದಾಸರಿಗೂ ಅನ್ವಯಿಸುತ್ತದೆ. ಮದ್ಯಪ್ರಾಸ ಮತ್ತು ಅಂತ್ಯಪ್ರಾಸವು ಕ್ವಚಿತ್ತಾಗಿ ಬಳಕೆಯಾಗಿರುವುದು ಕಾಣುತ್ತೇವೆ.

**ಕಂದ** – ಈ ಬಂಧವು ಚಂಪೂವಿನಲ್ಲಿ ಹೆಚ್ಚಾಗಿ ಬಳಕೆಯಾಗಿದೆ. ಕಂದದ ಬಗೆಗೆ ಕನ್ನಡದ ಕವಿಗಳು ವಿಶೇಷವಾಗಿ ಪಕ್ಷಪಾತವನ್ನು ತಾಳಿದ್ದಾರೆ. ಪಂಪನ 'ವಿಕ್ರಮಾರ್ಜುನ ವಿಜಯಂ' ದಲ್ಲಿ ಒಟ್ಟು ೧೬೧೦ ಪದ್ಯಗಳಲ್ಲಿ ೭೩೮ ಕಂದ ಪದ್ಯಗಳಿವೆ ಇದರಿಂದ ಪಂಪನಿಗೆ ಕಂದದ ಬಗೆಗಿರುವ ಪ್ರೀತಿ ತಿಳಿಯುತ್ತದೆ. ಕಂದ ಪ್ರೀತಿಯನ್ನು ಕುರಿತು ತಿರುಮಲಾರ್ಯನು

'ಕಂದಂ ಕವಿಕೋಕಿಲ ಮಾ
ಕಂದಂ ಕೋಮಲ ವಿಕಾಸಿ ಕೃತಿ ಕಲ್ಪಲತಾ

ಕಂದಂ ವಿಸ್ಮಮರ ರಸದು
ಕ್ಕಂದಮ ಚಿಕ್ಕದೇವರಾಯ ಚಂದನ ಚಂದಂ [೩೨]

–ಎಂದು ಹೇಳಿರುವನು.

ಜೀವೂಬಾಯಿಯು ತನ್ನ ಖಂಡಕಾವ್ಯಗಳಲ್ಲಿ 'ಕಂದ' ವೆಂದು ಗುರುತಿಸಿದ ಪದ್ಯಗಳು ದೊರೆಯುತ್ತವೆ. ಆದರೆ, ಮಾತ್ರೆಗಳ ಲೆಕ್ಕದಲ್ಲಿ ಹೊಂದಾಣಿಕೆಯಾಗುವುದಿಲ್ಲ. ನಾಲ್ಕು ಸಾಲುಗಳಿರಬೇಕೆಂಬ ನಿಯಮವನ್ನು ಮಾತ್ರ ಹೊಂದಿವೆ.

ಕಂದದ ಲಕ್ಷಣವನ್ನು ಕುರಿತು ಛಂದೋಂಬುಧಿಯಲ್ಲಿ ಹೀಗೆ ಹೇಳಲಾಗಿದೆ.

ಪುರಬಾಣ ವಹ್ನಿ ಶರಗಣ
ಮಿರೆ ನಾಲ್ಕು ಪದದೊಳೋಜೆಯುಗ್ಮಗಳೋಳ್ ಪ
ನ್ನೆರ ಡಿರ್ಪತ್ತೋಳಿಯೆ ಪ
ನ್ನೆರಡಿರ್ಪತ್ತಾಗೆ ಮಾತ್ರೆಗಳ್ ಮೃಗನಯನೆ [೩೩]

ಅಂದರೆ ; ಕಂದವು ನಾಲ್ಕು ಸಾಲುಗಳನ್ನು ಹೊಂದಿರಬೇಕು ಕಿರಿ ಚರಣದಲ್ಲಿ (೧, ೩ನೇ ಸಾಲು)೪ ಮಾತ್ರೆಯ ೩ ಗಣಗಳನ್ನು ಹೊಂದಿರಬೇಕು. ಹಿರಿಚರಣದಲ್ಲಿ (೨ ಮತ್ತು ೪ ನೇ ಸಾಲು ) ೪ ಮಾತ್ರೆಗಳ ೫ ಗಣಗಳಿರಬೇಕು. ವಿಷಮ ಗಣಸ್ಥಾನದಲ್ಲಿ (೩,೫,೭ ನೇ) 'ಜ'ಗಣ (u–u) ಬರಬಾರದು. ೭ನೇ ಗಣ ಸ್ಥಾನದಲ್ಲಿ ಜಗಣ ಕಡ್ಡಾಯವಾಗಿ ಬರಬೇಕು. ೪ ಮಾತ್ರೆಯಗಣ ವಿನ್ಯಾಸವನ್ನು ಹೊಂದಿರಬೇಕು.

ವಿಶ್ವಾಮಿತ್ರರು ಬರುತಲಿ
ಅಚ್ಚರಿಯಿಂದ ನೋಡುತ ಬಾಲಕರು
ಅರ್ಥಿಲಿ ಕೇಳುತ ರಾಜನ
ಪುತ್ರರನು ಕಳುಹಬೇಕೆಂದು ಕೇಳುತಲಿರಲು [೩೪]

ಜೀವೂಬಾಯಿಯ ಖಂಡಕಾವ್ಯವಾದ 'ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ'ದಲ್ಲಿ ಕಂದವೆಂದು ಗುರುತಿಸಿದ ಈ ಪದ್ಯವು ನಾಲ್ಕು ಪಾದಗಳನ್ನು ಹೊಂದಿದೆ. ಗಣವಿಂಗಡಣೆ ೧,೩,೪ನೇ ಚರಣದಲ್ಲಿ ಸರಿಯಾಗಿದೆ. ಆದರೆ ೪ನೇ ಪಾದದಲ್ಲಿ ೪ ಮಾತ್ರೆಗಳ ಐದು ಗಣಗಳು ಬರಬೇಕಾಗಿತ್ತು. ಇಲ್ಲಿ ಕೇವಲ ೧೬ ಮಾತ್ರೆಗಳು ಬಂದಿವೆ. ಗಣವಿಂಗಡಣೆಯನ್ನು ಸರಿಯಾಗಿ ಒಳಗೊಳ್ಳದ ಮತ್ತು ೪ ಮಾತ್ರೆಗಳ ಕೊರತೆ ೨ನೇ ಚರಣದಲ್ಲಿ ಕಂಡುಬರುತ್ತದೆ. ಈ ಒಂದು ಕೊರತೆ ಹೊರತುಪಡಿಸಿದರೆ ಭಾಗಶ: ಕಂದದ ಲಕ್ಷಣವನ್ನು ಈ ಪದ್ಯ ಒಳಗೊಂಡಿದ್ದು ತಿಳಿದು ಬರುತ್ತದೆ.

ಅಂದರೆ ಜೀವೂಬಾಯಿಯು ತನ್ನ ಕೃತಿಗಳಲ್ಲಿ ಹೆಸರಿಸಿರುವ 'ಕಂದ' ಕೇವಲ ನಾಲ್ಕು ಸಾಲುಗಳ ನಿಯಮಕ್ಕೆ ಬದ್ಧವಾಗಿದೆ ಹೊರತು ಇನ್ನುಳಿದ ಯಾವುದೇ ನಿಯಮಗಳಿಗೆ ಹೊಂದಿಕೆಯಾಗುವುದಿಲ್ಲ ಎಂಬುದು ಮೇಲಿನ ಪದ್ಯದಿಂದ ತಿಳಿದುಬರುತ್ತದೆ. ಅವಳ ಎಲ್ಲ ಕಂದ ಪದ್ಯಗಳಿಗೂ ಈ ಮಾತು ಅನ್ವಯಿಸುತ್ತದೆ.

**ಸೀಸ** – ಇದೊಂದು ದೇಸಿಯ ಬಂಧ. ಹಳಗನ್ನಡ ಮತ್ತು ಚಂಪೂ ಕಾವ್ಯಗಳಲ್ಲಿ ಬಳಕೆಯಾಗಿಲ್ಲ. ಶ್ರೀ ಪಾಂಡುರಂಗ ದೇಸಾಯಿ ಅವರು ಹೇಳುವಂತೆ' ಇದು ತೆಲಗಿನಲ್ಲಿ ಬಳಕೆಯಾಗಿರುವುದು ತಿಳಿದು ಬರುತ್ತದೆ. ಆದ್ಯ ಕವಿ ನನ್ನಯಭಟ್ಟನು ಸೀಸ ಪದ್ಯ ಬಳಸಿರುವನು[೩೫] ಕನ್ನಡದ ಕಿರಿಸೀಸ ೧೨ನೇ ಶತಮಾನದಲ್ಲಿ ಹುಟ್ಟಿತ್ತು. ಶರಣರ ಹಾಗೂ ದಾಸರ ಹಾಡುಗಳಲ್ಲಿ ಮತ್ತು ಇಂದಿನ ಭಾವ ಗೀತೆಗಳಲ್ಲಿ ಬಳಕೆಯಾಗುತ್ತಾ ಬಂದಿದೆ. ಸೀಸಕ್ಕಿಂತ 'ಕನ್ನಡ ಸೀಸ' ಒಂದಿಷ್ಟು ಭಿನ್ನವಾಗಿ ನಿಲ್ಲುತ್ತದೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ.

ನಾಗವರ್ಮನ ಛಂದೋಂಬುಧಿಯಲ್ಲಿ ಸೀಸದ ಲಕ್ಷಣ ಹೀಗೆ ಪ್ರಸ್ತಾಪಿತಗೊಂಡಿದೆ.

ಪುರ ಹೂತ ಗಣಗಳಾಯಿ
ಸರಸಿಜ ಭವ ಗಣಗೆರಡು ಸಂಧಿಸಿಬಕ್ಕುಂ
ಚರಣಕ್ಕೆ ಸೀಸದಂತದೊ
ಳೂರಿ ಗಿಂತಹ ಸರಳ ತನ್ನೊಳೊಪ್ಪುವ ತರದಿಂ (೩೬)

ಅಂದರೆ ; ನಾಲ್ಕು ದೀರ್ಘ ಚರಣಗಳಿರಬೇಕು. ಪ್ರತಿ ಚರಣದಲ್ಲಿ ೬ ವಿಷ್ಣುಗಣಗಳು, ಕೊನೆಗೆ ೨ ಬ್ರಹ್ಮಗಣಗಳಿರಬೇಕು. ಇಂಥ ಬಂಧ ಸೀಸ ಎನಿಸಿಕೊಳ್ಳುವುದು.

ಆದರೆ ಈ ಲಕ್ಷಣದ ಹಿರಿದಾದ ಚರಣಗಳ 'ಸಿಸ' ಕನ್ನಡದಲ್ಲಿ ಪ್ರಯೋಗವಾದದ್ದು ಕಂಡಬರುವುದಿಲ್ಲ. ಇದರ ಬದಲಾಗಿ ಕಿರು ಚರಣಗಳ ಕಿರಿಸೀಸ (ವೀರಚಾಪದಿ) ಬಳಕೆಯಾಗಿದೆ. ಡಾ. ಡಿ.ಎಸ್.ಕರ್ಕಿಯವರು ನಿಜಗುಣರ ಕೈವಲ್ಯ ಪದದ ಆಧಾರದಿಂದ ಕಿರಿಸೀಸದ ಅಂಶಗಣ ಸಂಯೋಜನೆಯನ್ನು ಹೀಗೆ ವಿನ್ಯಾಸಗೊಳಿಸಿದ್ದಾರೆ.

ಉದಾ – ನಿಂದಿಸಿ ನುಡಿಯದಿರಾರನು ಮನಸಿಗೆ
ಬಂದಂತೆ ನಡೆಯದಿರಿಹದಲ್ಲಿ
ಕುಂದುವಡೆಯದಿರು ಕಾಮಾದಿಗಳನು ಜೈ
ಸೆಂದು ಕೈವಿಡಿದನುಗ್ರಹಿಸುವ

ವಿ ವಿ ವಿ ವಿ

ವಿ ವಿ ರು

ವಿ ವಿ ವಿ ವಿ

ವಿ ವಿ ರು [೩೭]

ಜೀವೂಬಾಯಿಯು 'ಸೀಸ' ವೆಂದು ಗುರುತಿಸಿರುವ ಪದ್ಯಗಳು ನಾಲ್ಕು ಕಿರಿ ಚರಣಗಳನ್ನು ಹೊಂದಿದವುಗಳಾಗಿವೆ. ಇಲ್ಲಿ ಒಂದು 'ಸೀಸ' ವನ್ನು ಉದಾಹರಣಾರ್ಥ ನೀಡಲಾಗಿದೆ.

ಶ್ರೀರಮಾಕಾಂತನೆ ಶ್ರೀಪಾಂಡುರಂಗನೆ
ಅಪಾರ ಮಹಿಮನೆ ಅಪ್ರಮೇಯ
ಗೋಪತಿ ಕೃಷ್ಣನೆ ಗೋಪಿಕಾಲೋಲನೆ
ಗೋವರ್ಧನೋದ್ಧಾರಿ ಅಗಮ್ಯಮೂರ್ತಿ [೩೮]

ಈ ಪದ್ಯದಲ್ಲಿ ೧, ೩ ಮತ್ತು ೪ನೇ ಚರಣದಲ್ಲಿ ಮೇಲೆ ಸೂಚಿಸಿದ ಗಣ ಸಂಯೋಜನೆ ಬಂದಿದೆ. ೨ನೇ ಪಾದದಲ್ಲಿ ಮೊದಲ ಗಣ ಆರಂಭದಲ್ಲಿ ಬಂದು ಲಘುವನ್ನು ಹೊಂದಿ ಮುಂದೆ ಗುರುವನ್ನು ಹೊಂದಿದೆ. ಈ ಗಣ ಕೇವಲ ನಾಲ್ಕು ಮಾತ್ರೆಯನ್ನು ಹೊಂದಿದೆ. ಈ ಒಂದು ಗಣ ಬಿಟ್ಟರೆ ಉಳಿದಂತೆ ಗಣ ವಿನ್ಯಾಸ ಸರಿಯಾಗಿ ಬಂದಿದೆ. ಇದರಿಂದ ನಮಗೆ ಕಂಡು ಬರುವ ವಿಷಯವೇನೆಂದರೆ ಜೀವೂಬಾಯಿಯು ಹೆಸರಿಸಿರುವ 'ಸೀಸ' ವೂ ಹಿರಿ ಚರಣದ ಮೂಲ ಸೀಸ ಮತ್ತು ಕನ್ನಡ ಕಿರಿಸೀಸ ದ ಲಕ್ಷಣವನ್ನು ಹೊಂದಿರುವುದಿಲ್ಲ. ಇದು ಜೀವೂಬಾಯಿಯು ಹೆಸರಿಸುವ ಎಲ್ಲ ಸೀಸಗಳಿಗೂ ಅನ್ವಯವಾಗುವುದು.

**ಆರ್ಯ (ಆರ‍್ಯ)** – ಇದು ಕಂದಕ್ಕೆ ಸಮನಾದ ಸಂಸ್ಕೃತ ಬಂಧ. ಆರ್ಯಗೀತಿಕೆಯ ಆರ್ಯೆಯಿಂದ ರೂಪಗೊಂಡಿರಬೇಕು[೩೯] ಇದರ ಪ್ರಥಮಾರ್ಧಕ್ಕೆ ೩೦ ಮಾತ್ರೆಗಳು. ಹಿರಿಚರಣದಲ್ಲಿ ಒಂದು (–) ಗುರು ಹೆಚ್ಚಾಗಿ ೩೨ ಮಾತ್ರೆಗಳಿರುತ್ತವೆ.

ಇಂದಿರೆಯರಸನ ಕರದೊಯ್ವೆನು ವರ
ಮಂದಗಮನೆ ತಡಮಾಡದಲೆ
ಚಂದದಿ ಆಡಿಸಿ ಪಾಡಿ ತೂಗುವೆನು
ಎಂದು ಕರೆದು ತಂದಳು [೪೦]

ಈ ಮೇಲಿನ ಪದ್ಯದಲ್ಲಿ ಪದ್ಯದ ಪ್ರಥಮಾರ್ಧದಲ್ಲಿ ೨೯ ಮಾತ್ರೆಗಳಿವೆ ನಂತರದ ಉತ್ತರಾರ್ಧ ಭಾಗದಲ್ಲಿ ೨೬ ಮಾತ್ರೆಗಳಿವೆ. ಮೊದಲಾರ್ಧದಲ್ಲಿ ಒಂದು ಮಾತ್ರೆ ಮತ್ತು ಉತ್ತರಾರ್ಧದಲ್ಲಿ ನಾಲ್ಕು ಮಾತ್ರೆಗಳು ಕಡಿಮೆ ಇವೆ. ಜೀವೂಬಾಯಿಯು 'ಆರ್ಯ' ಎಂದು ಹೆಸರಿಸಿದ ಪದ್ಯಗಳು ಅದರ ಯಾವುದೇ ಛಂದೋನಿಯಮಗಳಿಗೆ ಬದ್ಧವಾಗಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ.

**ಭಾಮಿನಿ ಷಟ್ಪದಿ** – ಇದು ಆರು ಸಾಲುಗಳ ಬಂಧ. ೧,೨,೩ ಮತ್ತು ೬ನೇ ಸಾಲಿನಲ್ಲಿ ೧೪ ಮಾತ್ರೆಗಳು ೩ ಮತ್ತು ೬ನೇ ಸಾಲಿನಲ್ಲಿ ೨೩ ಮಾತ್ರೆಗಳಿರುತ್ತವೆ. ಗಣಯೋಜನೆ ೩+೪ ಈ ರೀತಿ ಇರುತ್ತದೆ. ಕನ್ನಡ ಸಾಹಿತ್ಯದಲ್ಲಿ ೬ ಷಟ್ಪದಿಗಳು ಪ್ರಯೋಗವಾಗಿವೆ. ರಾಘವಾಂಕನು ಮಾತ್ರ 'ಉದ್ದಂಡ ಷಟ್ಪದಿಯ'ನ್ನು ಪ್ರಯೋಗಿಸಿರುವುದು ವಿಶೇಷ.

ಜೀವೂಬಾಯಿ ತನ್ನ ಕೃತಿಗಳಲ್ಲಿ ಭಾಮಿನಿ ಷಟ್ಪದಿಯನ್ನು ಮಾತ್ರ ಹೆಸರಿಸಿದ್ದು ತಿಳಿಯುತ್ತದೆ.

ಅಷ್ಟರಲ್ಲಿಯೆ ವಿಠ್ಠಲನ ಗುಡಿ
ಮೆಟ್ಟಿಲೇರುತ ಅರ್ಚಕನು ಕದ
ಮುಟ್ಟಿ ತೆಗೆಯುವ ಸಮಯದಲಿ ಆಶ್ಚರ್ಯ ಘಟನೆ ಕಂಡು
ಮೆಟ್ಟಿ ಬೀಳುತ ಒದರಿದನು ಬಲು
ಗಟ್ಟಿ ಸ್ವರವನು ಕೇಳುತಲಿ ಆ
ಪಟ್ಟಣದ ಜನರೆಲ್ಲ ಬಂದು ವಿಚಾರ ಮಾಡುತಿರೆ [೪೧]

ಈ ಪದ್ಯದಲ್ಲಿ ಮೊದಲರ್ಧದ ಗಣ ವಿಂಗಡನೆ, ಮಾತ್ರೆಗಳು ಸರಿಯಾಗಿ ಬಂದಿವೆ. ಮುಂದಿನ ಅರ್ಧ ಭಾಗದಲ್ಲಿ ಅಂದರೆ, ೫ನೇ ಚರಣದಲ್ಲಿ ಒಂದು ಮಾತ್ರೆಯು ಹೆಚ್ಚಾಗಿದೆ. ಅಷ್ಟೇ ಅಲ್ಲದೆ ಚರಣದ ಆರಂಭದಲ್ಲಯೇ ಎರಡು (–) ಗುರುಗಳು ಬಂದು ೩ ಮಾತ್ರೆಯ ಗಣ ವಿಂಗಡನೆಗೆ ಅಡ್ಡಿಯಾಗಿದೆ.

ಅಂದರೆ ಜೀವೂಬಾಯಿಯು ಹೆಸರಿಸುವ ಭಾಮಿನಿ ಷಟ್ಪದಿ ಎಂಬ ಪದ್ಯಗಳು ಸಾಲುಗಳು ಮಾತ್ರ ಆರು ಸರಿಯಾಗಿವೆ. ಅಂದರೆ ಗಣ ವಿಂಗಡಣೆ ಮಾತ್ರೆಗಳಲ್ಲಿ ಛಂದೋನಿಯಮಗಳಿಗೆ ಬದ್ಧವಾಗಿಲ್ಲ ಎಂಬ ವಿಷಯ ಮನಗಾಣುತ್ತದೆ.

**ವಚನ** – ದೀರ್ಘ ಕೀರ್ತನೆಗಳ ನಡುವೆ ಅಲ್ಲಲ್ಲಿ 'ವಚನ' ವೆಂಬ ಹೆಸರಿನ ಗದ್ಯ ಸೇರಿಕೊಂಡಿದೆ. ಶಿವಶರಣರು ಬಳಸಿದ 'ವಚನ' ವೆಂದು ಇದನ್ನು ಅರ್ಥೈಸುವ ಹಾಗಿಲ್ಲ. ಚಂಪೂಕಾವ್ಯಗಳಲ್ಲಿ ವೃತ್ತ ಮತ್ತು

ಕಂದಗಳ ನಡುವೆ ಗದ್ಯಭಾಗ 'ವಚನ' ಎಂಬ ಹೆಸರಿನಲ್ಲಿ ಬರುವಂತೆ ಜೀವಮ್ಮ ತನ್ನ ಕೃತಿಗಳಲ್ಲಿ ಬಳಸಿದ್ದು ತಿಳಿದುಬರುತ್ತದೆ.

ಒಟ್ಟಿನಲ್ಲಿ ಜೀವೂಬಾಯಿಯು ತನ್ನ ರಚನೆಗಳಿಗೆ ಜನಪದಕ್ಕೆ ಸಮೀಪವಿರುವ ಭಾಷೆಯನ್ನು ಬಳಸಿದ್ದು ತಿಳಿಯುತ್ತದೆ. ಕೆಲವು ವಿಶೇಷ ಭಾಷಾ ಪ್ರಯೋಗಗಳ ಮೂಲಕ ಕನ್ನಡ ಭಾಷೆಯ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿರುವುದು ಮನದಟ್ಟಾಗುತ್ತದೆ. ಯಾವುದೇ ರೀತಿಯ ಛಂದೋಬಂಧಕ್ಕೆ ಅತಿಯಾಗಿ ಕಟ್ಟುಬೀಳದೆ ತನ್ನ ಮನದ ಭಾವನೆ ಮತ್ತು ತುಡಿತಗಳನ್ನು ಲಯಕ್ಕೆ ಒಗ್ಗುವಂತೆ ಅತ್ಯಂತ ಮುಕ್ತವಾಗಿ ಹೇಳಿರುವಳು.

ಕನ್ನಡ ಸಾಹಿತ್ಯದ ಮಧ್ಯಕಾಲದ ಕೊನೆಗೆ ಮತ್ತು ನವೋದಯ ಸಾಹಿತ್ಯದ ಆರಂಭದಲ್ಲಿ ಕನ್ನಡ ಭಾಷೆಯ ರಚನೆ ಮತ್ತು ಕೀರ್ತನೆಗಳ ಛಂದಸ್ಸು ಶಿಥಿಲಗೊಂಡಿತ್ತು. ಛಂದಸ್ಸಿನ ಕಟ್ಟುನಿಟ್ಟಾದ ಬಂಧದಿಂದ ಬಿಡಿಸಿಕೊಂಡು ಮುಕ್ತ ಛಂದಸ್ಸಿನಲ್ಲಿ ಸಾಹಿತ್ಯ ರಚಿಸುವ ಪರಿಪಾಠ ಆರಂಭವಾಗಿತ್ತು. ಪ್ರಾಸ, ಯತಿ, ಮಾತ್ರೆ, ಗಣ ಮುಂತಾದ ಛಂದೋ ಪ್ರಕ್ರಿಯೆಗಳು, ನಿಯಮಗಳು ಆರಂಭದವರಿಗೆ ಸಡಿಲುಗೊಂಡಿದ್ದವು. ಜೀವೂಬಾಯಿಯವರು ಇದೇ ಕಾಲಘಟ್ಟದಲ್ಲಿ ಸಾಹಿತ್ಯ ರಚಿಸಿರುವುದರಿಂದ ಅವರು ಖಂಡ ಕಾವ್ಯಗಳಾದ ಶ್ರೀ ಹರಿಲೀಲಾ, ಶ್ರೀ ಪುರಂದರ ವಿಠಲದಾಸರ ಚರಿತೆ, ಶ್ರೀ ಕೃಷ್ಣಲೀಲಾ, ಗಾಲವ ಚರಿತ್ರೆ, ಮುಂತಾದವುಗಳು ಕಟ್ಟು ನಿಟ್ಟಾದ ಛಂದಸ್ಸಿನ ನಿಯಮಗಳಿಗೊಳಗಾಗದೆ ಮುಕ್ತ ಛಂದಸ್ಸಿನಲ್ಲಿ ರಚಿಸಿದರು. ಭಾಷೆಲ್ಲಿಯೂ ಕೂಡ ರಚನೆಯ ದೃಷ್ಟಿಯಿಂದ ಸರಳೀಕರಣ ಕಂಡುಬಂತು. ಒತ್ತಕ್ಷರಗಳು ಉಚ್ಚಾರಣೆಗಳಿಗೆ ತಕ್ಕಂತೆ ಸರಳೀಕರಣಗೊಂಡವು. ಕೀರ್ತಿ>ಕೀರುತಿ, ಮುಕ್ತಿ>ಮುಗುತಿ, ಯುಕ್ತಿ>ಯುಗುತಿ ಇಂಥ ಭಾಷಿಕ ರಚನೆಗಳು ಮಧ್ಯಕಾಲಿನ ರಚನೆಗಳಿಗೆ ತಕ್ಕಂತೆ ಹಿಗ್ಗುವಿಕೆ ಮತ್ತು ಕುಗ್ಗುವಿಕೆಯ ಸ್ವರೂಪವನ್ನು ತಾಳಿದವು. ಇದರ ಪ್ರಭಾವವು ಜೀವಮ್ಮಳ ರಚನೆಯ ಮೇಲೆ ಸಹಜವಾಗಿಯೇ ಆಗಿದೆ.

## ಅಡಿ ಟಿಪ್ಪಣಿಗಳು

೧. ದಾಸಸಾಹಿತ್ಯ ಭಾಷೆ – ಡಾ.ಎಸ್.ಎಸ್.ಅಂಗಡಿ (ಪು.೯)
೨. ಅದೇ (ಪು.೨೮)
೩. ಕನ್ನಡ ಛಂದೋವಿಕಾಸ – ಡಾ.ಡಿ.ಎಸ್.ಕರ್ಕಿ (ಪು. ೪)
೪. ನಿ.ಜೀ.ಕೀ.ಸ.ದಾ.ಸಾ.ಸಂ. ೧೮ – ಭಾಗ ೨ (ಪು ೪೪೬)
೫. ಅದೇ (ಪು ೪೮೪ )
೬ ಅದೇ (ಪು ೨೨ ಕೀ ೧೧)
೭ ಅದೇ (ಪು ೩೦೩)
೮. ಅದೇ (ಪು ೨೮೨)

೯. ಅದೇ (ಪು ೧೯೮ ಕೀ ೧೫೨)

೧೦. ಕನ್ನಡ ಛಂದೋವಿಕಾಸ – ಡಾ.ಡಿ.ಎಸ್.ಕರ್ಕಿ ( ಪು. ೫೭)

೧೧. ನಿ.ಜೀ.ಕೀ.ಸ.ದಾ.ಸಾ.ಸಂ. ೧೮ – ಭಾಗ ೨ ( ಪು ೧೧೮ ಕೀ ೭)

೧೨. ಅದೇ (ಪು ೨೫೮)

೧೩. ಅದೇ (ಪು ೩೩೧)

೧೪. ಅದೇ (ಪು ೪೫೮)

೧೫. ಅದೇ (ಪು ೧೨೫ ಕೀ ೯೨)

೧೬. ಅದೇ (ಪು ೩೭೩)

೧೭. ಅದೇ (ಪು ೪೮೭)

೧೮. ಅದೇ (ಪು ೧೧೮ ಕೀ ೮೭)

೧೯. ಅದೇ (ಪು. ೬ ಕೀ ೩)

೨೦. ಅದೇ (ಪು. ೧೧೯ ಕೀ ೮೭)

೨೧. ಅದೇ (ಪು ೪೦೮)

೨೨. ಅದೇ (ಪು ೪೫೨)

೨೩. ಅದೇ (ಪು ೬ ಕೀ ೩)

೨೪. ಅದೇ (ಪು ೨೭೭)

೨೫. ಅದೇ (ಪು ೪೦೯)

೨೬. ಅದೇ (ಪು ೧೫೪ ಕೀ ೧೧೫)

೨೭. ಅದೇ (ಪು ೧೨೯ ಕೀ ೯೫)

೨೮. ಅದೇ (ಪು ೩೬೨)

೨೯. ಅದೇ (ಪು ೩೭೮)

೩೦. ಅದೇ (ಪು ೪೪೩)

೩೧. ಅದೇ (ಪು ೧೩೩ ಕೀ ೯೮)

೩೨. ಅಪ್ರತಿಮ ವೀರ ಚರಿತೆ–ತಿರುಮಲಾರ್ಯ (ಎರಡನೇ ಮುದ್ರಣ ಪದ್ಯ ೧೫)

೩೩. ಛಂದೋಂಬುಂಧಿ – ನಾಗವರ್ಮ (ಚತುರ್ಥಾಧಿಕಾರಂ ಪದ್ಯ ೨೩೦)

೩೪. ನಿ.ಜೀ.ಕೀ.ಸ.ದಾ.ಸಾ.ಸಂ. ೧೮ ಭಾಗ–೨ (ಪು ೨೫೮)

೩೫. ಕನ್ನಡ ಛಂದೋವಿಕಾಸ – ಡಾ.ಡಿ.ಎಸ್.ಕರ್ಕಿ ( ಪು. ೧೯೩)

೩೬ ನಾಗವರ್ಮ ಛಂದಸ್ಸು – ಸಂ.ಕಿಟೆಲ್ (ಪು ೧೧೮ ಪ. ೨೬೯)

೩೭ ಕನ್ನಡ ಛಂದೋವಿಕಾಸ – ಡಾ.ಡಿ.ಎಸ್.ಕರ್ಕಿ ( ಪು. ೧೯೮)

೩೮. ನಿ.ಜೀ.ಕೀ.ಸ.ದಾ.ಸಾ.ಸಂ. ೧೮ ಭಾಗ–೨ (ಪು ೩೫೧)

೩೯. ಕನ್ನಡ ಛಂದೋವಿಕಾಸ – ಡಾ.ಡಿ.ಎಸ್.ಕರ್ಕಿ ( ಪು. ೯೯)

೪೦. ನಿ.ಜೀ.ಕೀ. ಸ.ದಾ.ಸಾ.ಸಂ.೧೮ ಭಾಗ–೨ (ಪು ೪೮೦)

೪೧. ಅದೇ (ಪು ೪೫೯)

# ಅಧ್ಯಾಯ ೭

# ಜೀವೂಬಾಯಿ ಕೀರ್ತನೆಗಳ ಸಾಂಸ್ಕೃತಿಕ ಅಂಶಗಳು

# ಅಧ್ಯಾಯ – ೭

## ಜೀವೂಬಾಯಿಯ ಕೀರ್ತನೆಗಳ ಸಾಂಸ್ಕೃತಿಕ ಅಂಶಗಳು

ಸಂಸ್ಕೃತಿ ಎಂಬುದನ್ನು ಒಂದು ಜನಾಂಗದ ಅಥವಾ ಒಂದು ನಿರ್ದಿಷ್ಟ ಪರಿಸರದ ಜನರ ಆಹಾರ-ವಿಹಾರ, ಉಡುಗೆ-ತೊಡುಗೆ, ಆಚರಣೆ-ಸಂಪ್ರದಾಯಗಳು, ನದಿ-ದೇವಾಲಯಗಳು ಮುಂತಾದ ಅಂಶಗಳನ್ನು ಒಳಗೊಂಡಿರುವಂತಹದ್ದು ಎಂದು ಗ್ರಹಿಸಬಹುದು. ಈ ಹಿನ್ನೆಲೆಯಲ್ಲಿ ಜೀವೂಬಾಯಿಯ ಕೀರ್ತನೆಗಳಲ್ಲಿ ಮೂಡಿಬಂದ ಸಾಂಸ್ಕೃತಿಕ ಅಂಶಗಳನ್ನು ಐದು ರೀತಿಯಲ್ಲಿ ಗುರುತಿಸಿಕೊಳ್ಳಲಾಗಿದೆ.

೧. ಆಹಾರ – ಪಾನೀಯಗಳು

೨. ಉಡುಗೆ – ತೊಡುಗೆಗಳು

೩. ಆಚರಣೆಗಳು – ಸಂಪ್ರದಾಯಗಳು

೪. ನದಿ – ಪುಣ್ಯಕ್ಷೇತ್ರಗಳು

೫. ಇತರೆ ಸಾಂಸ್ಕೃತಿಕ ಅಂಶಗಳು

### ೭.೧. ಆಹಾರ – ಪಾನೀಯಗಳು –

**ಅವಲಕ್ಕಿ** – ಭತ್ತ ಇಲ್ಲವೆ ಅಕ್ಕಿಯನ್ನು ಹುರಿದು ತಯಾರಿಸುವರು. ಸುಧಾಮ ತನ್ನ ಬಾಲ್ಯದ ಗೆಳೆಯ ಶ್ರೀಕೃಷ್ಣನನ್ನು ಭೆಟ್ಟಿಯಾಗಲು ಹೋದಾಗ ಅವಲಕ್ಕಿಯನ್ನು ಒಯ್ದಿರುತ್ತಾನೆ. ಅದು ಸುಧಾಮನ ಅವಲಕ್ಕಿ ಎಂದೆ ಹೆಸರಾಯಿತು. ಚುರುಮುರಿಯಂತೆ ಒಗ್ಗರಣೆ ಹಾಕಿಯು ತಿನ್ನುವ ಅವಲಕ್ಕಿಗಳಿವೆ. ತೋಯಿಸಿ ಮಾಡುವ ಅವಲಕ್ಕಿಯು ಇವೆ. ಮೊಸರವಲಕ್ಕಿಯಾಗಿಯೂ ತಯಾರಿಸುವರು. ಇದು ತಿಂಡಿಗಾಗಿ ಬಳಸುವ ಆಹಾರ ಪದಾರ್ಥ.

**ಕೊಬ್ಬರಿ** – ತೆಂಗಿನ ಕಾಯಿಯಿಂದ ದೊರೆಯುವುದು. ಏಳೆಕೊಬ್ಬರಿ ತುಂಬಾ ರುಚಿ ಮತ್ತು ಮೃದುವಾಗಿರುತ್ತದೆ. ಅಡುಗೆಯಲ್ಲಿ ಬಳಸುವರು. ಬೆಲ್ಲ ಇಲ್ಲವೇ ಸಕ್ಕರೆಯ ಜೊತೆಗೆ ತಿಂದರೆ ಬಲು ರುಚಿಯಿರುವುದು. ಬೆಲ್ಲ ಸಕ್ಕರೆ ಕೊಬ್ಬರಿಗಳನ್ನು ಪೂಜೆಯ ಸಂದರ್ಭದಲ್ಲಿ ಪ್ರಸಾದವಾಗಿಯೂ ಬಳಸಲಾಗುತ್ತದೆ. ಮುತ್ತೈದೆಯರ ಉಡಿ ತುಂಬುವ ಮತ್ತು ದೇವರ ಪೂಜೆಯಲ್ಲಿ ಇದನ್ನು ಬಳಸುವರು. ಉಂಡಿ ಮತ್ತು ಚಕ್ಕೆಗಳನ್ನು ತಯಾರಿಸುವರು.

**ಹಾಲು(ಕ್ಷೀರ) ಮೊಸರು, ಬೆಣ್ಣೆ (ನವನೀತ) ಘೃತ**–ಇವೆಲ್ಲವೂ ಹೈನಕ್ಕೆ ಸಂಬಂಧಿಸಿದವುಗಳು. ಹಾಲನ್ನು ಹಾಗೆಯೇ ಇಲ್ಲವೆ ಸಕ್ಕರೆ ಹಾಕಿಕೊಂಡು ಕಾಯಿಸಿ ಕುಡಿಯಲು ಬಳಸುವರು. ಸಣ್ಣ ಮಕ್ಕಳಿಗೆ 'ಹಾಲು' ಎಂದರೆ ಜೀವ. ಮೊಸರು ಹಾಲಿಗೆ ಹುಳಿ ಸೇರಿಸಿದರೆ ತಯಾರಾಗುವುದು. ಇದನ್ನು ಕಡೆಯಲು ಬೆಣ್ಣೆ, ಕಾಯಿಸಲು ತುಪ್ಪ ತಯಾರಾಗುವುದು. ಪಂಚಾಮೃತ ತಯಾರಿಕೆಯಲ್ಲಿ ಇವುಗಳನ್ನು ಬಳಸುವರು. ದೇವರ ಅಭಿಷೇಕಕ್ಕೆ ಬಳಕೆಯಾಗುವುದು. ಕೃಷ್ಣನಿಗೆ ಈ ಎಲ್ಲ ಪದಾರ್ಥಗಳು ಅತಿಪ್ರೀಯ. ನವನೀತ ಚೋರ ಎಂಬ ಹೆಸರೇ ಅವನಿಗಿದೆ. ಮೊಸರಿನ ಗಡಿಗೆ ಒಡೆಯುವುದು. ಹಸುವಿನ ಕೆಚ್ಚಲಿಗೆ ಬಾಯಿಹಾಕಿ ಹಾಲು ಕುಡಿಯುವುದು ಇವೆಲ್ಲ ಕೃಷ್ಣನ ಬಾಲಲೀಲೆಗಳು. ಆತನ ಕಳ್ಳತನಕ್ಕೆ ಈ ಪದಾರ್ಥಗಳೇ ಕಾರಣ. ಈ ಎಲ್ಲ ಪದಾರ್ಥಗಳು ಪ್ರಾಣಿಜನ್ಯವಾದವುಗಳು.

**ಅತಿರಸ** – ಅಕ್ಕಿ, ತೆಂಗಿನಕಾಯಿ, ಬೆಲ್ಲ ಇವುಗಳನ್ನೆಲ್ಲ ಸೇರಿಸಿ ಪುಡಿಮಾಡಿ ತುಪ್ಪದಲ್ಲಿ ಕರಿದು ತಯಾರಿಸುವ ಒಂದು ಸಿಹಿ ತಿಣಿಸು. ಇದನ್ನು ಪ್ರಸಾದವಾಗಿಯೂ ಬಳಸುವರು.

**ಆಂಬೋಡೆ** – ಕಡಲೆ ಬೇಳೆಯಿಂದ ತಯಾರಿಸುವ ಈ ಪದಾರ್ಥ ವಡೆಯ ಆಕಾರದಲ್ಲಿರುತ್ತದೆ. ಎಣ್ಣೆಯಲ್ಲಿ ಕರಿದ ಪದಾರ್ಥ ಖಾರ ಸಿಹಿ ಮಿಶ್ರಿತವಾಗಿರುವುದು.

**ಇಡ್ಡಲಿ** – ಅಕ್ಕಿಯ ನುಚ್ಚು ಇಲ್ಲವೆ ರವೆಯಿಂದ ತಯಾರಿಸುವ ತಿಂಡಿ. ಕೆಲವೊಮ್ಮೆ ಮಸಾಲೆ ಹಾಕಿಯೂ ಇಡ್ಡಲಿ ಮಾಡುವರು. ಸಪ್ಪೆಯಾಗಿದ್ದು ಸಾರು ಮತ್ತು ಚಟ್ನಿಯ ಜೊತೆಗೆ ತಿನ್ನಲು ಉತ್ತಮ.

**ಓಗರ**–ಅನ್ನ ಇಲ್ಲವೇ ಒಂದು ಬಗೆಯ ಕಷಾಯ. ಹಾಲೋಗರ ಎಂದರೆ ಹಾಲಿನಿಂದ ತಯಾರಿಸಿದ ಅನ್ನ. ಓಗರ ಕುಡಿಯುವ ಪದಾರ್ಥ. ಹುಳಿ, ಖಾರ, ಉಪ್ಪು, ಸಿಹಿ, ಕಹಿ, ಒಗರು ಹೀಗೆ ಆರು ಬಗೆಯ ರಸಗಳಿಂದ ಕಷಾಯವನ್ನು ತಯಾರಿಸುವರು. ಸಿಹಿ ಓಗರವನ್ನು ಮಕ್ಕಳಿಗೆ ಕುಡಿಯಲು ಕೊಡುವರು.

**ಕಡುಬು**–ಗೋದಿ ಹಿಟ್ಟು, ಕಡಲೆ ಬೇಳೆ, ಬೆಲ್ಲ, ಸಕ್ಕರೆ, ಕೊಬ್ಬರಿ ಇವುಗಳಿಂದ ಕಡುಬು ತಯಾರಿಸಿ ಎಣ್ಣೆಯಲ್ಲಿ ಕರಿದು ಸಿದ್ಧಗೊಳಿಸಲಾಗುವುದು. ಇದು ಸಿಹಿ ಪದಾರ್ಥ. ಹಬ್ಬಗಳಲ್ಲಿ, ಉತ್ಸವಗಳಲ್ಲಿ ಮತ್ತು ವಿಶೇಷ ಪೂಜೆಗಳ ಸಂದರ್ಭದಲ್ಲಿ ಈ ಪದಾರ್ಥವನ್ನು ತಯಾರಿಸುವರು.

**ಸೂಪ**–ತೊಗರಿಬೇಳೆ, ಅವರೆಬೇಳೆ, ಕಡಲೆಬೇಳೆ ಮುಂತಾದವುಗಳಿಂದ ತಯಾರಿಸುವ ಸಾರು, ರಸಂ. ಇದನ್ನು ಅನ್ನದೊಂದಿಗೆ ಹಾಕಿಕೊಂಡು ತಿನ್ನುವರು. ಇದು ಖಾರದ ದ್ರವ ಪದಾರ್ಥ.

**ಕಜ್ಜಾಯ**–ಜೋಳ, ರಾಗಿ, ಅಕ್ಕಿ, ಸಜ್ಜೆ, ಮುಸುಕಿನ ಜೋಳ, ಗೋದಿ ಮುಂತಾದ ಧಾನ್ಯಗಳ ಹಿಟ್ಟಿನಿಂದ ತಯಾರಿಸುವ ಊಟದ ಪದಾರ್ಥ. ಸಜ್ಜೆ ರೊಟ್ಟಿ ಸಂಕ್ರಾಂತಿಯ ವಿಶೇಷ. ಐದು ತರಹದ ರೊಟ್ಟಿಗಳನ್ನು ಪುಡಿ ಮಾಡಿ ಬೆಲ್ಲವನ್ನು ಬೆರೆಸಿ ಪಂಚ ಕಜ್ಜಾಯ ಮಾಡಿ ಪ್ರಸಾದಕ್ಕೆ ಬಳಸುವರು. ಸಜ್ಜೆ, ಗೋದಿ, ರೊಟ್ಟಿಗಳಿಂದ ಮಾಲಿದ್ದಿ ತಯಾರಿಸುವರು.

**ಕಡಲೆ ಗುಗ್ಗರಿ**–ಕುದಿಸಿದ ಕಡಲೆಗೆ ಗುಗ್ಗರಿ ಎಂದು ಹೆಸರು, ಚವಳಿ, ತೊಗರಿ, ಹೆಸರು ಮುಂತಾದ ಧಾನ್ಯಗಳಿಂದಲೂ ಗುಗ್ಗರಿ ಮಾಡುವರು. ಮಕ್ಕಳ ನಾಮಕರಣ ಸಮಾರಂಭದಂದು ಗುಗ್ಗರಿ ಹಾಕುವರು. ಹೆಸರಿಡಲು ಬರುವ ಎಲ್ಲರಿಗೂ ಗುಗ್ಗರಿ ಕೊಡುವ ರೂಢಿ ಇಂದಿಗೂ ಇದೆ.

**ಕಡಲೆ ಹೂರಣ**–ಕಡಲೆ ಬೇಳೆಯನ್ನು ಕುದಿಸಿ ಅದರಲ್ಲಿ ಬೆಲ್ಲವನ್ನು ಸೇರಿಸಿ ಹೂರಣ ತಯಾರಿಸಲಾಗುವುದು. ಲಕ್ಷ್ಮೀ ಪೂಜೆಗಾಗಿ ಈ ಪದಾರ್ಥ ತಯಾರಿಸುವರು. ಈ ಹೂರಣವನ್ನು ಕನಕಿನಲ್ಲಿ ತುಂಬಿ ಹೋಳಿಗೆ ಮತ್ತು ಕಡುಬು ತಯಾರಿಸಲಾಗುವುದು. ವಿಶೇಷ ಸಮಾರಂಭ, ಹಬ್ಬ ಪೂಜೆಗಳಂದು ಈ ಬಕ್ಷ್ಯ ತಯಾರಿಸುವರು.

**ಅಡಿಕೆ ವಿಳ್ಯ**–ಊಟದ ನಂತರ ತಿನ್ನುವ ತಾಂಬೂಲ, ಮಂಗಳಕರ ಪೂಜೆ ಮತ್ತು ಸಮಾರಂಭಗಳಂದು ದೇವರಿಗೆ ಮತ್ತು ಮುತ್ತೈದಿಯರಿಗೆ ಉಡಿ ತುಂಬಲು ಬಳಸುವರು. ದೇವರ ಪೂಜೆ ನೆರವೇರಿಸಿ ನೈವೆದ್ಯ ಅರ್ಪಿಸಿದ ನಂತರ ತಾಂಬೂಲವನ್ನು ಅರ್ಪಿಸುವ ಪದ್ಧತಿ ಇದೆ.

**ಚಿತ್ರಾನ್ನ**–ವಿವಿಧ ತರಕಾರಿಗಳನ್ನು, ಉಪ್ಪು, ಹುಳಿ, ಖಾರ ಸೇರಿಸಿ ಒಗ್ಗರಣೆ ಹಾಕಿದ ಒಂದು ರೀತಿಯ ಕಲಸನ್ನ, ಇದನ್ನು ಊಟಕ್ಕೂ ಮತ್ತು ತಿಂಡಿಗೂ ಬಳಸುವರು.

**ಚಿರೋಟಿ**– ಮೈದಾಹಿಟ್ಟು ತುಪ್ಪನ್ನು ಸೇರಿಸಿ ಪದರುಗಳನ್ನು ಮಾಡಿ ಕರಿದು ಆಮೇಲೆ ಸಕ್ಕರೆ ಪಾಕವನ್ನು ಸೇರಿಸಿ ತಯಾರಿಸುವ ಒಂದು ಸಿಹಿ ತಿನಿಸು.

**ದಧ್ಯಾನ್ನ**– 'ದಧಿ' ಎಂದರೆ ಮೊಸರು. ಮೊಸರನ್ನು ಹಾಕಿ ಮಾಡುವ ಅನ್ನ.

**ದೋಸೆ**– ಅಕ್ಕಿಯಿಂದ ತಯಾರಿಸುವ, ಬೇಯಿಸಿದ ಆಹಾರ. ಖಾಲಿದೋಸೆ, ಸೆಟ್ ದೋಸೆ, ಮಸಾಲೆ ದೋಸೆ, ಪೇಪರ ದೋಸೆ, ನೀರು ದೋಸೆ ಎಂಬ ವಿವಿಧ ಪ್ರಕಾರದ ದೋಸೆಗಳನ್ನು ತಯಾರಿಸುವರು. ಚಟ್ನಿ, ಸಾಂಬಾರ ಜೊತೆಗೆ ತಿಂಡಿಯಾಗಿ ತಿನ್ನುವ ಖಾರದ ತಿನಿಸು.

**ಪರಮಾನ್ನ**– ಇದು ಶ್ರೇಷ್ಠವಾದ ಆಹಾರ, ಪಾಯಸವೆಂದೂ ಕರೆಯುವರು. ಅಕ್ಕಿ, ಬೇಳೆ, ಗೋದಿಗಳಿಂದ ಬೆಲ್ಲ ಹಾಕಿ ಪಾಯಸವನ್ನು ತಯಾರಿಸುವರು. ಇದು ಸಿಹಿ ತಿನಿಸು. ಇದನ್ನು ಊಟಕ್ಕೆ ಬಳಸುವರು. ವಿಶೇಷ ಸಮಾರಂಭದಲ್ಲಿ ಮಾಡುವರು.

**ಬೂಂದಿ**– ಕಡಲೆ ಬೇಳೆಯ ಹಿಟ್ಟಿನಿಂದ ತಯಾರಿಸುವ ಕಾಳಿನಾಕಾರದ ಪದಾರ್ಥ. ಎಣ್ಣೆಯಲ್ಲಿ ಕರಿದು ಪಾಕಕ್ಕೆ ಸೇರಿಸಿ ಸಿದ್ದಪಡಿಸುವರು. ಇವುಗಳಿಂದ ಉಂಡಿ ಮತ್ತು ಚಿಕ್ಕೆಯನ್ನು ತಯಾರಿಸಲಾಗುವುದು. ಇದು ಸಿಹಿ ಪದಾರ್ಥ.

**ಮಂಡಿಗೆ**– ಗೋದಿ ಹಿಟ್ಟಿನಿಂದ ಲಟ್ಟಿಸಿ ಮಾಡಿ ಬೇಯಿಸುವರು. ನಂತರ ಅದರ ಮೇಲೆ ಪುಡಿಸಕ್ಕರೆ ತುಪ್ಪ ಹಾಕಿಕೊಂಡು ತಿನ್ನುವರು.

**ಮೊಸರು ಬುತ್ತಿ–** ಮೊಸರನ್ನ, ಅನ್ನವನ್ನು ತಯಾರಿಸಿ ಬೆಳ್ಳುಳ್ಳಿ ಮೊಸರನ್ನು ಕಲಸಿ ಸಿದ್ಧಪಡಿಸುವ ಆಹಾರವಿದು. ಹುಳಿಬಾನ ಎಂದೂ ಇದಕ್ಕೆ ಹೆಸರು, ಸೀಮಂತದ ವೇಳೆಯಲ್ಲಿ ಈ ತಿನಿಸನ್ನು ಕಡ್ಡಾಯವಾಗಿ ಮಾಡುವರು.

**ಮೋದಕ–** ಇದು ಗಣಪತಿಗೆ ಪ್ರಿಯವಾದ ಭಕ್ಷ್ಯ. ಗೋದಿ ಹಿಟ್ಟು, ಕೊಬ್ಬರಿ, ಬಿಳಿ ಎಳ್ಳು, ಸಕ್ಕರೆಯನ್ನು ಸೇರಿಸಿ ತಯಾರಿಸುವರು. ವಿಶೇಷ ಪೂಜೆಯಲ್ಲಿ ನೈವೇದ್ಯಕ್ಕಾಗಿ ತಯಾರಿಸುವರು.

**ಲಾಡು–** ಉಂಡಿ, ಬುಂದಿ, ಕಡಲೆ ಹಿಟ್ಟು, ಗೋದಿ ಹಿಟ್ಟು, ರವೆ, ಅಕ್ಕಿ ಹಿಟ್ಟು, ಅಳ್ಳಿಟ್ಟು, ಶೇಂಗಾ, ಎಳ್ಳು, ಪುಟಾಣಿ, ಚುರುಮುರಿ ಮುಂತಾದ ಪದಾರ್ಥಗಳಿಂದ ಉಂಡಿಯನ್ನು ತಯಾರಿಸುವರು. ನಾಗಪಂಚಮಿಯಲ್ಲಿ ವಿಶೇಷವಾಗಿ ಉಂಡಿಯನ್ನು ತಯಾರಿಸುವರು.

**ಶಾವಿಗೆ–** ಗೋದಿ ಹಿಟ್ಟಿನಿಂದ ತಯಾರಿಸುವರು. ಸಣ್ಣ ಸಣ್ಣ ಎಳೆಗಳಂತಿರುತ್ತವೆ. ಇವುಗಳಿಂದ ಪಾಯಸ, ಉಪ್ಪಿಟ್ಟು ತಯಾರಿಸುವರು. ಶಾವಿಗೆಯನ್ನು ಬಿಸಿ ನೀರಿನಲ್ಲಿ ಹಾಕಿ ಬಸಿದು ಹಾಲು, ತುಪ್ಪ, ಸಕ್ಕರೆ ಸೇರಿಸಿ ಊಟ ಮಾಡುವುದಕ್ಕೆ ಬಳಸುವರು. ಮದುವೆ, ಶೋಭನ, ಪೂಜೆಯಲ್ಲಿ ಶಾವಿಗೆ ಬೇಕೆಬೇಕು.

**ವಡೆ–** ಕಡಲೆ ಹಿಟ್ಟಿನಲ್ಲಿ ಖಾರ, ಉಪ್ಪು, ಮಸಾಲೆಯನ್ನು ಹಾಕಿ ದುಂಡಗೆ ಮಾಡಿ ಎಣ್ಣೆಯಲ್ಲಿ ಕರಿಯುವರು. ಇದು ಖಾರದ ತಿನಿಸು. ಮೊಸರು, ಚಟ್ನಿಯ ಜೊತೆಗೆ ತಿನ್ನುವರು.

**ಸಂಡಿಗೆ, ಹಪ್ಪಳ–** ಅಕ್ಕಿಯಿಂದ, ಮುಸುಕಿನ ಜೋಳದಿಂದ ತಯಾರಿಸಿ ಒಣಗಿಸಿದ ಇದನ್ನು ಕರಿದು ತಿನ್ನುವರು. ಹಪ್ಪಳವನ್ನು ಅಕ್ಕಿ, ಚವಳಿ, ಉದ್ದಿನ ಬೇಳೆಗಳಿಂದ ದುಂಡಗೆ ಲಟ್ಟಿಸಿ ಮಾಡುವರು. ಕರಿದು ಇಲ್ಲವೆ ಸುಟ್ಟು ತಿನ್ನುವರು. ಸಿಹಿ ಊಟದೊಂದಿಗೆ ಇವುಗಳನ್ನು ತಿನ್ನುವರು.

**ಹೋಳಿಗೆ–** ಕಡಲೆ ಬೇಳೆ ಮತ್ತು ಗೋದಿಹಿಟ್ಟು ಹಾಗೂ ಬೆಲ್ಲದಿಂದ ತಯಾರಿಸುವ ಸಿಹಿ ತಿನಿಸು. ಹಬ್ಬ ಹರಿದಿನ, ಜಾತ್ರೆ–ಉತ್ಸವ, ಪೂಜೆಗಳ ಸಂಬರ್ಧದಲ್ಲಿ ಇದನ್ನು ಮಾಡುವರು.

**ಹುರಿಕಡಲೆ–** ಕಡಲೆಯನ್ನು ಉಪ್ಪು ಹಾಕಿ ಹುರಿದು ಚಹದ ಜೊತೆ ಇಲ್ಲವೆ ಚುರುಮುರಿಯ ಜೊತೆ ತಿನ್ನಲು ಬಳಸುವರು.

ಹೀಗೆ ಜೀವೂಬಾಯಿಯ ಕೆಲವು ಆಹಾರ ಪಾನಿಯಗಳನ್ನು ಉಲ್ಲೇಖಿಸುವಳು. ಇವು ಹೆಚ್ಚಾಗಿ ಬಾಲಕೃಷ್ಣನನ್ನು ರಮಿಸುವಾಗ ಆತನ ಹಠಮಾರಿತನವನ್ನು ಕಡಿಮೆ ಮಾಡುವ ವೇಳೆಯಲ್ಲಿ ತಾಯಿಯು ನಿನಗೆ ಈ ತಿನಿಸುಗಳನ್ನು ಕೊಡುವೆ ಅಳಬೇಡ ಎಂದು ಸಮಾಧಾನ ಪಡಿಸುವಳು. ಶ್ರೀಹರಿಯ ಪೂಜೆ ಮತ್ತು ಶ್ರೀಮಹಾಲಕ್ಷ್ಮಿಯ ಪೂಜೆಗೆ ತಯಾರಿಸಿದ ಭಕ್ಷ್ಯಗಳನ್ನು ಹೆಸರಿಸಿ ಅರ್ಪಿಸುವ ಸಂದರ್ಭದಲ್ಲಿ ಕಡುಬು, ಹೋಳಿಗೆ, ಚಿತ್ರಾನ್ನ ಮುಂತಾದ ಪದಾರ್ಥಗಳನ್ನು ಜೀವೂಬಾಯಿ ಉಲ್ಲೇಖಿಸುವಳು. ಅಂದರೆ ದೇವರಿಗೆ ಪ್ರೀತಿಯಿಂದ ಮತ್ತು ಭಕ್ತಿಯಿಂದ ಇವೆಲ್ಲವುಗಳನ್ನು ಅರ್ಪಿಸಿ ತೃಪ್ತಳಾಗಿದ್ದಾಳೆ. ಆ ಮೂಲಕ ಹಲವು ರೀತಿಯ

ತನ್ನ ಪರಿಸರದ ತಿನಿಸುಗಳನ್ನು ಪರಿಚಯಿಸಿದ್ದಾಳೆ. ಜನಸಾಮಾನ್ಯರ ಆಹಾರ ಕ್ರಮವನ್ನು ಅವಳು ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ.

**೭.೨. ಉಡುಗೆ ತೊಡುಗೆಗಳು–**

'ಉಡುಗೆ' ಪದ ನಿಷ್ಪತ್ತಿಯನ್ನು ಸಾಹಿತ್ಯ ಪರಿಷತ್ತು ನಿಘಂಟಿನಲ್ಲಿ ಉಡು+ಕೆ>ಉಡುಕೆ>ಉಡು+ಗೆ>ಉಡುಗೆ>ಉಡಿಗೆ ತಮಿಳಿನಲ್ಲಿ ಉಡಿಕ್ಕೈ ಎಂದು ಹೇಳಿ ಉಡುಗೆಯಂದರೆ ಉಟ್ಟುಕೊಳ್ಳುವ ಬಟ್ಟೆ ಅಥವಾ ಧರಿಸುವ ವಸ್ತ್ರ ಎಂದು ಹೇಳಲಾಗಿದೆ.[೧] ಈ ಉಡುಗೆಗಳು ಧರ್ಮದಿಂದ–ಧರ್ಮಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ ಸ್ತ್ರೀ–ಪುರುಷರ ವಯೋಮಾನಕ್ಕನುಗುಣವಾಗಿ ವೈವಿದ್ಯಮಯವೂ ಆಗಿರುತ್ತವೆ.

ಜೀವೂಬಾಯಿಯು ಕೆಲವೇ ಉಡುಗೆಗಳನ್ನು ಹೆಸರಿಸಿದ್ದಾಳೆ. ಅವೂ ಸಹ ಶ್ರೀಹರಿ ಮತ್ತು ಲಕ್ಷ್ಮಿಯ ಉಡುಗೆಗಳೇ ಆಗಿವೆ.

**ಅಂಗಿ–** ಇದು ಮೈಮೇಲೆ ತೊಡುವ ಬಟ್ಟೆ, ಅಳತೆಗನುಗುಣವಾಗಿ ಹೊಲಿದಿರುತ್ತದೆ. ಪುರುಷರು ತೊಡುವ ಬಟ್ಟೆ. ಬಾಲಗೋಪಾಲನನ್ನು ಕರೆಯುವ ಇಲ್ಲವೆ ಜೋಗುಳ ಹಾಡುವ ವೇಳೆಯಲ್ಲಿ 'ನಿನಗೆ ಜರದ, ಬಣ್ಣದ ಅಂಗಿಯ ತೊಡಿಸುವೆನು ಬಾ' ಎಂದು ತಾಯಿಯು ಕರೆಯುವಳು.

**ಜರದ ಪೀತಾಂಬರ, ಜರದಪಟ್ಟಿ–** ಇದೂ ಸಹ ಉಟ್ಟುಕೊಳ್ಳುವ ವಸ್ತ್ರ. ಶ್ರೀ ಲಕ್ಷ್ಮಿಯು ಉಟ್ಟುಕೊಳ್ಳುವ ಮಹಾಲಕ್ಷ್ಮಿಯ ಸೌಂದರ್ಯವನ್ನು ಕೊಂಡಾಡುವಾಗ 'ಜರದ ಪೀತಾಂಬರ ಉಟ್ಟು ಜರದ ಪಟ್ಟಿಯನಿಟ್ಟು ಶೋಭಿಸುತಿಹಳು' ಎಂದು ಹಾಡುವಳು.

**ಕೇಸರಿಯ ಪಿತಾಂಬರ–** ಕೇಸರಿಯ ಬಣ್ಣದ ರೇಷ್ಮೆಯ ವಸ್ತ್ರ. ಇದು ಶ್ರೀಹರಿ ತೊಡುವ ಅಂದರೆ ಉಟ್ಟುಕೊಳ್ಳುವ ವಸ್ತ್ರ.

**ಜರದೊಲ್ಲಿ–** ಮಿಂಚುವ ಜರದಿಂದ ಕೂಡಿದ ವಲ್ಲೆ. ಇದು ಶ್ರೀಹರಿಯು ತನ್ನ ಮೈಮೇಲೆ ಹೊದ್ದುಕೊಳ್ಳುವ ವಸ್ತ್ರ, ಇದಕ್ಕೆ ಶಲ್ಯ ಎಂದೂ ಕರೆಯುವರು.

**ದಟ್ಟಿ–** ಸೀರೆಯಾಕಾರದ ವಸ್ತ್ರ, ಮೋಹಿನಿಯ ವರ್ಣನೆಯಲ್ಲಿ ಈ ಬಟ್ಟೆ ಉಲ್ಲೇಖಿತಗೊಂಡಿದೆ. ಇದು ಸೊಂಟಕ್ಕೆ ಸುತ್ತಿಕೊಳ್ಳುವ ವಸ್ತ್ರ.

**ರುಮಾಲು–** ತಲೆಗೆ ರೂಮಾಲು ಸುತ್ತಿಕೊಂಡು ಬಾರೊ ಎಂದು ಜೀವಮ್ಮ ತಾಯಿಯಂತೆ ಬಾಲಕೃಷ್ಣನನ್ನು ಕರೆಯುವಳು. ಇದಕ್ಕೆ ಪೇಟಾ ಎಂದೂ ಕರೆಯುವರು. ರೇಷ್ಮೆ ರುಮಾಲು, ಜರದ ರುಮಾಲು, ಪಟ್ಟಿಪಟ್ಟಿ ರುಮಾಲು, ಬಿಳಿ ರುಮಾಲು ಹೀಗೆ ಬೇರೆ ಬೇರೆ ವಿಧಗಳನ್ನು ಕಾಣುತ್ತೇವೆ. ಇದನ್ನು ಪುರುಷರು ಬಳಸುವರು. ಚುಂಗನ್ನು ಬಿಡದೇ ಸುತ್ತಿಕೊಳ್ಳವ ಪೇಟಾಕ್ಕೆ ರುಮಾಲು ಎನ್ನುವರು.

**ಸರಿಗೆ ಅಂಚಿನ ಕುಪ್ಪಸ–** ಇದರ ಉಲ್ಲೇಖ ಹೀಗೆ ಬಂದಿದೆ

ಜರದ ಪಿತಾಂಬರವು ಲಕ್ಷ್ಮಿಗೆ
ಸರಿಗೆ ಅಂಚಿನ ಕುಪ್ಪಸವು
ಸಿರಿಯರಮಣ ಕಮಲನಾಭ
ವಿಠ್ಠಲನರಸಿಗೀಗಲೆ [೨]

ಚಾರುಮತಿಯು ಶ್ರೀಲಕ್ಷ್ಮಿಗೆ ಉಡಿಯ ತುಂಬುವಾಗ ಜರದ ಪಿತಾಂಬರ(ಸೀರೆ), ಸರಿಗೆ ಅಂಚಿನ ಕುಪ್ಪಸವನ್ನು ಉಡುಗೊರೆಯಾಗಿ ನೀಡುವಳು. ಹೆಣ್ಣುಮಕ್ಕಳು ತೊಟ್ಟುಕೊಳ್ಳವ ವಸ್ತ್ರಕ್ಕೆ ಕುಪ್ಪಸವೆಂದು ಹೆಸರು. ಕುಪ್ಪಸಗಳ ಅಂಚು(ದಡಿ) ಬಗೆಬಗೆಯ ಚಿತ್ತಾರಗಳನ್ನು ಹೊಂದಿರುತ್ತವೆ. ಇದು ಸರಗಿ ಆಭರಣದ ಚಿತ್ತಾರವನ್ನು ಹೊಂದಿದ ಅಂಚಿನ ಕುಪ್ಪಸ. ಸೀಮಂತಕ್ಕೂ ಕುಪ್ಪಸ > ಕುಬಸ ಎಂದು ಕರೆಯುವ ರೂಢಿ ಇದೆ.

**ಸೀರೆ–** ಅಂಚು ಸೆರಗು ಮತ್ತು ಒಳಮೈಗಳ ತ್ರಿವೇಣಿಸಂಗಮದಿಂದ ಕರ್ನಾಟಕದ ಸೀರೆಗಳ ಸೊಬಗು ಭಾರತೀಯರನ್ನು, ಪರದೇಶಿಯರನ್ನು ಆಕರ್ಷಿಸಿದೆ.[೩] ಸೀರೆಗಳಲ್ಲಿ ಹಲವು ಬಗೆಗಳಿವೆ. ಕೆಲವು ಸ್ಥಳಗಳು ಸೀರೆಗಳ ತಯಾರಿಕೆಯಿಂದ ಪ್ರಸಿದ್ದವಾಗಿವೆ. ಅವುಗಳಲ್ಲಿ ಇಲಕಲ್, ಗದಗ, ಮೊಳಕಾಲ್ಮುರು, ಮೈಸೂರ, ಚಿಕ್ಕಬಳ್ಳಾಪೂರ, ಬೆಂಗಳೂರು ಪ್ರಮುಖವಾದವುಗಳು.

ಉಡುವ ಸೀರೆಯ ಕದ್ದು
ತುಡುಗ ಕೃಷ್ಣನ ರಾಣಿಗಾರುತಿ [೪]

ಎಂಬ ಆರತಿ ಪದ್ಯದಲ್ಲಿ ಲಕ್ಷ್ಮಿಯನ್ನು ಗುಣಗಾನ ಮಾಡಿರುವುದು ತಿಳಿಯುತ್ತದೆ. ಜೀವಮ್ಮ ಕೃಷ್ಣನನ್ನು 'ಉಡುವ ಸೀರೆಯ ಕದ್ದ ತುಡುಗ ಕೃಷ್ಣ' ಎಂದು ಸಂಬೋಧಿಸಿದ್ದಾಳೆ. ಇಲ್ಲಿ ಪ್ರಸ್ತಾಪಿತವಾಗಿರುವ ಸೀರೆ ಗೋಪಿಕಾಸ್ತ್ರೀಯರ ಸೀರೆಗಳು, ಅಂದರೆ ಜನ ಸಾಮಾನ್ಯ ಹೆಂಗಸರು ಉಟ್ಟುಕೊಳ್ಳುವ ವಸ್ತ್ರಗಳು. ಸೀರೆಯಲ್ಲಿ ಸೆರಗು, ಅಂಚು ಮತ್ತು ಒಳಮೈ ಎಂಬ ಮೂರು ಮುಖ್ಯ ಭಾಗಗಳು.

ಜೀವಮ್ಮ ಹೆಚ್ಚಾಗಿ ಪ್ರಸ್ತಾಪಿಸಿರುವ ಉಡುಗೆಗಳು ಶ್ರೀಹರಿ ಮತ್ತು ಲಕ್ಷ್ಮಿಗೆ ಸೇರಿದವುಗಳು. ಸೀರೆ ಎಂಬ ಗೋಪಿಕೆಯರ ವಸ್ತ್ರ ಉಲ್ಲೇಖಿಸುವಾಗ ಜನಸಾಮಾನ್ಯರ ಬಟ್ಟೆಯನ್ನು ಒಂದಿಷ್ಟು ಪ್ರಸ್ತಾಪಿಸಿರುವಳು. ಈ ರೀತಿ ಅವಳು ಕೇವಲ ದೇವ–ದೇವತೆಗಳ ಉಡುಗೆ ಪ್ರಸ್ತಾಪಿಸಲು ಕಾರಣವೇನೆಂದರೆ ಅವಳ ಇಡೀ ಕೃತಿಗಳ ವಿಷಯ ಶ್ರೀಹರಿಯ ಸಂಕೀರ್ತನೆಯೇ ಆಗಿದೆ. ಹಾಗಾಗಿ ಅವಳಿಗೆ ಜನಸಾಮಾನ್ಯರ ಉಡುಗೆ–ತೊಡುಗೆಗಳು ಮುಖ್ಯವೆನಿಸುವುದಿಲ್ಲ.

'ತೊಡುಗೆ' ಪದ ತುಡುವಿನಿಂದ ಬಂದಿದೆ. ತುಡು+ಗೆ>ತೊಡು+ಗೆ>ತೊಡುಗೆ. ತೊಡುಗೆ ಎಂದರೆ ಧರಿಸುವ ಆಭರಣ. ಅಥವಾ ತೊಟ್ಟುಕೊಳ್ಳುವ ವಸ್ತು ಎಂದು ಅರ್ಥೈಸಲಾಗಿದೆ. ಆಭರಣಗಳನ್ನು ಹೆಚ್ಚಾಗಿ

ಬಂಗಾರ, ಬೆಳ್ಳಿಗಳಿಂದ ತಯಾರಿಸುತ್ತಾರೆ. ಆದರೆ ಇತ್ತೀಚಿಗೆ ಬೇರೆ ಬೇರೆ ವಸ್ತುಗಳಿಂದ ಆಭರಣಗಳು ತಯಾರಾಗುತ್ತವೆ. ಪ್ಲ್ಯಾಸಿಟಿಕ್‌ನಿಂದಲೂ ತಯಾರಾದ ಆಭರಣಗಳು ಇಂದು ಎಲ್ಲೆಡೆಗೆ ಕಾಣಬರುತ್ತವೆ.

ಜೀವೂಬಾಯಿಯು ಪ್ರಸ್ತಾಪಿಸಿರುವ ಆಭರಣಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

**ಕಾಲಿನಲ್ಲಿ ಹಾಕಿಕೊಳ್ಳುವ ಆಭರಣಗಳು–** ಅಂದಿಗೆ, ಕಡಗ, ರುಳಿ, ರುಳಿಗೆಜ್ಜೆ, ಕಣಕಾಲಂದಿಗೆ, ಕಾಲಂದುಗೆ, ಕಾಲಪೆಂಡೆ, ಕಾಲಸರ, ಕಾಲ್ಗಡಗ, ಕಾಲ್ಬೆರಳುಂಗುರು, ಕಿರುಗಜ್ಜೆ, ಕಿರುಗಂಟ, ಕಿರುಪಿಲ್ಲಿ, ಗೆಜ್ಜೆಸರಪಣಿ, ನೂಪುರ ಗೆಜ್ಜೆ, ಪಾದಸರ, ಪಾದುಕೆ, ಪಿಲ್ಲಿ, ಪೈಜಣ ಈ ಎಲ್ಲ ಆಭರಣಗಳು ಬೆಳ್ಳಿಯಿಂದ ಮಾಡಿದವುಗಳು ಸ್ತ್ರೀಯರು ಮತ್ತು ಸಣ್ಣಮಕ್ಕಳು ಇವುಗಳನ್ನು ಧರಿಸಿಕೊಳ್ಳವರು.

**ಸೊಂಟದಲ್ಲಿ ಹಾಕಿಕೊಳ್ಳುವ ಆಭರಣಗಳು–** ಉಡದಾರ, ಉಡದಾರಗೆಜ್ಜೆ, ಉಡುಗೆ ಗೆಜ್ಜೆ, ನಡುವಿನ ಕಿರುಗಂಟೆಗಳು, ನವರತ್ನದಪಟ್ಟಿ, ಪಟ್ಟೆಚಲ್ಲಣ, ಪಟ್ಟೆನಾಮ, ಮಾಣಿಕ್ಯದ ಸರಪಟ್ಟಿ, ಚಲ್ಲಣ, ಕಾಂಚಿಧಾಮ. ಇವುಗಳು ಸಣ್ಣಮಕ್ಕಳು ಹೆಂಗಸರು ತೊಡುವ ಆಭರಣಗಳು ಇವು ಬಹುಪಾಲು ಬೆಳ್ಳಿಯವೇ ಆಗಿರುತ್ತವೆ.

**ಕೈಯಲ್ಲಿ ಹಾಕಿಕೊಳ್ಳುವ ಆಭರಣಗಳು–** ಉಂಗುರು, ಉಂಗುರಡ್ಡಿಕೆ, ಕಂಕಣ, ಗುಂಡುಬಿಂದಲಿ, ತೋಳಬಂದಿ, ತೋಳಬಾಪುರಿ, ನಾಗಮುರಿಗಿ, ಬಂದಿ, ಬಾಜುಬಂದಿ, ಬಿಂದಲಿ, ಮುಂಗೈಮುರಿಗಿ, ಮುತ್ತಿನ ಭುಜಕೀರ್ತಿ, ಮುರುಡಿ, ವಂಕಿ, ವಜ್ರದೊಂಕಿ, ಹವಳಕಟ್ಟಿ, ಬಾಪುರಿ, ಗೀರುಬಳೆ, ಹಾಸರಬಳೆ, ಬಳೆ ಇವು ಬೆಳ್ಳಿ ಮತ್ತು ಬಂಗಾರದಿಂದ ಮಾಡಿರುತ್ತವೆ. ಸಣ್ಣಮಕ್ಕಳು ಮತ್ತು ಮಹಿಳೆಯರು ಧರಿಸುವರು.

**ಕೊರಳಾಭರಣಗಳು–** ಮುತ್ತಿನ ಸರ, ಏಕಾವಳಿ, ಕೌಸ್ತುಭಹಾರ, ಕೌಸ್ತುಭ ಮಣಿ, ಗೆಜ್ಜೆ ಟಿಕ್ಕೆ, ತಾಯಿತ, ತುಳಸಿಮಾಲೆ, ನವರತ್ನದ ಸ್ಪಟಿಕ ಮುತ್ತಿನಹಾರ, ಪೊನ್ನಸರಪಳಿ, ಮುತ್ತಿನಪದಕ, ಮೋಹನ್ನ ಮಾಲೆ, ಮುರಳಿಸರ, ರತ್ನದ್ವಾರ, ರತ್ನಪಟಳಹಾರ, ರತ್ನಾಭರಣ, ವಜ್ರದ ತೋರ ಮುತ್ತಿನ ಮಾಲೆ, ವಜ್ರದ ಪದಕ, ವೈಜಯಂತಿ, ಸರಪದಕ, ಸರಿಗೆ, ಹಾರ, ಕಠ್ಠಾಣಿಸರ ಈ ಆಭರಣಗಳಲ್ಲಿ ಕೆಲವು ಪುರುಷರು ಕೆಲವು ಮಹಿಳೆಯರು ತೊಡುವ ಆಭರಣಗಳಿವೆ.

**ಮೂಗಿನ ಆಭರಣಗಳು–** ಮೂಗುತಿ, ಮುಖರ, ಬುಲಾಕು,

**ಕಿವಿಯ ಆಭರಣಗಳು–** ಕರ್ಣಕುಂಡಲ, ಚಳತುಂಬು, ಕುಂಡಲ, ರತ್ನದ ಚೌಕಳಿ, ಕುರುಡಿಬಾವುಲಿ, ಚಂದ್ರಮುರುವು, ನೀಲದಬಾವಲಿ, ಬುಗುಡಿ, ಮಕರ ಕುಂಡಲ, ಮೀನ್ ಬಾವುಲಿ ಮುರಿ ಇವುಗಳಲ್ಲಿ ಹೆಚ್ಚಾಗಿ ಹೆಂಗಸರು ತೊಡುವ ಆಭರಣಗಳಿವೆ. ಮುರುವು ಮಾತ್ರ ಪುರುಷರು ಧರಿಸುವ ಆಭರಣವಾಗಿದೆ.

**ತಲೆಯ ಆಭರಣಗಳು–** ಆಣು ಮುತ್ತಿನ ಮಕುರ, ಇಂದ್ರನೀಲ ಮಣಿಕಿರೀಟ, ಗೊಂಡ್ಯೆ, ಚೂಡಾಮಣಿ, ನವರತ್ನ ಖಚಿತ ಕಿರೀಟ, ಬೈತಲೆ ಬಟ್ಟು, ಮುಡಿ ಉಂಗುರ, ರತ್ನಕಿರೀಟ, ರತ್ನಮುತ್ತಿನ ಚಂಡು, ಹೆರಳು ಬಂಗಾರ, ಹೇಮಮಣಿ ಕಿರೀಟ, ಅರಳೆಲೆ, ನಾಗರ ಮುಂತಾದವುಗಳು ಹೆಂಗಸರು ಮತ್ತು ದೇವತೆಗಳ ಆಭರಣಗಳು.

ಜೀವೂಬಾಯಿಯು ತನ್ನ ರಚನೆಗಳಲ್ಲಿ ವಿವಿಧ ಅಂಗಾಂಗಗಳಿಗೆ ಹಾಕಿಕೊಳ್ಳವು ಆಭರಣಗಳನ್ನು ಹೆಸರಿಸಿರುವಳು. ಇಲ್ಲಿಯ ಬಹುಪಾಲು ಆಭರಣಗಳು ದೇವತೆಗಳ ಆಭರಣಗಳೇ ಆಗಿವೆ. ಮಕ್ಕಳ ಆಭರಣಗಳಲ್ಲಿ ದಿನನಿತ್ಯದ ಸಾಮಾನ್ಯ ಮಕ್ಕಳು ಧರಿಸುವ ತೊಡುಗೆಗಳು ಉಲ್ಲೇಖಿತಗೊಂಡಿವೆ. ಮೋಹಿನಿಯ ವರ್ಣನೆ, ಶ್ರೀಹರಿಯ ಸೌಂದರ್ಯದ ಸಂದರ್ಭ ಬಂದಾಗಲೆಲ್ಲಾ ಈ ಆಭರಣಗಳನ್ನು ಹಾಕಿಕೊಂಡ ಸರ್ವಾಲಂಕಾರ ಭೂಷಿತನಾದ ಪರಮಾತ್ಮನನ್ನು ಕಂಡರಿಸಿದ್ದಾಳೆ. ಇಲ್ಲಿ ಬಳಕೆಯಾಗಿರುವ ಎಲ್ಲ ಆಭರಣಗಳೂ ಜನಪದೀಯ ಆಭರಣಗಳೇ ಆಗಿವೆ. ಬೆಳ್ಳಿ, ಚಿನ್ನ, ನವರತ್ನಗಳಿಂದ ನಿರ್ಮಿತವಾದ ಆಭರಣಗಳು ಇಲ್ಲಿ ಉಲ್ಲೇಖಿತಗೊಂಡಿವೆ.

೭.೩. **ಆಚರಣೆ ಮತ್ತು ಸಂಪ್ರದಾಯಗಳು–**

ಯುಗಾದಿಯು ಜಿವಮ್ಮಳಿಗೆ ಬಹು ಮಹತ್ವದ ಹಬ್ಬ. ಪ್ರತಿ ಯುಗಾದಿಯಂದು ಆ ಸಂವತ್ಸರವನ್ನು ಕುರಿತು ವಿಶೇಷ ಕೀರ್ತನೆಗಳನ್ನು ರಚಿಸಿ ಗುರುಗಳಿಗೆ ಅರ್ಪಿಸುವುದು ಅವಳ ವಿಶೇಷ ಪದ್ಧತಿಯಾಗಿತ್ತು. ಎಲ್ಲರೂ ನೈವೆದ್ಯ ಅರ್ಪಿಸುವುದಕ್ಕೆ ಬದ್ಧರಾಗಿರುತ್ತಾರೆ. ಆದರೆ ಜೀವಮ್ಮ ಕೀರ್ತನೆ ಅರ್ಪಿಸುವ ಕ್ರಮ ವಿಶಿಷ್ಟವಾದುದು.

ತನ್ನ ದಿನನಿತ್ಯದ ಕಾರ್ಯಸೂಚಿಯನ್ನು "ಬೆಳಗಾಗಲು ಅರಘಳಿಗೆಯು ಇರುತಿರೆ" [೫] ಕೀರ್ತನೆಯಲ್ಲಿ ವಿವರವಾಗಿ ನಿರೂಪಿಸಿರುವಳು. ಈ ಕೀರ್ತನೆಯಲ್ಲಿ ಅವಳ ಆಚರಣೆಗಳನ್ನು ಅರಿಯುತ್ತೇವೆ 'ಶ್ರೀಹರಿಮಾನಸ ಪೂಜಾ' ಖಂಡ ಕಾವ್ಯದಲ್ಲಿ ಉದಯಕಾಲದೊಳು ಎದ್ದು, ದೇವರಪೂಜೆಗೆ ತಯಾರಿ ಮಾಡಿಕೊಳ್ಳವಳು, ಶ್ರೀಹರಿಯನ್ನು ಕ್ರಮಾನುಗತವಾಗಿ ಪೂಜಿಸುವ ವಿಧಾನವನ್ನು ಮನಗಾಣಿಸುವಳು. ಇದು ಗಾತ್ರದಲ್ಲಿ ಚಿಕ್ಕದಾದರೂ ಜೀವಮ್ಮಳ ಜೀವನದ ಭಕ್ತಿಯ ಉತ್ಕಟತೆಯನ್ನು ತೋರುತ್ತದೆ.

ಹಾಗೆಯೇ ಜೀವೂಬಾಯಿಯು ಕೆಲವು ಸಂಪ್ರದಾಯಗಳನ್ನು ತನ್ನ ಕೃತಿಗಳಲ್ಲಿ ನಿರೂಪಿಸಿದ್ದಾಳೆ.

**ಮದುವೆ–** ಮದುವೆಯ ಸಂಪ್ರದಾಯವನ್ನು 'ಶ್ರೀರಾಮಜನನ ಮತ್ತು ಸೀತಾಕಲ್ಯಾಣ' ಕೃತಿಯಲ್ಲಿ ತಿಳಿಸಿರುವಳು. ರಾಮಸೀತೆಯರ ಮತ್ತು ಭರತ, ಲಕ್ಷ್ಮಣ, ಶತೃಘ್ನರ ಮದುವೆಯ ಬಗೆಗೆ ಹೇಳುವಾಗ 'ಧನುವನೆತ್ತಿದ ಶ್ರೀರಾಮನಿಗೆ ಸೀತೆ ಮಾಲೆ ಹಾಕುವುದು, ಶ್ರೀರಾಮನನ್ನು(ವರನಾದ) ವಿವಿಧ ವಾದ್ಯ ವೈಭವಗಳೊಂದಿಗೆ ಮೆರವಣಿಗೆಯ ಮೂಲಕ ಕರೆತರುವುದು, ಮಾವನಾದ ಜನಕನು ಅಳಿಯಂದಿರರ ಕಾಲು ತೊಳೆದು ರತ್ನದುಂಗುರವ ನೀಡಿ ಗೌರವಿಸುವುದು, ಲಾಜಹೋಮ, ನಾಕಬಲಿ, ಓಕುಳಿ, ಮದುವೆಗೆ ಬಂದ ಸುಮಂಗಲೆಯರು ಗಂಡನ ಹೆಸರು ಹೇಳುವುದು, ಅಳಿಯರಿಗೆ ಧನ, ಕನಕ, ಆನೆ ಹೀಗೆ ವಿವಿಧ ಬಗೆಯ ಉಡುಗೊರೆಗಳನ್ನು ಕೊಟ್ಟು ಬಹು ವೈಭವದಿಂದ ಅಯೋಧ್ಯೆಗೆ ಬೀಳ್ಕೊಡುವ ಸಂದರ್ಭ ಇಂದಿನ ಮದುವೆಗಳನ್ನು ನೆನಪಿಸುತ್ತವೆ. ಬೀಗರಿಗೆ ಉಡುಗೊರೆ ನೀಡುವುದು ಸಹ ಚಿತ್ರಿತಗೊಂಡಿದೆ. 'ರಾಧಾಮಾಧವ

ವಿಲಾಸ' ದಲ್ಲಿಯೂ ಸಹ ಮದುವೆಯನ್ನು ಬಹು ಸುಂದರವಾಗಿ ಚಿತ್ರಿಸಲಾಗಿದೆ. ರಾಧಾಮಾಧವರ ಮದುವೆಗಾಗಿ ಗೋಪಿನಂದನನು ಇಡೀ ಅರಮನೆಯನ್ನು, ಬೀದಿಯನ್ನು ಬಗೆಬಗೆಯ ಬಣ್ಣ, ರಂಗೋಲಿ, ಚಿತ್ತಾರಗಳಿಂದ, ಛತ್ರಗಳಿಂದ ಶೃಂಗರಿಸುವನು. ಮದುವೆಗೆ ಬಂದ ಸಮಸ್ತ ಜನ ಸಮೂಹವನ್ನು ಆತ್ಮೀಯತೆಯಿಂದ ಸ್ವಾಗತಿಸಿ ಉಪಚರಿಸುವನು. ಪುರೋಹಿತರು ಮಂಗಳಾಷ್ಟಕವನ್ನು ಹೇಳುವರು. ಇದೇ ವೇಳೆ ಅಪ್ಸರೆಯರು ನೃತ್ಯಗೈಯ್ಯುವರು. ರಾಧಾಮಾಧವರ ಮೇಲೆ ಪುಷ್ಪಮಳೆ ಸುರಿಯುವುದು. ಲಾಜ ಹೋಮವನ್ನು ಮಾಡಿ ಉರುಟಣಿ ಮಾಡುವರು. ಗಂಡಹೆಂಡತಿಯರು ಪ್ರೀತಿಯಿಂದ ಓಕುಳಿಯನ್ನಾಡಿದರು. ಮದುವೆಯಾದ ನಾಲ್ಕು ದಿನದ ನಂತರ ನಾಗವಲ್ಲಿ ನಡೆಯಿತು. ಹೀಗೆ ಮದುವೆಯ ವಿವಿಧ ವಿಧಿ ವಿಧಾನಗಳನ್ನು ಜೀವಮ್ಮ ಬಲು ಪರಿಣಾಮಕಾರಿಯಾಗಿ ಚಿತ್ರಿಸಿರುವಳು. ಆ ಮೂಲಕ ನಮ್ಮ ಸಾಂಸ್ಕೃತಿಕ ಸಂಗತಿಗಳನ್ನು ಚಿತ್ರಿಸಿರುವಳು.

**ಉಡಿ ತುಂಬುವುದು–** ಮದುವೆಯಾಗಿ ಗಂಡನಮನೆಗೆ ಹೊರಟ ಮೊದಲಗಿತ್ತಿಗೆ ಮತ್ತು ಸೀಮಂತದ ವೇಳೆಯಲ್ಲಿ ಮುತ್ತೈದೆಯರು ಸೇರಿ ಸೋಬಾನ ಹಾಡುತ್ತಾ ಉಡಿ ತುಂಬುವುದು ಒಂದು ವಿಶಿಷ್ಠ ಸಂಪ್ರದಾಯ.

"ಉಡಿಯ ತುಂಬಿರೆ ಕಡಲೊಡೆಯನ
ಮಡದಿಗ್ಹರುಷದಿ" [೬]

ಕೀರ್ತನೆಯಲ್ಲಿ ಉಡಿ ತುಂಬುವ ಚಿತ್ರಣ ಮೂಡಿಬಂದಿದೆ. ಶ್ರೀಲಕ್ಷ್ಮಿಗೆ ಜರಿಪಿತಾಂಬರ, ಮೈಮೇಲೆಲ್ಲಾ ಆಭರಣಗಳನ್ನು ಹಾಕಿ ಮುತ್ತು, ಅರಿಶಿಣ, ಅಡಿಕೆ, ಉತ್ತತ್ತಿ, ನಿಂಬಿ, ನೇರಳೆ, ಜಂಬು, ದ್ರಾಕ್ಷಿ, ಕದಳಿ, ದಾಳಿಂಬೆ, ತೆಂಗುಸಹಿತ ಅತಿ ಸಂಭ್ರಮದಿಂದ ಉಡಿಯನ್ನು ತುಂಬುವರು. ಇಂದಿಗೂ ಈ ಉಡಿ ತುಂಬುವದು ನಮ್ಮಲ್ಲಿ ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ.

**ನಾಮಕರಣ–** ರಾಮನ ಹೆಸರಿಡುವ ಸಂದರ್ಭದಲ್ಲಿ ಜೀವಮ್ಮ 'ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ'ದಲ್ಲಿ ಜೋಗುಳ ಸನ್ನಿವೇಶವನ್ನು ಅತಿ ಹೃದ್ಯವಾಗಿಸಿದ್ದಾಳೆ.

"ಊರಿನ ಸುವಾಸಿನಿಯರೆಲ್ಲರ ಕರೆಸುತ
ಭಾರಿ ಚಿನ್ನ ವಜ್ರದ ತೊಟ್ಟಿಲ ತರಿಸಿ
ನಾರಿಯರೆಲ್ಲ ಅಲಂಕರಿಸಿದರು
ನಾರಾಯಣನ ತೊಟ್ಟಿಲುತ್ಸವವೆನುತ" [೭]

ಇಡೀ ಅಯೋಧ್ಯೆಯ ಸುಮಂಗಲೆಯರೆಲ್ಲರೂ ಸೇರಿ ಚಿನ್ನ ವಜ್ರದಿಂದ ಕಂಗೊಳಿಸುತ್ತಿರುವ ತೊಟ್ಟಿಲನ್ನು ತಂದು, ಬಗೆ ಬಗೆ ಅಲಂಕಾರಗಳಿಂದ ಶೃಂಗರಿಸಿದರು. ಇದೇ ರೀತಿಯ ಚಿತ್ರಣವನ್ನು ಜಾನಪದದಲ್ಲಿ

ಬಂಗಾರದ ತೊಟ್ಟಿಲ ಬೆಳ್ಳಿಯ ಹಿಡಿಹಗ್ಗ
ಶೃಂಗಾರದ ಸಿರಿ ಕೃಷ್ಣನ ಚಂದಾಗಿ
ತೂಗಿರೇ ಜೋ ಜೋ

ಗರತಿಯರು ಹೀಗೆ ನಿರೂಪಿಸಿದ್ದಾರೆ. ಇದನ್ನು ನೋಡಿದರೆ ಜೀವೂಬಾಯಿಯು ಜನಪದ ತ್ರಿಪದಿಗಳ ಪ್ರಭಾವಕ್ಕೆ ಒಳಗಾಗಿದ್ದಳು ಎಂಬುದು ತಿಳಿದುಬರುತ್ತದೆ.

"ಸೀತಾದೇವಿ ಕೈ ಪಿಡಿದಗೆ ಜೋ ಜೋ
ಧೂರ್ತ ರಾವಣನ ಕೊಂದಂಗೆ ಜೋ ಜೋ
ಆರ್ತ ವಿಭೀಷಣಗೊಲಿದಗೆ ಜೋ ಜೋ
ಮಾತರಿಶ್ವನ ಒಡೆಯಗೆ ಜೋ ಜೋ" [೮]

ಹೀಗೆ ಮಗನನ್ನು ಕೊಂಡಾಡಿ ಕೌಶಲ್ಯ ಹಾಗೂ ಉಳಿದ ಸುಮಂಗಲೆಯರೆಲ್ಲರೂ ಜೋಗುಳವನ್ನು ಹಾಡುವ ಸನ್ನಿವೇಷ ನಮ್ಮ ಮನೆಯಲ್ಲಿ ನಡೆಯುವ ನಾಮಕರಣ ಮಹೋತ್ಸವವನ್ನು ಹೋಲುತ್ತದೆ. ಸ್ವತ: ಜೀವಮ್ಮ ಈ ಹಾಡುಗಳನ್ನು ಬೇರೆ ಬೇರೆ ಮಂಗಲ ಕಾರ್ಯಗಳಲ್ಲಿ ಹಾಡುತ್ತಿದ್ದಳು. ಇಂಥ ರಚನೆಗಳಿಗೆ ಅವಳು ಬೆಳೆದ ಗ್ರಾಮೀಣ ಪರಿಸರವೇ ಕಾರಣ.

ಹೀಗೆಯೆ ವಧುವರರನ್ನು ಹಸೆಗೆ ಕರೆಯುವ ಹಾಡುಗಳು, ಬಾಗಿಲು ತೆರೆಯುವ ಹಾಡುಗಳು, ಸೋಬಾನದ ಹಾಡುಗಳು, ಮಂಗಲ ಗೀತೆಗಳು ಮತ್ತು ಪೂಜಾ ಹಾಡುಗಳ ಮೂಲಕ ಜೀವಮ್ಮ ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಸಂಪ್ರದಾಯಗಳನ್ನು ಜೀವಂತಗೋಳಿಸಿದ್ದು ತಿಳಿದುಬರುತ್ತದೆ.

**೭.೪. ನದಿ ಪುಣ್ಯಕ್ಷೇತ್ರಗಳು–**

ನದಿಗಳು ಮತ್ತು ಪುಣ್ಯಕ್ಷೇತ್ರಗಳು ಸಂಸ್ಕೃತಿಯ ಪರಮ ಸ್ಥಾನಗಳು ಅಂತೆಯೇ ಜೀವಮ್ಮ ನದಿಗಳನ್ನು ಮತ್ತು ಪುಣ್ಯ ಕ್ಷೇತ್ರಗಳನ್ನು ಪ್ರಸ್ತಾಪಿಸಿರುವರು.

**ನದಿಗಳು–** 'ನದಿಸ್ತೋತ್ರ'ದಲ್ಲಿ ಹೀಗೆ ನದಿಗಳನ್ನು ಹೆಸರಿಸಿರುವಳು

"ಕೃಷ್ಣ ಗೋದಾವರೀ ನಂದಿನೀ, ನಳಿನೀ, ಹೇಮಾವತಿ
ಹರಿದ್ವತೀ ಕಾವೇರಿ, ಕಪಿಲಾ ಸಿಂಧು ಸರಯು
ನೇತ್ರಾವತಿ ಕುಮುದ್ವತಿ ಭಾಗೀರಥೀ ಭೋಗವತಿ
ಜಾಹ್ನವಿ ಜಯಮಂಗಲಿ ತ್ರಿಜಗತ್ಪಾವನೀ ವಿಷ್ಣು
ಪಾದೋದ್ಭವೆ ದೇವಿ ಕೃಷ್ಣವೇಣಿ ಆಗನಾಶಿನೀ
ಗಂಗಾಯಮುನಾ ತ್ರಿವೇಣೀದಕ್ಷಿಣ ಪಿನಾಕಿನೀ" [೯]

ಹೇಮಾವತಿ, ಸುರಾಂಗಣೆ, ಸರಸ್ವತಿ, ಶಾಲ್ಮಲಿ, ಶರಾವತಿ, ವಿಷ್ಣು ತೀರ್ಥ, ವರಹ ಪುಷ್ಕರಣಿ, ಮಧ್ವ ಸರೋವರ, ಮಂದಾಕಿನಿ, ಭೋಗವತಿ, ಭೀಮರಥಿ, ಭಾಗೀರಥಿ, ಬ್ರಹ್ಮಪುತ್ರ, ಪಾಂಡುತೀರ್ಥ, ನೇತ್ರಾವತಿ, ನಾರಾಯಣ ತೀರ್ಥ, ಧವಳಗಂಗಾ, ತುಂಗಭದ್ರಾ, ಚಕ್ರತೀರ್ಥ, ಚಂದ್ರಭಾಗ, ಗೋದಾವರಿ, ಕಾಳಿಮಡು, ಕಾವೇರಿ, ಕಪಿಲತೀರ್ಥ, ಅರ್ಕಾವತಿ, ಅಘನಾಶಿನಿ ಮುಂತಾದ ನದಿಗಳು ಉಲ್ಲೇಖಿತಗೊಂಡಿವೆ. ಇಲ್ಲಿಯ ಪ್ರತಿಯೊಂದು ನದಿಯು ಒಂದೊಂದು ಸಾಂಸ್ಕೃತಿಕ ಪರಂಪರೆ ಹೊಂದಿವೆ.

ಕನಕಗಿರಿ (ಮೇರುಪರ್ವತ), ಮೂಡಲಗಿರಿ (ತಿರುಪತಿ), ಗೋವರ್ಧನಗಿರಿ (ಕೃಷ್ಣ ಬೆರಳಿಂದ ಎತ್ತಿದ್ದು), ವೆಂಕಟಗಿರಿ(ತಿರುಪತಿ), ಶೇಷಪತಿ (ತಿರುಪತಿ), ಮಂದಾರ ಪರ್ವತ (ಸಮುದ್ರ ಮಂಥನಕ್ಕೆ ಕಡಗೋಲಾಗಿ ಬಳಸಿದ್ದು), ಇವೆಲ್ಲವೂ ಶ್ರೀಹರಿಯ ನೆಲೆಗಳು. 'ಕೈಲಾಸ' ಶಿವನ ನೆಲೆ. ಹರಿಹರರಲ್ಲಿ ಭಿನ್ನತೆ ಮಾಡದೆ ಜೀವಮ್ಮ ಸಾಮ್ಯತೆ ಸಾಧಿಸಿರುವಳು. ಕರ್ನಾಟಕ ಮತ್ತು ಹೊರರಾಜ್ಯಗಳ ಪುಣ್ಯಕ್ಷೇತ್ರಗಳನ್ನು ಪರಿಚಯಿಸಿರುವಳು. ಉಡುಪಿ(ಶ್ರೀಕೃಷ್ಣ), ಕಂಚಿ (ಕಾಮಾಕ್ಷಿ), ಕನಕಗಿರಿ (ತಿಮ್ಮಪ್ಪ), ಕೊಲ್ಲಾಪುರ(ಲಕ್ಷ್ಮಿ), ಗೋಕುಲ(ಕೃಷ್ಣ), ಗೋವರ್ಧನ (ಕೃಷ್ಣ), ದಾಮೋದರ(ಕೃಷ್ಣ), ದ್ವಾರಕಾ (ಕೃಷ್ಣ), ಮಂತ್ರಾಲಯ(ರಾಘವೇಂದ್ರ), ಲಂಕೆ(ರಾಮ), ಸಾಲಿಗ್ರಾಮ(ಕೃಷ್ಣ) ಹಂಪಿ (ವಿಜಯ ವಿಠ್ಠಲ), ಹೃಷಿಕೇಶಿ (ರಾಮ), ಅಯೋಧ್ಯೆ (ರಾಮ), ಪಂಢರಪುರ (ವಿಠ್ಠಲ) ಇನ್ನೂ ಹಲವಾರು ಪುಣ್ಯ ಕ್ಷೇತ್ರಗಳನ್ನು ಹೆಸರಿಸಿರುವಳು. ಇವುಗಳಲ್ಲಿ ತಿರುಪತಿ, ಉಡುಪಿ ಮತ್ತು ಪಂಡರಪುರ ಇವು ಹರಿದಾಸರ ಪ್ರಮುಖ ನೆಲೆಗಳು.

**೭.೫. ಇತರೆ ಸಾಂಸ್ಕೃತಿಕ ಅಂಶಗಳು**

ಜೀವಮ್ಮ ನಿರೂಪಿಸಿರುವ ಇನ್ನೂ ಕೆಲವು ಪೂರಕ ಸಾಂಸ್ಕೃತಿಕ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಜಾಜಿ, ಸಂಪಿಗೆ, ಸೂಜಿಮಲ್ಲಿಗೆ, ಬಿಳಿಯಮಲ್ಲಿಗೆ, ಕೇತಕಿ, ಸುರೆಹೊನ್ನೆ, ನಾಗಸಂಪಿಗೆ ಮುಂತಾದ ಪುಷ್ಪಗಳನ್ನು ಶ್ರೀಹರಿ ಮತ್ತು ಲಕ್ಷ್ಮಿಗೆ ಅರ್ಪಿಸಿ ಧನ್ಯತೆ ಹೊಂದಿರುವಳು.

ಉತ್ತತ್ತಿ, ನಿಂಬೆ, ನೇರಳೆ, ಜಂಬು, ದ್ರಾಕ್ಷಿ, ಕದಳಿ, ದಾಳಿಂಬೆ, ತೆಂಗು, ಮಾದಳ, ಮಾವು, ಪನ್ನೇರಲ, ಹುಣಸಿ, ಚಕ್ಕೋತ, ಅನಾನಸು, ಹಲಸು, ಕಿತ್ತಲೆ, ಸೀತಾಫಲ, ಅಂಜೂರ, ಮೋಸಂಬೆ, ಸೀಬೆ, ನೇರಳೆ, ಕರಬೂಜ, ರಾಮನಾಮ ಫಲಗಳನ್ನು ಹೆಸರಿಸಿ ಇವು ಎಲ್ಲಿಂದ ಬಂದವು ಎಂಬುದನ್ನು ತಿಳಿಸಿರುವಳು. ಹುಣಸೆ ಹಣ್ಣಿಲ್ಲದೆ ಭಾಂಡಶುದ್ದಿಗಳಿಲ್ಲ. ಹರಿಯ ಅಪ್ಪಣೆಯಂತೆ ಹುಣಸೆ ಮರ ಹುಟ್ಟಿತೆಂದು ತಿಳಿಸುತ್ತಾ

'ಆ ಹಣ್ಣು ಈ ಹಣ್ಣು ನೆನಸಿ ಫಲವೇನು
ಈ ಹುಣಸೇ ಹಣ್ಣಿಗೆ ಸಮಬಾಹೋದೇನ' [೧೦]

ಎಂದು ಕೇಳುವ ಮೂಲಕ ಎಲ್ಲ ಹಣ್ಣುಗಳಲ್ಲಿ ಹುಣಸೆ ಹಣ್ಣು ಶ್ರೇಷ್ಠ, ಅದಕ್ಕೆ ಸರಿಸಾಟಿಯಾಗಿ ಯಾವ ಹಣ್ಣೂ ನಿಲ್ಲಲಾರದು ಎಂದಿದ್ದಾಳೆ. ಕನಕದಾಸರಿಗೆ ರಾಗಿ ಶ್ರೇಷ್ಠವಾದಂತೆ, ಜೀವಮ್ಮಳಿಗೆ ಹುಣಸೆ ಶ್ರೇಷ್ಠ. ಎರಡೂ ಜನಸಾಮಾನ್ಯರಿಗೆ, ಬಡವರಿಗೆ ನಿಲುಕುವ ವಸ್ತುಗಳು.

ಜೀವಮ್ಮಳಿಗೆ 'ನೀರು' ಕೇವಲ ನೀರಲ್ಲ. ಮನುಷ್ಯನಿಗೆ ನೀರು ಅತ್ಯಮೂಲ್ಯವಾದ ವಸ್ತು. ಶ್ರೀಹರಿಯ ಹಲವು ಅವತಾರಗಳಿಗೆ ನೀರೇ ಮೂಲ.

'ನೀರಿನಿಂದಲೆ ಸರ್ವಫಲ ಬಾಹೋದು
ನೀರಜಾಕ್ಷನ ಸೇವೆ ಮಾಳ್ಪ ಸುಜನರಿಗೆ'[೧೧]

ಎಂದು ಹೇಳುತ್ತಾ ಮಾನವನ ಎಲ್ಲ ದಿನ ನಿತ್ಯದ ಚಟುವಟಿಕೆಗಳಿಗೆ ನೀರು ಅವಶ್ಯ. ಅದು ಜಡ ವಸ್ತವಲ್ಲ ಸಕಲ ಜೀವಿಗಳಿಗೆ ಚಲನ ಶೀಲತೆಯನ್ನು ನೀಡುವ ಪ್ರಾಣಜಲ. ನೀರಜಾಕ್ಷನು ವಾಸವಾಗಿರುವ ಪುಣ್ಯ ಪಾವನ ಸ್ಥಳ.

ಹೀಗೆ ಜೀವೂಬಾಯಿಯು ನಮ್ಮ ಸಂಸ್ಕೃತಿಯ ಅಂಶಗಳಾದ ಉಡುಗೆ-ತೊಡುಗೆ, ಆಹಾರ ಪಾನೀಯಗಳು, ಮದುವೆ, ಉಡಿ ತುಂಬುವದು, ನಾಮಕರಣ, ಸೋಬಾನ, ನೀರು ತುಂಬುವುದು, ಹಸೆಗೆ ಕರೆಯುವ ಆಚರಣೆಗಳ ಮೂಲಕ ಜನರ ಜೀವನ ಕ್ರಮ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ತಿಳಿಸಿರುವಳು. ನದಿ-ಪುಣ್ಯ ಕ್ಷೇತ್ರಗಳು, ಹೂ ಹಣ್ಣು, ಇತರೆ ಅಂಶಗಳ ಮೂಲಕ ದೇಸೀಯ ಸಮೃದ್ಧ ಸಂಸ್ಕೃತಿಯನ್ನು ಎತ್ತಿ ಹಿಡಿದಿರುವುದು ತಿಳಿದು ಬರುತ್ತದೆ.

ಒಟ್ಟಿನಲ್ಲಿ ಜೀವೂಬಾಯಿಯು ತನ್ನ ಕೀರ್ತನೆಗಳಲ್ಲಿ ನೆಲದ ಸಂಸ್ಕೃತಿ ಮತ್ತು ಸಾರವನ್ನು ಅತ್ಯಂತ ಪರಿಣಾಮಕಾರಿಯಾಗಿ ಮಿಳಿತಗೊಳಿಸಿರುವದು ತಿಳಿಯುತ್ತದೆ. ಸಾಕಷ್ಟು ತಿಂಡಿ-ತಿನುಸುಗಳನ್ನು ಪ್ರಸ್ತಾಪಿಸುವ ಮೂಲಕ ದೇಶೀಯ ಆಹಾರ ಪದಾರ್ಥಗಳು ಮುಂದಿನ ತಲೆಮಾರಿನವರಿಗೆ ತಲುಪಿಸುವಲ್ಲಿ ಸಫಲತೆ ಸಾಧಿಸಿದ್ದಾಳೆ. ಹಲವು ಬಗೆಯ ಆಭರಣಗಳನ್ನು ಸಂದರ್ಭ ಸಿಕ್ಕಾಗೆಲ್ಲ ಅದರಲ್ಲಿಯೂ ಮೋಹಿನಿ, ಶ್ರೀಹರಿ, ಲಕ್ಷ್ಮಿ, ಬಾಲಗೋಪಾಲನ ಸೌಂದರ್ಯವನ್ನು ಬಣ್ಣಿಸುವಾಗ ಪ್ರಸ್ತಾಪಿಸಿರುವಳು. ಇವೆಲ್ಲವು ಜನಪದೀಯ ಆಭರಣಗಳು. ದೇವತೆಗಳ ಆಭರಣಗಳೂ ಪ್ರಸ್ತಾಪಗೊಂಡಿವೆ. ಚಿನ್ನ-ಬೆಳ್ಳಿಯ ಮತ್ತು ನವರತ್ನ ಖಚಿತವಾದ ಆಭರಣಗಳು ಇವಾಗಿವೆ.

ಮದುವೆ ನಾಮಕರಣ, ಉಡಿ ತುಂಬುವುದು ಮುಂತಾದ ಸಾಂಪ್ರದಾಯಕ ವಿಧಿ ವಿಧಾನಗಳನ್ನು ಬಹು ಪರಿಣಾಮಕಾರಿಯಾಗಿ ಬಿಂಬಿಸಿರುವಳು. ತೀರ್ಥ ಕ್ಷೇತ್ರ, ಪರ್ವತ, ನದಿ, ಹೂ ಹಣ್ಣುಗಳನ್ನು ಪರಿಚಯಿಸಿರುವಳು. ಈ ಮೂಲಕ ಜೀವೂಬಾಯಿಯು ಓರ್ವ ಸಮರ್ಥ ಸಾಂಸ್ಕೃತಿಕ ರಾಯಭಾರಿಯಾಗಿ ನಮ್ಮ ಕಣ್ಮುಂದೆ ನಿಲ್ಲುತ್ತಾಳೆ.

ಜೀವೂಬಾಯಿಯವರು ೧೧ನೇ ವಯಸ್ಸಿನಲ್ಲಿ ವಿಧವೆಯಾದಳು. ಬದುಕಿನಲ್ಲಿ ಬಂದ ತನ್ನ ಕಷ್ಟ-ದು:ಖ, ದುಗುಡ-ದುಮ್ಮಾನಗಳನ್ನು ಎದುರಿಸಲು ಅವಳಿಂದ ಅಂತರ್ಮುಖಿಯಾದ ಪ್ರತಿಭಟನೆ ನಡೆಯಿತು. ತನ್ನ ಬದುಕಿನ ಏಕಾಂಗಿತನವನ್ನು ಕಳೆದುಕೊಳ್ಳಲು, ಮರೆಯಲು ಮತ್ತು ಆಗಲೇ ವ್ಯಾಪಿಸಿಕೊಂಡಂತಹ ಸಮಾಜಸುಧಾರಕರಾದ ಬಾಲಗಂಗಾಧರ ತಿಲಕ, ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ ಮುಂತಾದವರ ವಿಚಾರ ಪ್ರಭಾವಲಯಕ್ಕೆ ಭಾರತವು ಒಳಗಾಗಿತ್ತು. ಅವು ಅಂದಿನ ಮಹಿಳಾ ಸ್ವಾತಂತ್ರ್ಯ ಚಳುವಳಿಯ ಕಾಲಘಟ್ಟದಲ್ಲಿ ಬದುಕಿದ ಜೀವಾಬಾಯಿಯವರ ಮೇಲೆ ಬೀರಿರಲು ಸಾಕು. ಈ ಚಳುವಳಿಯ ಪ್ರಭಾವ ಜೀವೂಬಾಯಿಯವರಿಗೆ ಮಾನಸಿಕ ಧೈರ್ಯವನ್ನು ತಂದಿರಬೇಕು. ತತ್ಪರಿಣಾಮವಾಗಿ ಅವಳು ತನ್ನ ವೈಧವ್ಯತೆಯ ಆಂತರಿಕ ಹಾಗೂ ಬಾಹ್ಯ ನೋವನ್ನು ಮರೆತು ಕೀರ್ತನೆಗಳ ರಚನೆಗಳಲ್ಲಿ ತೊಡಗಿದಳು.

## ಅಡಿ ಟಿಪ್ಪಣಿಗಳು

| | | |
|---|---|---|
| ೧. | ಕನ್ನಡ ನಿಘಂಟು ಸಂಪ ಡಾ.ಡಿ.ಎಲ್.ಎನ್. | ಪು. ೮೭೭ ಪ್ರ೧೯೭೦ |
| ೨. | ಸ.ದಾ.ಸಾ.ಸಂ.೧೮ ಭಾಗ ೨ ನಿ.ಜೀ.ಕೀ.ಲೀಲಾವತಿ ಎನ್. ರಾವ್ | ಪು. ೪೪೨ |
| ೩. | ಸಮುಚ್ಚಯ – ಶಾಂತಾದೇವಿ ಮಾಳವಾಡ | ಪು. ೨೮ |
| ೪. | ಸ.ದಾ.ಸಾ.ಸಂ.೧೮ ಭಾಗ ೨ ನಿ.ಜೀ.ಕೀ. ಲೀಲಾವತಿ ಎನ್. ರಾವ್ | ಪು. ೪೪೨ |
| ೫. | ಅದೇ | ಪು. ೧೪೪ ಕೀ. ೧೦೯ |
| ೬ | ಅದೇ | ಪು. ೧೫೪ ಕೀ. ೧೧೫ |
| ೭. | ಅದೇ | ಪು. ೨೫೭ |
| ೮. | ಅದೇ | ಪು. ೨೫೭ |
| ೯. | ಅದೇ | ಪು. ೨೦೦ ಕೀ.೭೨ |
| ೧೦. | ಅದೇ | ಪು. ೨೧೨ ಕೀ. ೧೬೫ |
| ೧೧. | ಅದೇ | ಪು. ೨೨೧ ಕೀ. ೧೬೮ |

## ಅಧ್ಯಾಯ ೮

# ಮಹಿಳಾ ಕೀರ್ತನಕಾರರಲ್ಲಿ ಜೀವೂಬಾಯಿಯ ಸ್ಥಾನ

## ಅಧ್ಯಾಯ ೮

# ಮಹಿಳಾ ಕೀರ್ತನಕಾರರಲ್ಲಿ ಜೀವೂಬಾಯಿಯ ಸ್ಥಾನ

ಭಾರತೀಯ ಪರಂಪರೆಯ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರು ವೇದಗಳ ಕಾಲದಿಂದಲೂ ಎರಡನೆಯ ದರ್ಜೆಯ ಪ್ರಜೆಯಾಗಿ ಬದುಕುತ್ತಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ. ಈ ಮಾತು ಸಾಹಿತ್ಯ ಕ್ಷೇತ್ರಕ್ಕೂ ಸಂಪೂರ್ಣ ಹೊರತಾಗಿಲ್ಲ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಮಗ್ರವಾಗಿ ಅವಲೋಕನ ಮಾಡಿದಾಗ ಮಹಿಳಾ ಸಾಹಿತಿಗಳ ಕೊರತೆ ಎದ್ದು ಕಾಣುತ್ತದೆ. ಕನ್ನಡ ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ, ಅಕ್ಕಮಹಾದೇವಿಯೇ ಮೊದಲ ಕವಯಿತ್ರಿ. ಅಲ್ಲಿಯವರೆಗೆ ಕೇವಲ ಪುರುಷರಿಗೆ ಸೀಮಿತವಾಗಿದ್ದ ಸಾಹಿತ್ಯವು ಮೊದಲಬಾರಿಗೆ ಮಹಿಳೆಯರನ್ನು ಅಪ್ಪಿಕೊಂಡಿತು; ಎತ್ತಿಕೊಂಡಿತು. ಈ ಪ್ರಭಾವಕ್ಕೊಳಗಾಗಿ ಹಲವಾರು ಶಿವಶರಣೆಯರು ವಚನ ರಚನೆಯಲ್ಲಿ ತೊಡಗಿಕೊಂಡರು. ಆದರೆ ಈ ಹಿಂದೆ ರಚಿತವಾದ ಬಹು ವೈವಿದ್ಯಮಯವಾದ ಜಾನಪದ ಸಾಹಿತ್ಯವು ಬಹುಪಾಲು ಮಹಿಳೆಯರಿಂದ ರಚಿತವಾದ ಸಾಹಿತ್ಯವೇ ಆಗಿದೆ. ಈ ಜನಪದ ಸಾಹಿತ್ಯದ ಹುಲುಸಿಗೆ ಕಾರಣರಾದ ಮಹಿಳೆಯರು ಎಲ್ಲಿಯೂ ತಮ್ಮ ಹೆಸರನ್ನು ಹೇಳಿಕೊಂಡಿಲ್ಲ; ಹೆಸರಿನ ಮೋಹವನ್ನು ಬಯಸದೇ ಇಂದಿಗೂ ಅಜ್ಞಾತರಾಗಿಯೇ ಉಳಿದುಕೊಂಡಿದ್ದಾರೆ. ಇದರಿಂದ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಕಂಡುಕೊಳ್ಳುವಲ್ಲಿ, ಕಟ್ಟಿಕೊಡುವಲ್ಲಿ ದೊಡ್ಡ ಕೊರತೆಯೇ ಆಗಿದೆ. ದೇಶದ ಇತಿಹಾಸವನ್ನು ಗಮನಿಸಿದಾಗ ಹಲವಾರು ಮಹಿಳಾಮಣಿಗಳು ಧೈರ್ಯವಂತಿಕೆಯಿಂದ ರಾಜ್ಯಭಾರ ನಿಭಾಯಿಸಿ ವೀರತನವನ್ನು ಮೆರೆದಿದ್ದಾರೆ. ಮಹಾನ್ ಕವಿಗಳ ತಾಯಿಯಾಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆಯನ್ನು ನೀಡಿದ್ದಾರೆ. ನೇರವಾಗಿ ಸಾಹಿತ್ಯ ರಚನೆ ಮಾಡದಿದ್ದರೂ ಪುರುಷರ ಸಾಹಿತ್ಯ ಕೃಷಿಗೆ ಬೆನ್ನೆಲುಬಾಗಿ ನಿಂತಿದ್ದಾಳೆಂಬುದು ಇಲ್ಲಿ ಸ್ಮರಣಾರ್ಹ ಸಂಗತಿಯಾಗಿದೆ.

ವಚನ ಸಾಹಿತ್ಯ ಸಂದರ್ಭದಲ್ಲಿ ಒಮ್ಮೆಲೆ ಸಾಹಿತ್ಯ ರಚನೆಯಲ್ಲಿ ಕಾಣಿಸಿಕೊಳ್ಳುವ ಸ್ತ್ರೀಯರ ಸಂಖ್ಯೆ ಮುಂದೆ ದಾಸಸಾಹಿತ್ಯ ಸಂದರ್ಭಕ್ಕೆ ಬರುವಾಗ ಪ್ರಮಾಣದಲ್ಲಿ ಇಳಿಮುಖವಾಗುತ್ತದೆ. ಅಲ್ಲದೆ ವಚನ ಸಾಹಿತ್ಯದ ಆರಂಭದಲ್ಲಿಯೇ ಮಹಿಳೆಯರು ಕಾಣುವರು. ಆದರೆ ದಾಸಸಾಹಿತ್ಯವು ಆರಂಭಗೊಂಡು ಹಲವು ಶತಮಾನಗಳು ಗತಿಸಿದ ಮೇಲೆ ಅಂದರೆ ೧೮ನೇ ಶತಮಾನದಲ್ಲಿ ಗಲಗಲಿ ಅವ್ವನವರು ಮಹಿಳಾ ಕೀರ್ತನಕಾರರಾಗಿ ಕಾಣಸಿಗುತ್ತಾರೆ.

ಯಾವುದೇ ಕವಿ ಅಥವಾ ಸಾಹಿತಿಯು ತನಗೂ ಪೂರ್ವದ ಕವಿ-ಸಾಹಿತಿಗಳ ಪ್ರಭಾವಕ್ಕೊಳಗಾಗುವುದು ಸಹಜ. ಅಕ್ಕಮಹಾದೇವಿಯ ನಂತರದ ಮಹಿಳಾ ಸಾಹಿತಿಗಳಿಗೆ ಅಕ್ಕನ ಪ್ರಭಾವ ಹೆಚ್ಚಾಗಿ ಬೀರಿದ್ದು ಕಂಡುಬರುತ್ತದೆ. ಅಂತೆಯೇ ನಂತರ ದಾಸ ಸಾಹಿತ್ಯದಲ್ಲಿ ಬಂದವಳು ಗಲಗಲಿಅವ್ವ ಕೀರ್ತನಕಾರ್ತಿಯರು ಭಾಗಶ: ಅವಳ ಪ್ರಭಾವಕ್ಕೊಳಗಾಗಿರುವುದು ಕಾಣುತ್ತದೆ. ಅದೇರೀತಿ ಜೀವೂಬಾಯಿಯು ತನಗಿಂತ ಹಿರಿಯ ಕೀರ್ತನಕಾರ್ತಿಯರ ಪ್ರಭಾವಕ್ಕೊಳಗಾಗುವುದರ ಜೊತೆಗೆ ತನ್ನ ಸ್ವಂತಿಕೆಯನ್ನು ಕೀರ್ತನೆಗಳಲ್ಲಿ ತೋರಿದ್ದಾಳೆ. ಅಂತಹ ಪ್ರಭಾವ ಮತ್ತು ಸ್ವಂತಿಕೆಯ ಅಂಶಗಳನ್ನು ಆಕೆಯ ರಚನೆಗಳ ಹಿನ್ನೆಲೆಯಲ್ಲಿ ಇಲ್ಲಿ ವಿವೇಚಿಸಲಾಗಿದೆ.

'ರಮಿ ಅರಸು' ಅಂಕಿತದಿಂದ ಕೀರ್ತನ ರಚಿಸಿದ ಗಲಗಲಿ ಅವ್ವನವರು ಭಕ್ತಿ ಪ್ರಧಾನವಾದ ಮುಯ್ಯದ ಹಾಡುಗಳನ್ನು, ಬೀಗರ ಹಾಡುಗಳನ್ನು ರಚಿಸಿದ್ದರೂ ಮುಯ್ಯದ ಹಾಡುಗಳು ಮಾತ್ರ ಲಭ್ಯವಿವೆ. ಅವಳ ಮುಯ್ಯದ ಹಾಡುಗಳು ಪೌರಾಣಿಕ ವಿಷಯವಸ್ತುಗಳ ಆಧಾರದಿಂದ ರಚಿತವಾಗಿರುವುದು ಕಂಡು ಬರುತ್ತೆದೆ.

"ಕೈವಲ್ಯಪತಿಯ ದಯದಿಂದ ಸಲುಹಿದ
ವೈಭವದೊಳಗೆ ಮರೆತಾನ
ವೈಭವದೊಳಗೆ ಮರೆತಾನ ಮುಯ್ಯವ ಒಯ್ದರೆ
ನೋಡಿ ಬರಬೇಕು.

ಕೃಷ್ಣರಾಯರ ಮನೆಯ ಅಷ್ಟೈಶ್ವರ್ಯವ
ಎಷ್ಟು ವರ್ಣಿಸಲ್ವಶವಲ್ಲ
ಎಷ್ಟು ವರ್ಣಿಸಲ್ವಶವಲ್ಲ ಮುಯ್ಯವ
ಒಯ್ದರ ನೋಡಿಬರಬೇಕು"[೧]

ಇಂಥ ಹಲವಾರು ರಚನೆಗಳು ಗಲಗಲಿ ಅವ್ವನವರ ಕೀರ್ತನೆಗಳಲ್ಲಿ ಕಂಡುಬರುತ್ತವೆ. ಜೀವೂಬಾಯಿಯ ರಚನೆಗಳಲ್ಲಿ ಮುಯ್ಯದ ಹಾಡುಗಳು ಕಾಣಸಿಗುವುದಿಲ್ಲ.

ಹಸೆಗೆ ಕರೆಯುವುದು ಒಂದು ವಿವಾಹದ ಸಂದರ್ಭದ ವಿಧಾನ. ಇಂಥ ಸಂದರ್ಭದಲ್ಲಿ ಸಂಪ್ರದಾಯದ ಹಾಡುಗಳನ್ನು ಹಾಡುವ ಕ್ರಮ ಇಂದಿಗೂ ಗ್ರಾಮೀಣ ಪರಿಸರದಲ್ಲಿ ಕಂಡುಬರುತ್ತದೆ. ಗ್ರಾಮೀಣ ಹಿನ್ನೆಲೆಯಿಂದ ಬಂದ ಗಲಗಲಿ ಅವ್ವನವರು ಇಂಥ ಹಾಡುಗಳನ್ನು ರಚಿಸಿದ್ದಾರೆ.

"ಬರಿಯ ಮಾಣಿಕ್ಯದ ಹಸೆಗೆ ಕಿರಿಯ ಚೆನ್ನಿಗ ಬಾರೊ
ಸರಿಯವರು ನೋಡಿ ನಗುವಂತೆ
ಸರಿಯವರು ನೋಡಿ ನಗುವಂತೆ ಎನುತಲೆ
ದೊರೆಗಳು ನುಡಿದು ಕರೆದರು

ಮುತ್ತು ಮಾಣಿಕ್ಯದ ಹಸೆಗೆ ಭಕ್ತವತ್ಸಲ ಬಾರೋ
ಹತ್ತು ದಿಕ್ಕುಗಳ ಬೆಳಗುತ
ಹತ್ತು ದಿಕ್ಕುಗಳ ಬೆಳಗುತ
ಮಿದತ್ರೆಸುಭದ್ರಾ ಕರೆದಳು"[೨]

ಇಲ್ಲಿ ಕೃಷ್ಣನನ್ನು ತಂಗಿಯಾದ ಸುಭದ್ರೆಯು ಹಸೆಗೆ ಕರೆಯುತಿಹಳು. ಹಸೆಯ ವರ್ಣನೆಯು ಇಲ್ಲಿ ಮನತುಂಬಿ ಮೂಡಿಬಂದಿದೆ. ಇದೇ ರೀತಿಯಾದ ರಚನೆಗಳನ್ನು ಜೀವೂಬಾಯಿಯೂ ಕೂಡ ರಚಿಸಿರುವುದು ಕಂಡು ಬರುವುದು.

"ಮುತ್ತಿನ ಮಂಟಪದಿ
ರತ್ನಪೀಠವನಿರಿಸಿ
ಅರ್ಥಿಲಿ ಬಾ ಹಸೆಗೆನ್ನುತ ಕರೆವರು
ಮುತ್ತೈದೆಯರುಗಳು

ಕಂಬು ಕಂದರೆಯೆ ಬಾ
ಅಂಬುಜ ಮುಖಿಯೇ ಬಾ
ಸಂಭ್ರಮದಲಿ ಬಾ ಹಸೆಗೆನ್ನುತ ಕರೆದರು
ಅಂಬುಜ ಮುಖಿಯರು"[೩]

ಇಂಥ ರಚನೆಗಳ ಮೇಲೆ ಜೀವಮ್ಮಳಿಗೆ ಗಲಗಲಿ ಅವ್ವನ ಪ್ರಭಾವ ಆಗಿರುವುದು ತಿಳಿದು ಬರುತ್ತದೆ. ಅಲ್ಲಿ ತಂಗಿಯಾದ ಸುಭದ್ರೆಯು ಕೃಷ್ಣನನ್ನು ಹಸೆಗೆ ಕರೆದರೆ, ಇಲ್ಲಿ ಶ್ರೀಲಕ್ಷ್ಮಿಯನ್ನು ಮುತ್ತೈದೆಯರು ಹಸೆಗೆ ಪ್ರೀತಿಯಿಂದ ಕರೆಯುವರು.

ಭಾರತಿದೇವಿಯನ್ನು ಅವ್ವನವರು ಸ್ತುತಿಸಿರುವುದು ತಿಳಿಯುತ್ತದೆ. ಈ ಪ್ರಭಾವದಿಂದ ಇನ್ನುಳಿದ ಕೀರ್ತನಕಾರ್ತಿಯರು ಭಾರತಿದೇವಿಯನ್ನು ಸ್ತುತಿಸಿದ್ದಾರೆ. ಅಂತೆಯೇ ಜೀವಮ್ಮಳು ಸ್ತುತಿಗೈದಿದ್ದಾಳೆ.

"ನೀನೆ ಮುಂದಣವಾಣಿ ಪ್ರಾಣದೇವರ ರಾಣಿ
ಪ್ರವೀಣೆ ಸುಪ್ರಾಣಿ ಕಲ್ಯಾಣಿ ನಿನ್ನನು ಗಾಣೆ"[೪]
ಬಾರಿ ಬಾರಿ ನಿನ್ನ ಸ್ತುತಿಪೆ
ಮಾರುತನರ್ಧಾಂಗಿಯೇ
ಸಾರಿಸಾರಿ ಶ್ರೀರಮಣನ
ಸಾರಕೃಪೆಯ ಕರುಣಿಸು"[೫]

ಗಲಗಲಿ ಅವ್ವ ಭಾರತಿದೇವಿಯಲ್ಲಿ ತನ್ನನ್ನು ಗೆಲಿಸುವಂತೆ ಪ್ರಾರ್ಥಿಸಿದರೆ; ಜೀವಮ್ಮ ಶ್ರೀರಮಣನ ಕೃಪೆಯನ್ನು ಕರುಣಿಸುವಂತೆ ಪ್ರಾರ್ಥಿಸಿರುವಳು. ಜೋಗುಳದ ಹಾಡುಗಳನ್ನು ಇಬ್ಬರೂ ರಚಿಸಿದ್ದಾರೆ. ಆದರೆ ಗಲಗಲಿ ಅವ್ವನವರು ದೀರ್ಘಕೀರ್ತನೆಗಳನ್ನು, ವಿಶೇಷ ಕೀರ್ತನೆಗಳನ್ನು, ವಿಶಿಷ್ಟ ದಿನಗಳಲ್ಲಿ ಕೀರ್ತನೆಗಳನ್ನು ರಚಿಸಿರುವದು ಎಲ್ಲಿಯೂ ತಿಳಿದುಬರುವುದಿಲ್ಲ. ಕೇವಲ ಸಂಪ್ರದಾಯಪ್ರಧಾನ ಹಾಡುಗಳನ್ನು ಮಾತ್ರ ರಚಿಸಿದ್ದಾಳೆ. ಜೀವಮ್ಮಳು ಗಲಗಲಿ ಅವ್ವನವರಿಗಿಂತ ವಿವಿಧ ವಸ್ತು ವಿಷಯಗಳನ್ನು ತನ್ನ ಕೀರ್ತನೆಗಳಿಗೆ ಬಳಸಿಕೊಂಡಿದ್ದಾಳೆ.

'ಹೆಳವನಕಟ್ಟೆರಂಗ' ಎಂಬ ಅಂಕಿತದಿಂದ ಕೀರ್ತನಸಾಹಿತ್ಯದ ಮಹಿಳಾ ಪರಂಪರೆಯಲ್ಲಿ ಅಗ್ರ ಪಂಕ್ತಿಯಲ್ಲಿ ನಿಲ್ಲುವವಳು ಹೆಳವನಕಟ್ಟೆಯ ಗಿರಿಯಮ್ಮ. ದೇವ-ದೇವತಾ ಸ್ತುತಿ, ಆತ್ಮನಿವೇದನೆ, ಲೋಕನೀತಿ, ದಶಾವತಾರ ವಿವರಣೆ, ಶ್ರೀಕೃಷ್ಣನ ಬಾಲಲೀಲೆಗಳು ಅವಳ ರಚನೆಯಲ್ಲಿ ಕಂಡು ಬರುತ್ತವೆ. ಎಲ್ಲ ಹರಿದಾಸರು ಪ್ರಾಣದೇವರ ಅವತಾರವೆಂದು ನಂಬಿರುವ ಹನುಮ, ಭೀಮ, ಮದ್ವರ ಸ್ತುತಿ ಮಾಡಿದ್ದಾರೆ. ಗಿರಿಯಮ್ಮ ಮಾತ್ರ ಹನುಮಂತನನ್ನು ಮಾತ್ರ ಸ್ತುತಿಸಿರುವಳು.

> 'ಈತ ರಾಮನ ಬಂಟನು
> ಈತ ಕೋಟಿಲಿಂಗವನ್ನು ರೋಮರೋಮದಿ ಧರಿಸಿದವನು
> ಈತ ಲೋಕ ಪ್ರಖ್ಯಾತನು ಭೀಮರಾಯನು
>
> ಪುಟ್ಟಿದಾಗಲೆ ಗಗನ ಮಂಡಲವನ್ನು ಮುಟ್ಟಿ ರವಿಯನು ತುಡುಕಿ
> ಇಟ್ಟ ಕೈಪ ಕುಂಡಲವನ್ನು ತೊಟ್ಟು ಮೆರೆವಂಥ ದಿಟ್ಟ
> ಹನುಮರಾಯನು'[೬]

ಜೀವಮ್ಮಳು ಇವಳಿಗಿಂತ ಭಿನ್ನವಾಗಿ ಹನುಮ ಭೀಮ ಮದ್ವರನ್ನು ಕುರಿತು ಹಾಡಿ ಹೊಗಳಿದ್ದಾಳೆ. ಈ ಮೂವರು ಪ್ರಾಣದೇವರ ಅವತಾರವೆಂದು ನಂಬಿರುವುದು ಅವಳ ರಚನೆಯಲ್ಲಿ ಕಾಣುವುದು.

> "ತ್ರೇತೆಯಲಿ ರಘುಪತಿಯ ಸೇವೆ ಸಲಿಸಿದವನೆ
> ಸೀತೆಯನು ಕಂಡು ರಕ್ಕಸರ ಗೆಲಿದವನೆ
> ದೂರ್ತರಾವಣಗೆ ನೀತಿಗಳ ಕಲಿಸಿದವನೆ
> ಭೀತಿಯಿಲ್ಲದೆ ಲಂಕಾಪುರವ ದಹಿಸಿದವನೆ
>
> ದ್ವಾಪರದಿ ಶ್ರೀಕೃಷ್ಣನನು ಪೂಜಿಸಿದವನೆ
> ಪಾಪಿ ದುರ್ಯೋಧನಾದಿಗಳ ಗೆಲಿದವನೆ
> ಕೋಪದಲಿ ಜರಾಸಂದನನು ಸೀಳಿದವನೆ
> ಶ್ರೀಪತಿಯ ಸೇವೆಯಲಿ ನಿಸ್ಸೀಮನೆನಿಸಿದವನೆ

ಮಧ್ವಮತವನುದ್ಧರಿಸಿ ಮೆರೆದವನೆ
ಶ್ರದ್ಧೆಯಿಂದಲಿ ಹರಿಯ ಭಜಿಪ ಗುರುವರನೆ
ಮುದ್ದುಕಮಲನಾಭ ವಿಠ್ಠಲನೊಲಿಸಿದವನೆ
ಶುದ್ಧಮೂರುತಿ ಉಡುಪಿ ಕೃಷ್ಣನರ್ಜಿಸಿದವನೆ"[7]

ಜಗನ್ನಾಥನನ್ನು, 'ನಾರುವ ಮೈಯ್ಯವನ್ನು, ಕೋರೆಯನ್ನು ಮಸೆಯುವನನ್ನು, ಬಡ ಬ್ರಾಹ್ಮಣನನ್ನು' ಏಕೆ ಮದುವೆಯಾದೆ ಎಂದು ಕೇಳುತ್ತಾ ಶ್ರೀಹರಿಯ ದಶಾವತಾರಗಳು ಮತ್ತು ಪ್ರತಿ ಅವತಾರದ ದೈಹಿಕ ರಚನೆ, ಮಾಡಿದ ಕಾರ್ಯಗಳ ಮಹಿಮಾತಿಶಯಗಳನ್ನು ಕೊಂಡಾಡಿರುವಳು. ಅಂಥ ರಚನೆ ಹೀಗಿದೆ;

"ಇಂಥವಗ್ಹ್ಯಾಂಗ ಮನಸೋತೆ ಬಲು
ಪಂಥವಾಡಿದ ಜಗನ್ಮಾತೆ
ಆವಾಗ ನಾರುವ ಮೈಯ್ಯ ಬಟ್ಟೆ

ತೋರಿ ನಲಿವ ಕಾಲು ಕೈಯ್ಯ
ಕೋರೆಯ ಮಸೆಯುತ ಕೊಸರಿಕೊಂಡಸುರನ
ಕರುಳನು ಬಗೆದಂಥ ಅದ್ಭುತ ಮಹಿಮಗೆ

ಬಡಬ್ರಾಹ್ಮಣನಾಗಿ ತಿರಿದ ತನ್ನ
ಹಡೆದ ತಾಯಿಯ ಶಿರವರಿದ
ಮಡದಿಗಾಗಿ ದೊಡ್ಡಡವಿಯೊಳ್ಮನೆ ಕಟ್ಟಿ
ಬಿಡದೆ ಸ್ತ್ರೀಯರ ಗೋಕುಲದಲ್ಲಿ ಮೆರೆದ"[8]

ಈ ಕೀರ್ತನೆಯ ವಿಷಯವನ್ನೆ ಹೋಲುವಂತೆ ಜೀವಮ್ಮಳ ರಚನೆಗಳು ಕಂಡು ಬರುತ್ತವೆ. ಅಂದರೆ ಗಿರಿಯಮ್ಮಳ ಕೀರ್ತನೆಗಳ ಪ್ರಭಾವ ಜೀವಮ್ಮಳ ರಚನೆಗಳ ಮೇಲಾಗಿದೆ ಎಂಬುದನ್ನು ಈ ಮೂಲಕ ಗ್ರಹಿಸಬಹುದಾಗಿದೆ. ಗಿರಿಯಮ್ಮ ಜಗನ್ಮಾತೆಯನ್ನು ಕೇಳಿದರೆ ಜೀವಮ್ಮಳು ಲಕ್ಕುಮಿದೇವಿಯನ್ನು ಇಂಥವನಿಗೆ ಏಕೆ ಮೆಚ್ಚಿಕೊಂಡೆ ಎಂದು ಹೀಗೆ ಕೇಳುವಳು.

"ಮೆಚ್ಚಿದೆ ಯಾಕಮ್ಮ ಲಕ್ಕುಮಿದೇವಿ
ಸಚ್ಚಿದಾನಂದಾತ್ಮ ಹರಿಯೆಂದರಿಯದಲೆ

ನೀರೊಳು ಮುಳುಗಿ ಭಾರಮೊತ್ತು ಧರಣಿಯ
ಕೋರೆದಾಡಿಯಲ್ಲಿ ತಂದ ಕ್ರೂರ ರೂಪನಿಗೆ
ಮೂರಡಿ ಭೂಮಿಯ ಬೇಡಿ ಕ್ಷಿತಿಪರಕೊಂದು

ನಾರು ವಸ್ತುಗಳುಟ್ಟು ಸೀರೆ ಕದ್ದವನೆ

. . . . . . . . . . . . . . . . . . ."[೯]

ಖಂಡಕಾವ್ಯಗಳ ರಚನೆಯಲ್ಲಿ ಜೀವಮ್ಮಳು ಗಿರಿಯಮ್ಮನ ಪ್ರಭಾವಕ್ಕೊಳಗಾಗಿರುವುದು ತಿಳಿಯುತ್ತದೆ. ಗಿರಿಯಮ್ಮ 'ಸೀತಾಕಲ್ಯಾಣ' ಎಂಬ ಖಂಡಕಾವ್ಯವನ್ನು ಬರೆದರೆ; ಜೀವಮ್ಮ 'ಶ್ರೀರಾಮ ಜನನ ಮತ್ತು ಸೀತಾ ಕಲ್ಯಾಣ' ಎಂಬ ಖಂಡಕಾವ್ಯ ರಚಿಸಿರುವಳು. ಮಹಿಳಾ ಕೀರ್ತನಕಾರರಲ್ಲಿ ಅದ್ಭುತವಾದ ಖಂಡಕಾವ್ಯಗಳನ್ನು ಬರೆದ ಶ್ರೇಯಸ್ಸು ಗಿರಿಯಮ್ಮಳಿಗೆ ಸಲ್ಲುವುದು. ಅದೇ ದಾರಿಯಲ್ಲಿ ಭೀಮವ್ವಳು ಮುಂದುವರೆದಿರುವುದು ಅವಳ ಖಂಡಕಾವ್ಯಗಳನ್ನು ನೋಡಿದಾಗ ಗೊತ್ತಾಗುತ್ತದೆ. ಸಂಖ್ಯೆಯ ದೃಷ್ಟಿಯಿಂದ ಗಮನಿಸಿದರೆ ಗಿರಿಯಮ್ಮ ಉದ್ಧಾಳಿಕನ ಕಥೆ, ಶಂಕರಗಂಡನ ಹಾಡು, ಸೀತಾ ಕಲ್ಯಾಣ, ಚಂದ್ರಹಾಸನ ಕತೆ, ಬ್ರಹ್ಮಕೊರವಂಜಿ, ಲವಕುಶರ ಕಾಳಗ, ಕೃಷ್ಣಕೊರವಂಜಿ ಎಂಬ ಏಳು ಖಂಡಕಾವ್ಯಗಳನ್ನು ರಚಿಸಿದ್ದಾಳೆ. ಜೀವೂಬಾಯಿಯು ಹತ್ತು ಖಂಡ ಕಾವ್ಯಗಳನ್ನು ಬರೆದಿದ್ದಾಳೆ.

ಹರಪನಹಳ್ಳಿ ಭೀಮವ್ವ ಹರಿದಾಸ ಸಾಹಿತ್ಯದಲ್ಲಿ ಗಿರಿಯಮ್ಮಳಂತೆ ಜನಪ್ರೀಯತೆ ಪಡೆದ ಪ್ರಮುಖ ಕೀರ್ತನಕಾರ್ತಿ. 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ೧೪೩ ಕೀರ್ತನೆಗಳನ್ನು ಹಾಗೂ ೬ ದೀರ್ಘ ಕೀರ್ತನೆಗಳನ್ನು ರಚಿಸಿದ್ದಾಳೆ.

"ಸ್ಮರಿಸಿ ಬದುಕಿರೊ ಸರ್ವಾನಂದ ಗುರುಗಳ
ನಿರುತದಿ ಇಷ್ಟಫಲವ ನೀಡೋ ವರಗಳ ಬೇಡಿ

ಆದಿ ಕಲ್ಲಿನಲ್ಲಿ ಮಹಾದೇವ ಕರೆಯಬಂದು ನಿಂತ
ಶ್ರೀದೇವಿರಮಣನ ಮುದ್ದುಪಾದಾಂಬುಜ ಪೂಜಿಸುವರ"[೧೦]

ಪ್ರತಿಯೊಬ್ಬರು ಗುರುಗಳನ್ನು ಸ್ಮರಿಸಬೇಕು. ಹೀಗೆ ಗುರುಸ್ಮರಣೆ ಮಾಡುವುದರಿಂದ ನಮ್ಮ ನಿತ್ಯದ ಇಷ್ಟಾರ್ಥಗಳು ಹೀಗೆ ಸಿದ್ಧಿಸುತ್ತವೆ, ಎನ್ನುತ ಭೀಮವ್ವ ರಾಘವೇಂದ್ರ ಯತಿಗಳನ್ನು ಸ್ಮರಿಸಿದರೆ ದೊರೆವ ಫಲಗಳನ್ನು ತಿಳಿಸುವಳು. ಇದೇ ರೀತಿಯಾಗಿ ಜೀವಮ್ಮಳು ಗುರುಸ್ಮರಣೆಯ ಬಗೆಗೆ

"ಸ್ಮರಿಸಿ ಬದುಕಿರೋ ಗುರವರರಾ ನರ
ಹರಿಸ್ಮರಣೆ ಮರೆಯದಲೆ ಕೀರ್ತಿಸಿ ನಲಿದವರ

ದಾಸದೀಕ್ಷೆಯ ವಹಿಸಿದವರ ಹರಿ
ದಾಸರ ಕೂಡ ನಲಿದು ನರ್ತಿಸಿನಲಿದವರ
ಶ್ರೀಶನ ಮಹಿಮೆಬಲ್ಲವರ
ಭವಪಾಶಗಳವ ಸನ್ಮಾರ್ಗ ಬೋಧಕರ"[೧೧]

ಎಂದು ಹೇಳುವ ಮೂಲಕ ಗುರುಸ್ತುತಿಯ ಮಹಿಮೆಯನ್ನು ಬಣ್ಣಿಸಿರುವಳು. ಗುರುಸ್ತುತಿಯ ಪ್ರಭಾವದಿಂದ ಭವಬಂಧನವನ್ನು ಕಳಚಿಕೊಂಡು ಮುಕ್ತಳಾಗಬೇಕೆಂಬ ಸೂಚನೆಯನ್ನು ಜೀವಮ್ಮ ನೀಡಿರುವಳು. ಇಂಥ ರಚನೆಗಳಲ್ಲಿ ಜೀವಮ್ಮ ಭೀಮವ್ವನ ಪ್ರಭಾವಕ್ಕೊಳಗಾಗಿರುವುದು ಕಂಡುಬರುತ್ತದೆ.

ಹರಪನಹಳ್ಳಿ ಭೀಮವ್ವ ಹೆಚ್ಚಾಗಿ ಸಂಪ್ರದಾಯದ ಹಾಡುಗಳನ್ನು ಬರೆದಿರುವಳು. ಅದರಲ್ಲಿ ಉಡಿಯ ತುಂಬುವ ಹಾಡು ಹೀಗಿದೆ

"ಉಡಿಯೆ ತುಂಬಿರೆ ನಮ್ಮ ಉಡುರಾಜ ಮುಖಿಗೆ
ಉಡಿಯ ತುಂಬಿರೆ ನಮ್ಮ
ಕಡಲೆ ಕೊಬ್ಬರಿ ಬಟ್ಟಲೋಳು ಬಾಲೆ ಫಲಗ
ಳ್ವುಡಿಯ ತುಂಬಿರೆ ನಮ್ಮ
ಜಂಬುನೇರಲೆ ಗೊನೆ ಜಾಂಬೂಫಲಗಳು
ನಿಂಬೆ ದಾಳಿಂಬ್ರ ಔದುಂಬ್ರ ಫಲಗಳು
ಉತ್ತತ್ತಿ ದ್ರಾಕ್ಷಿ ಕಿತ್ತಳೆ ಸೀತಾಫಲವು
ಅಕ್ಕಿ ಅಂಜೂರ ಉತ್ತತ್ತಿ ಫಲಗಳು"[೧೨]

ಉಡಿ ತುಂಬುವುದು, ಹಸೆಗೆ ಕರೆಯುವುದು, ಆರತಿಯೆತ್ತುವುದು, ಉರುಟಣೆ ಮಾಡುವುದು, ಆಶೀರ್ವಾದ, ಬಾಗಿಲು ತೆರೆಸುವುದು ಮುಂತಾದ ರೂಢಿಗತವಾದ ಸಂಪ್ರದಾಯಗಳನ್ನು ಹರಪನಹಳ್ಳಿ ಭೀಮವ್ವ ತನ್ನ ರಚನೆಗಳಲ್ಲಿ ವರ್ಣಿಸಿರುವಳು. ಇವಳ ಹಾಗೆಯೇ ಜೀವಮ್ಮಳು ಕೂಡ ಈ ಬಗೆಯ ಸಂಪ್ರದಾಯಗಳನ್ನು ತನ್ನ ಹಾಡುಗಳಲ್ಲಿ ತುಂಬಿರುವುದು ಕಂಡುಬರುತ್ತದೆ.

"ಉಡಿಯ ತುಂಬಿರೆ ಕಡಲೊಡೆಯನ
ಮಡದಿಗ್ಹರುಷದಿ
. . . . . . . . . . . . . . . . . . .
ನಿಂಬೆ ನೇರಳೆ ಜಂಬು ದ್ರಾಕ್ಷಿ ಕದಳಿ ಫಲಂಗಳಿಂ
ಅಂಬುಜಾಕ್ಷನರಸಿಗೆ ದಾಳಿಂಬ ತೆಂಗು ಸಹಿತದಿ
. . . . . . . . . . . . . . . . . . .
ಮಾದಳದ ಫಲವು ಮಾವು ಪನ್ನೇರಿಲ ಫಲಗಳ
ಮಾದವನ ಮಡದಿಗೀಗ ಮಾನಿನಿ ಮಣಿಯರು
. . . . . . . . . . . . . . . . . . . ."[೧೩]

ಭೀಮವ್ವಳ ಕೀರ್ತನೆಗೆ ಮತ್ತು ಜೀವಮ್ಮಳ ಕೀರ್ತನೆಗೆ ಸಾಮ್ಯತೆ ಇದೆ. ನಿಂಬೆ ನೇರಳೆ ದಾಳಿಂಬೆ ಬಾಳೆ ಮುಂತಾದ ಉಡಿ ತುಂಬುವ ಸಾಮಗ್ರಿಗಳನ್ನು ಇಬ್ಬರೂ ಪ್ರಸ್ತಾಪಿಸಿರುವರು. ಶಿವನು ತನ್ನ ಮಡದಿಯಾದ ಪಾರ್ವತಿಯನ್ನು ಬಾಗಿಲು ತೆರೆಯುವಂತೆ ಕೇಳುವ ಸಂದರ್ಭದ ಹಾಡೊಂದು ಹೀಗಿದೆ, ಇದಕ್ಕೆ ಕದ ತೆರೆಯುವ ಹಾಡು ಎಂದು ಕರೆಯುವರು.

"ಕಾಂತೆ ಪಾರ್ವತಿ ನೀಲಕಂಠ ನಾ ಬಂದಿನಿ
ಸಂತೋಷದಿ ಬಾಗಿಲು ತೆಗೆಯೆ
. . . . . . . . . . . . . . . . . . . .
ಕಂಠದೊಳು ಕಪ್ಪಿದ್ದರೆ ನೀ ನವಿ
ಲಂತೆ ಕುಣಿದು ತೋರಿಸೆನಗೆ ನವಿ
ಲಂತೆ ಕುಣಿದು ತೋರಿಸೆನಗೆ"[೧೪]

". . . . . . . . . . . . . . . . . . .
ನೀಲಕಂಠನೆಂದೆನ್ನನು ಕರೆವರು
ಕೇಳು ಮನಸು ಚಂಚಲ ಬಿಟ್ಟು
ನೀಲಕಂಠನೆಂದರೆ ನೆನಪಾಯಿತು
ನವಿಲಮರಿ ಬಂದಿಹುದೆಂದು" [೧೫]

ಈ ಎರಡು ಕೀರ್ತನೆಗಳಲ್ಲಿ 'ನೀಲಕಂಠ' ಎಂಬ ಹೆಸರಿಗೆ ನವಿಲು ಎಂದು ಅರ್ಥೈಸಿರುವುದು ಕಂಡುಬರುವುದು. ಒಂದು ಪದವನ್ನು ನಾನಾರ್ಥದಲ್ಲಿ ಹೇಗೆ ಪರಿಚಯಿಸಬಹುದು ಎಂಬುದಕ್ಕೆ ಇದು ನಿದರ್ಶನ.

ಆತ್ಮನಿವೇದನೆಯ ಕೀರ್ತನೆಗಳಲ್ಲಿ ಜೀವಮ್ಮಳು ಕೆಲವು ಕಡೆ ಯದುಗಿರಿಯಮ್ಮನವರ ಪ್ರಭಾವಕ್ಕೊಳಗಾಗಿರುವುದು ತಿಳಿಯುತ್ತದೆ. ಯದುಗಿರಿಯಮ್ಮಳು 'ಮುದ್ದುವೆಂಕಟ' ಮತ್ತು 'ವೆಂಕಟಕೃಷ್ಣ' ಎಂಬ ಅಂಕಿತದಿಂದ ಕೀರ್ತನೆ ರಚಿಸಿರುವಳು.

"ಯಾಕೆ ನಿರ್ದಯ ಮಾಡಿದೆ ರಂಗಯ್ಯಾ
ನೀನ್ಯಾಕೆ ನಿರ್ದಯ ಮಾಡಿದೆ

ಯಾಕೆ ನಿರ್ದಯ ಈ ಲೋಕದೊಳಗೆಯಿದ್ದು
ವ್ಯಾಕುಲ ಪಡಲಾರೆ ನಿಮ್ಮ ಲೋಕವ ಸೇರಿಸು"[೧೬]

"ಯಾಕೆ ನಿರ್ದಯನಾದೆ ಲೋಕೇಶ ಪ್ರಭುವೆ
ಸಾಕಲಾರದೆ ಎನ್ನ ನೂಕೆ ಭವದೊಳಗೆ"[೧೭]

ಮೇಲಿನ ಈ ಕೀರ್ತನೆಗಳಲ್ಲಿ ಯದುಗಿರಿಯಮ್ಮಳು 'ನಾನು ಈ ಲೋಕದಲ್ಲಿದ್ದು ತೊಂದರೆ ವೇದನೆಯನ್ನು ಪಡೆಯಲಾರೆ ನೀನು ನನ್ನ ಮೇಲೆ ಇಷ್ಟೊಂದು ನಿರ್ದಯನಾಗಿರುವುದು ಏಕೆ: ಈ ತೊಂದರೆಯಿಂದ ಪಾರು ಮಾಡಲು ಬೇಗನೆ ನನ್ನನ್ನು ನಿನ್ನ ಲೋಕಕ್ಕೆ ಕರೆದುಕೊ' ಎಂದು ಕೇಳಿಕೊಳ್ಳವಳು. ಜೀವಮ್ಮಳು "ಹೇ ಪ್ರಭುವೇ, ನನ್ನನ್ನು ಸರಿಯಾಗಿ ಪೊರೆಯದೆ ಈ ಭವದೊಳಗೆ ನೂಕಿ ನಿರ್ದಯನಾಗಿರುವೆ ಏಕೆ' ಎಂದು ಶ್ರೀಹರಿಯನ್ನು ಪ್ರಶ್ನಿಸುವಳು. ಯದುಗಿರಯಮ್ಮನವರು ೫೨ ಕೀರ್ತನೆಗಳನ್ನು (ಲಭ್ಯವಾದವುಗಳು) ರಚಿಸಿರುವಳು. ಜೀವೂಬಾಯಿಯವರಲ್ಲಿರುವ ವಸ್ತು ವೈವಿದ್ಯತೆ ಇವಳ ಕೀರ್ತನೆಗಳಲ್ಲಿ ಕಾಣುವುದಿಲ್ಲ.

ನವವಿಧ ಭಕ್ತಿಗಳಲ್ಲಿ ಒಂದಾದ 'ಪಾದಸೇವನ' ಭಕ್ತಿಯ ಕುರಿತು ತಿಳಿಸುವ ಕೀರ್ತನೆಗಳಲ್ಲಿ ನಾಡಿಗರ ಶಾಂತಿಬಾಯಿಯವರ ಕೀರ್ತನೆಗಳಿಗೂ ಜೀವಮ್ಮಳ ಕೀರ್ತನಗಳಿಗೂ ಸಾಮ್ಯತೆ ಕಂಡುಬರುವುದುಂಟು. ನಾಡಿಗರ ಶಾಂತಾಬಾಯಿಯವರು ೨೭ ಕೀರ್ತನೆಗಳನ್ನು ಬರೆದಿರುವಳು.

> ದೇವಾ ನಿನ್ನ ಪಾದವನ್ನು ಯಾವಾಗಲೂ ಸ್ಮರಿಸುವೆನೊ
> ಭಾವ ಭಕ್ತಿ ಪ್ರೇಮವಿತ್ತು ಕಾವುದೆನ್ನ ಹರಿಯೆ ನೀನು"[೧೮]
>
> ತ್ವರದಿ ಭಜಿಪೆ ನಮ್ಮ ಗುರುಪಾದಾಂಬುಜ
> ಕೆರಗುತಲನುದಿನ ಭಕುತಿಯಲಿ
> ನೆರೆ ನಂಬಿದವರ ಬಿಡದೆ ಪೊರೆವರೆಂಬ
> ಉರುತರ ಕೀರ್ತಿಯ ಸ್ಮರಿಸುತಲಿ"[೧೯]

ಇಬ್ಬರ ರಚನೆಗಳಲ್ಲಿಯೂ ಒಂದೇ ಭಾವ ವ್ಯಕ್ತವಾಗಿರುವುದು ಗೋಚರಿಸುತ್ತದೆ. 'ಸದ್ಭಾವ, ಭಕ್ತಿ, ಪ್ರೇಮವನ್ನು ಧಾರೆ ಎರೆದು ನನ್ನನ್ನು ಕಾಯಬೇಕೆಂದು ನಿನ್ನ ಪಾದಕೆರಗುವೆ, ಸ್ಮರಿಸುವೆ' ಎಂದು ಶಾಂತಿಬಾಯಿಯವರು ದೇವನಲ್ಲಿ ಕೋರಿಕೆ ಸಲ್ಲಿಸುವಳು. 'ನಂಬಿದವರ ಕೈಬಿಡಲಾರನೆಂಬ ಅತಿ ನಂಬಿಗೆ ಮತ್ತು ಭಕುತಿಯಿಂದ ಶ್ರೀಗುರುವಿನ ಪಾದಕ್ಕೆ ಹಣೆಮಣಿದು ನಿರಂತರ ಅವನ ಗುಣಗಾನ ಮಾಡುವೆ' ಎಂದು ಜೀವಮ್ಮ ಪ್ರಾರ್ಥಿಸುವಳು.

ಓರಬಾಯಿ ಲಕ್ಷ್ಮಿದೇವಮ್ಮ ಅವರು 'ನರಸಿಂಹವಿಠಲ' ಎಂಬ ಅಂಕಿತವನ್ನಿಟ್ಟುಕೊಂಡು ೨೧ ಕೀರ್ತನೆಗಳನ್ನು ಮತ್ತು ೧೧ ದೀರ್ಘ ಕೃತಿಗಳನ್ನು ಬರೆದಿದ್ದಾಳೆ. ಗೊಲ್ಲತಿ ಹಾಡು, ರಾಮದೇವರ ಕತೆ, ವರಮಹಾಲಕ್ಷ್ಮಿ ಹಾಡು, ಶನಿಮಹಾತ್ಮೆ, ಸಕ್ಕೂಬಾಯಿ ಚರಿತ್ರೆ, ಗೋಪಿಗೀತ, ರಾಸಕ್ರೀಡೆ ಮುಂತಾದ ಕೃತಿಗಳನ್ನು ರಚಿಸಿದ್ದಾಳೆ. ಸರಸಾಬಾಯಿಯವರು 'ರಮಾವಲ್ಲಭವಿಠ್ಠಲ' ಎಂಬ ಅಂಕಿತದಿಂದ ಬರೆದಿರುವ ೧೩ ಕಿರ್ತನೆಗಳು ಲಭ್ಯವಾಗಿವೆ. ನಂಜನಗೂಡು ತಿರುಮಲಾಂಬಾ ಅವರು ಬರೆದ ೧೯೯ ಕೀರ್ತನೆಗಳು

ದೊರೆಯುತ್ತವೆ. ಇದರಲ್ಲಿ ಭಕ್ತಿಗೀತಾವಲಿಯ ೧೨೮ ಕೀರ್ತನೆಗಳು, ಭದ್ರ ಗೀತಾವಲಿಯ ೭೧ ಕೀರ್ತನೆಗಳು ಸೇರಿವೆ. 'ಶೇಷಗಿರೀಶ' ಎಂಬ ಅಂಕಿತವನ್ನು ತನ್ನ ರಚನೆಗೆ ಬಳಸಿರುವಳು. ಇವರ 'ಭಕ್ತಿ ಗೀತಾವಳಿ' ಎಂಬ ಕಾವ್ಯ ನೊಂದ ಹೆಣ್ಣಿನ ಬದುಕಿನಲ್ಲಿ ಪರಮಾತ್ಮನ ರಸಾನುಭವಕ್ಕೆ ಮೀಸಲಾಗಿರುವ ಕೀರ್ತನೆಗಳಿವೆ. 'ಭದ್ರಗೀತಾವಲಿ'ಯು ಸಂಪ್ರದಾಯದ ಹಾಡುಗಳನ್ನು ಒಳಗೊಂಡಿದೆ.

ಬಳ್ಳಾರಿ ರಾಧಾಬಾಯಿಯವರು 'ವೆಂಕಟವಿಠ್ಠಲ, ಶ್ರೀರಾಘವೇಂದ್ರ' ಎಂಬ ಅಂಕಿತಗಳಿಂದ ೩೫ ಕೀರ್ತನೆಗಳನ್ನು ಬರೆದಿರುವಳು.

"ತಂದೆ ತಾಯಿಯು ನೀನೆ ಬಂಧುಬಳಗವು ನೀನೆಂದು
ನಂಬಿದೆನ್ನೈ ಪ್ರಭುವೆ ಸಂದೇಹವೇಕಿನ್ನು ಕಂದನೆನು
ತೆಂದು ಕಾಯೋ ಗುರುವೆ ಶ್ರೀರಾಘವೇಂದ್ರ ಪ್ರಭುವೆ"[೨೦]

ಎಂದು ರಾಘವೇಂದ್ರನಲ್ಲಿ ಪೂರ್ಣ ನಂಬಿಕೆಯನಿಟ್ಟು, ಆತನನ್ನು ಬಿಟ್ಟರೆ ನನಗೆ ಬೇರೆ ಯಾರಿಲ್ಲವೆಂದು ಹೇಳಿಕೊಂಡಿದ್ದಾಳೆ. ಜೀವಮ್ಮಳು ಕೂಡ ಇದೇ ರೀತಿಯಾಗಿ ತಂದೆ ನೀನು ತಾಯಿ ನೀನು ಬಂಧುಬಳಗವು ನೀನೆಂದು ಶ್ರೀಹರಿಯನ್ನು ನಂಬಿರುವಳು.

ಕಳಸದ ಸುಂದರಮ್ಮನವರು ೩೦ ಕೀರ್ತನೆಗಳನ್ನು ಬರೆದಿದ್ದಾರೆ. 'ಕಾಳಿಮರ್ಧನ ಕೃಷ್ಣ' ಎಂಬುದು ಇವಳ ಅಂಕಿತ. ಉಡುಪಿಯ ಅಷ್ಠ ಮಠದ ಯತಿಗಳನ್ನು ಕುರಿತು ಅಪರೂಪದ ಕೃತಿ ರಚಿಸಿರುವಳು. ಕೃಷ್ಣನ ಬಾಲಲೀಲೆಗಳನ್ನು ವರ್ಣಿಸಿರುವಳು. 'ರುಕ್ಮೀಣಿ ವಿಠ್ಠಲ' ಎಂಬ ಅಂಕಿತ ಪಡೆದು ಶ್ರೀಮತಿ ಗುಂಡಮ್ಮನವರು ಬರೆದ ಏಳು ಕೀರ್ತನೆಗಳು ಲಭ್ಯವಿವೆ.

ಸರಸ್ವತಿ ಬಾಯಿಯವರು 'ಶ್ರೀನಿವಾಸ' ಎಂಬ ಅಂಕಿತ ಪಡೆದು ೧೫೦ ಕೀರ್ತನೆಗಳನ್ನು ಹಾಗೂ ಐದು ದೀರ್ಘ ಕೃತಿಗಳನ್ನು ರಚಿಸಿರುವಳು. ಗಣೇಶ ಪ್ರಾರ್ಥನೆ, ಶ್ರೀಹರಿಸ್ತುತಿ, ಲಕ್ಷ್ಮಿದೇವಿ, ಹನುಮ, ಭೀಮ, ಮಧ್ವ, ತುಳಸಿ, ಸರಸ್ವತಿ, ರುದ್ರದೇವರು, ಪಾರ್ವತಿದೇವಿ, ಸುಭದ್ರೆ, ರಾಘವೇಂದ್ರ ಯತಿಗಳು ಕುರಿತು ಸ್ತುತಿ ಗೀತೆಗಳು, ಆತ್ಮನಿವೇದನೆ, ಲೋಕನೀತಿ, ತತ್ವ ಪ್ರತಿಪಾದನೆ, ಸಾಂಪ್ರದಾಯ ಕೀರ್ತನೆಗಳು ಇದರಲ್ಲಿ ಸೇರಿಕೊಂಡಿವೆ. ಕೃಷ್ಣ ಲೀಲೆ, ಪ್ರಲ್ಹಾದ ಚರಿತ್ರೆ, ಕೃಷ್ಣನ ಕಥೆ, ಪ್ರಮೀಳೆ ಕಾಳಗ, ಶ್ರೀನಿವಾಸ ಕಲ್ಯಾಣ ಇವು ದೀರ್ಘ ಕೃತಿಗಳು.

'ಗೋಪಾಲಕೃಷ್ಣ ವಿಠಲ' ಎಂಬ ಅಂಕಿತವನ್ನು ತಂದೆ ಮುದ್ದುಮೋಹನದಾಸರಿಂದ ಪಡೆದ ಅಂಬಾಬಾಯಿಯವರು ೨೬೨ ಕೀರ್ತನೆಗಳನ್ನು ಹಾಗೂ ೪ ದೀರ್ಘ ಕೃತಿಗಳನ್ನು ಬರೆದಿರುವಳು. ಇವಳು ನಿಡಗುರಕಿ ಜೀವೂಬಾಯಿಯವರಿಗಿಂತ ೫ ವರ್ಷ ಚಿಕ್ಕವರು. ಆದರೆ ಜೀವಮ್ಮಳಿಗಿಂತ ಮೊದಲು ೧೯೪೫ ರಂದು ತೀರಿಕೊಂಡಳು. ಇವರ ರಚನೆಗಳಲ್ಲಿ ಶ್ರೀಹರಿಮಹಿಮೆ, ಮಹಾಲಕ್ಷ್ಮಿ ಗುಣಗಾನ, ವಾಯುದೇವರ ಸ್ತುತಿ, ಭಾರತಿದೇವಿಯವರ, ರುದ್ರದೇವರ, ತುಳಸಿದೇವಿಯರ ಸ್ತುತಿಪದ್ಯಗಳಿವೆ. ಹರಿಹರ ಸ್ತುತಿ, ಯತಿಗಳ

ಸ್ತುತಿ ಪದ್ಯಗಳಿವೆ. ಆತ್ಮಶೋಧನೆ, ಲೋಕನೀತಿ, ತತ್ವ ನಿರೂಪಣೆಯ ರಚನೆಗಳಿವೆ. ಕೆಲವು ಕಥನಾತ್ಮಕ ಹಾಡುಗಳಿವೆ. ವಿಶೇಷ ಸಂದರ್ಭದ ಹಾಡುಗಳಿವೆ. ಶ್ರೀ ಕೃಷ್ಣ ಬಾಲಲೀಲೆ ಜೋಗುಳ, ಶ್ರೀವೆಂಕಟೇಶ ಸ್ತೋತ್ರ (೧), ವೆಂಕಟೇಶ ಸ್ತೋತ್ರ (೨) ಮತ್ತು ಸೀತಾಪತಿವಿಠಲದಾಸಳ ನಿರ್ಯಾಣ ಪದಗಳೆಂಬ ದೀರ್ಘ ಕೃತಿಗಳನ್ನು ಅಂಬಾಬಾಯಿ ರಚಿಸಿರುವಳು. ಇವಳು ಜೀವೂಬಾಯಿಯ ಸಮಕಾಲೀನಳು.

ಹೀಗೆ ಮಹಿಳಾ ಕೀರ್ತನಕಾರರ ಪರಂಪರೆಯನ್ನು ನೋಡಿದಾಗ ಅಲ್ಲಿ ಜೀವೂಬಾಯಿಯು ಹೇಗೆ ತನಗಿಂತ ಪೂರ್ವದ ಕೀರ್ತನಕಾರ್ತಿಯರ ಪ್ರಭಾವಕ್ಕೊಳಗಾಗಿದ್ದಾಳೆ ಮತ್ತು ಅವರಿಗಿಂತ ಹೇಗೆ ಭಿನ್ನಳಾಗಿದ್ದಾಳೆಂಬ ಅಂಶಗಳು ತಿಳಿದು ಬರುತ್ತವೆ. ಕೀರ್ತನೆಗಳ ಸಂಖ್ಯೆಗಳನ್ನು ಲಕ್ಷಿಸಿದರೆ ಅಂಬಾಬಾಯಿಯವರನ್ನು ಬಿಟ್ಟರೆ ಅತಿ ಹೆಚ್ಚು ಕೀರ್ತನೆ ರಚಿಸಿದವಳು ಜೀವಮ್ಮ ಎಂಬುದು ಸ್ಪಷ್ಟವಾಗುತ್ತದೆ. ಖಂಡ ಕಾವ್ಯ ಕೃತಿಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಓರಬಾಯಿ ಲಕ್ಷ್ಮೀದೇವಮ್ಮನನ್ನು ಬಿಟ್ಟರೆ ಅತಿ ಹೆಚ್ಚು ಹೆಚ್ಚು ದೀರ್ಘ ಕೃತಿಗಳನ್ನು ರಚಿಸಿರುವುದು ಜೀವೂಬಾಯಿಯವರೇ. ಆದರೆ ಸಾಹಿತ್ಯ ಮೌಲ್ಯದ ಮೇಲೆ ಹೇಳುವುದಾದರೆ ಹೆಳವನಕಟ್ಟೆ ಗಿರಿಯಮ್ಮಳ ಕೃತಿಗಳು ಪ್ರಥಮ ಸ್ಥಾನದಲ್ಲಿ ನಿಲ್ಲುತ್ತವೆ. ನಂತರದ ಸ್ಥಾನವನ್ನು ಜೀವಮ್ಮನ ದೀರ್ಘ ಕೃತಿಗಳು ಪಡೆದುಕೊಳ್ಳುತ್ತವೆ. ಹರಪನಹಳ್ಳಿಯ ಭೀಮವ್ವನ ಕೃತಿಗಳು ಉತ್ತಮ ಮೌಲ್ಯಗಳನ್ನು ಹೊಂದಿವೆ. ಜೀವೂಬಾಯಿಯು ರಚಿಸಿರುವ ಕೀರ್ತನೆಗಳಲ್ಲಿ ಭಗವಂತನ ಸಂಕೀರ್ತನೆಯ ಕುರಿತಾದ ರಚನೆಗಳು ಹೆಚ್ಚಾಗಿವೆ. ಇವಳು ಬರೆದ ನದಿ ಸ್ತೋತ್ರ ಬಹು ದೀರ್ಘವಾಗಿದೆ. ಇಷ್ಟು ದೀರ್ಘ ನದಿ ಸ್ತೋತ್ರ ಬರೆದ ಯಾವ ಕೀರ್ತನಕಾರ್ತಿಯು ಕಂಡು ಬರುವುದಿಲ್ಲ. ಸಂಪ್ರದಾಯ ಹಾಡುಗಳ ರಚನೆಯಲ್ಲಿ ಗಲಗಲಿ ಅವ್ವ, ಹರಪನಹಳ್ಳಿ ಭೀಮವ್ವರ ನಂತರದ ಸ್ಥಾನದಲ್ಲಿ ಜೀವೂಬಾಯಿ ನಿಲ್ಲುವಳು.

ಎಲ್ಲ ಕೀರ್ತನಕಾರ್ತಿಯರಿಗಿಂತ ಜೀವಮ್ಮ ವಿಶಿಷ್ಟವಾಗಿ ಕಾಣಿಸುವುದು ಅವಳು ಪ್ರತಿ ಯುಗಾದಿಯಂದು ರಚಿಸಿದ ಸಂವತ್ಸರದ ಕೀರ್ತನೆಗಳಲ್ಲಿ. ಹೀಗೆ ಒಂದು ವ್ರತವನ್ನಾಗಿಟ್ಟುಕೊಂಡು ನಿಯಮಿತವಾಗಿ ಕೀರ್ತನೆ ರಚಿಸಿದ ಮತ್ತೋರ್ವ ಮಹಿಳಾ ಕೀರ್ತನಕಾರ್ತಿಯರು ದಾಸಸಾಹಿತ್ಯದಲ್ಲಿ ಕಂಡು ಬರುವುದಿಲ್ಲ.

ಖಂಡಕಾವ್ಯಗಳಿಗೆ ಆಯ್ದುಕೊಂಡ ವಿಷಯಗಳೆಂದರೆ, ರಾಮಾಯಣ, ಮಹಾಭಾರತ ಮತ್ತು ಭಾಗವತದ ಆಯ್ದ ಭಾಗಗಳು, ಅವಳ ದೀರ್ಘ ರಚನೆಗಳಲ್ಲಿ 'ಶ್ರೀಪುರಂದರ ವಿಠ್ಠಲದಾಸರ ಚರತ್ರೆ' ವಿಶಿಷ್ಟವಾದುದು. ಇದು ಜೀವೂಬಾಯಿಯವರ ಕಾವ್ಯ ಪ್ರಭುತ್ವಕ್ಕೆ ಹಿಡಿದ ಕನ್ನಡಿ. ದಾಸಸಾಹಿತ್ಯದಲ್ಲಿ ಪುರಂದರದಾಸರ ಚರಿತ್ರೆಯನ್ನು ತಮ್ಮ ಕಾವ್ಯಕೃತಿಗೆ ಆಯ್ಕೆ ಮಾಡಿಕೊಂಡು ಇಷ್ಟು ದೀರ್ಘವಾಗಿ ರಚಿಸಿದ ಮತ್ತೊಂದು ನಿದರ್ಶನವಿಲ್ಲ. ಹೆಳವನಕಟ್ಟೆಯ ಗಿರಿಯಮ್ಮಳ ಹಾಗೆ ಜೀವೂಬಾಯಿಯು ತನ್ನ ಪ್ರತಿಭೆ ಮತ್ತು ಪಾಂಡಿತ್ಯವನ್ನು ಖಂಡ ಕಾವ್ಯಗಳಲ್ಲಿ ತೋರಿಸಿದ್ದಾಳೆ. ಗಾಲವ ಚರಿತ್ರೆಯನ್ನು ವಿಭಿನ್ನ ಪರಿಕಲ್ಪನೆಯೊಂದಿಗೆ ರಚಿಸಿರುವಳು.

ಹೀಗೆ, ಜೀವೂಬಾಯಿಯವರು ಹರಿದಾಸಸಾಹಿತ್ಯ ಪರಂಪರೆಯ ಮಹಿಳೆಯರ ಸಾಲಿನಲ್ಲಿ ಗಲಗಲಿ ಅವ್ವ, ಹೆಳವನಕಟ್ಟೆಯ ಗಿರಿಯಮ್ಮ ಮತ್ತು ಹರಪನಹಳ್ಳಿಯ ಭೀಮವ್ವ ನಂತರದ ಸ್ಥಾನದಲ್ಲಿ ನಿಲ್ಲುವಂಥವಳು. ಕೆಲವು ವಿಷಯಗಳಲ್ಲಿ ಹರಪನಹಳ್ಳಿ ಭೀಮವ್ವ ಮತ್ತು ಗಲಗಲಿ ಅವ್ವನವರಿಗೆ ಸರಿಸಮಾನವಾಗಿ ನಿಲ್ಲುವ ಅರ್ಹತೆ ಹೊಂದಿರುವಳು. ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಜೀವೂಬಾಯಿಯು ತನ್ನ ರಚನೆಗಳ ಮೂಲಕ ಒಂದು ವಿಶಿಷ್ಠ ಸ್ಥಾನವನ್ನು ಪಡೆದುಕೊಂಡಿರುವಳು. ಬಾಲ್ಯದ ವೈಧವ್ಯವು ತನಗೆ ಮುಳುವಾಯಿತೆಂದು ಕುಳಿತುಕೊಳ್ಳದೆ ತನ್ನನ್ನು ಇನ್ನುಳಿದ ಸೇವಾ ಕಾರ್ಯಗಳಲ್ಲಿ ತೊಡಗಿಸಿಕೊಂಡು ತಂದೆಯ ಮೂಲಕ ಅಕ್ಷರಾಭ್ಯಾಸ ಮತ್ತು ಸಂಗೀತ ಜ್ಞಾನವನ್ನು ಪಡೆದುಕೊಂಡು ದಾಸ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆ ನೀಡಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ಸಮಗ್ರ ದಾಸ ಸಾಹಿತ್ಯ ಸಂಪುಟ ೭ — ಪು. ೫. ಕೀ. ೭
೨. ಅದೇ — ಪು. ೧೨೯ ಕೀ. ೧೦೧
೩. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೫೮, ಕೀ ೧೧೮
೪. ಸಮಗ್ರ ದಾಸಸಾಹಿತ್ಯ ಸಂಪುಟ– ೭ — ಪು. ೧೭೪, ಕೀ ೧೪೩
೫. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೯೫, ಕೀ ೬೮
೬. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೧ — ಪು. ೨೪ ಕೀ ೨೬
೭. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೯೩ ಕೀ ೬೫
೮. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೧ — ಪು. ೧ ಕೀ ೩
೯. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೫೩ ಕೀ ೩೬
೧೦. ಸಮಗ್ರ ದಾಸಸಾಹಿತ್ಯ ಸಂಪುಟ– ೧೯ — ಪು. ೮೪ ಕೀ ೪೯
೧೧. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೧೨ ಕೀ ೮೨
೧೨. ಸಮಗ್ರ ದಾಸಸಾಹಿತ್ಯ ಸಂಪುಟ– ೧೯ — ಪು. ೧೯೬ ಕೀ ೧೦೨
೧೩. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೫೪ ಕೀ ೧೧೫
೧೪. ಸಮಗ್ರ ದಾಸಸಾಹಿತ್ಯ ಸಂಪುಟ– ೧೯ — ಪು. ೧೯೪ ಕೀ ೧೦೧
೧೫. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೭೪ ಕೀ ೧೩೦
೧೬. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೪ — ಪು. ೨೬ ಕೀ ೧೩
೧೭. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೩೦ ಕೀ ೯೬
೧೮. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೪ — ಪು. ೧೦೭ ಕೀ ೧೬
೧೯. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೨ — ಪು. ೧೧೦ ಕೀ ೮೦
೨೦. ಸಮಗ್ರ ದಾಸಸಾಹಿತ್ಯ ಸಂಪುಟ– ೧೮ ಭಾಗ ೪ — ಪು. ೪೭೨ ಕೀ ೩೫

ಅಧ್ಯಾಯ ೯

# ಅಧ್ಯಯನದ ಫಲಿತಗಳು

'ಜನವಾಣಿ ಬೇರು ಕವಿವಾಣಿ ಹೂವು' ಎಂಬಂತೆ ಎಲ್ಲ ಪ್ರಕಾರದ ಸಾಹಿತ್ಯಕ್ಕೆ ಜನವಾಣಿಯೇ ಮೂಲ. ಈ ಮಾತು ಕೇವಲ ಕನ್ನಡ ಸಾಹಿತ್ಯಕ್ಕಷ್ಟೇ ಅಲ್ಲ ಜಗತ್ತಿನ ಎಲ್ಲ ಭಾಷೆಯ ಸಾಹಿತ್ಯಕ್ಕೂ ಅನ್ವಯಿಸುವ ಮಾತು. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಶ್ರೀವಿಜಯನಿಂದ ಆರಂಭಗೊಂಡ ಲಿಖಿತ ಸಾಹಿತ್ಯ ರಚನೆಯು ವಿಭಿನ್ನ ರೂಪಗಳನ್ನು ಪಡೆದುಕೊಂಡು ಹಲವು ಘಟ್ಟಗಳಲ್ಲಿ ಪ್ರವಹಿಸುತ್ತಾ ಬಂದಿದೆ. ರಾಜಾಶ್ರಯದ ಚಂಪೂ ಹಲವು ಪ್ರೌಢಕಾವ್ಯಗಳನ್ನು ನೀಡಿದರೂ ಈ ಸಾಹಿತ್ಯ ಜನಸಾಮಾನ್ಯರ ಭಾವನೆಗಳಿಗೆ ಸ್ಪಂದಿಸುವಲ್ಲಿ ವಿಫಲವಾಯಿತು. ಅದರ ಪರಿಣಾಮವಾಗಿಯೇ ವಚನಸಾಹಿತ್ಯವು ಜನ್ಮ ತಳೆಯಿತು. ಜನವಾಣಿಗೆ ಪ್ರಾಮುಖ್ಯತೆಯನ್ನು ನೀಡಿ ಅದನ್ನು ದೇವವಾಣಿಯ ಮಟ್ಟಕ್ಕೇರಿಸಿದ ಶ್ರೇಯಸ್ಸು ವಚನಕಾರರಿಗೆ ಸಲ್ಲುತ್ತದೆ. ಇದೇ ಜಾಡಿನಲ್ಲಿ ಮುಂದುವರೆದ ಹರಿದಾಸರು 'ಹರಿಯೇ ಸರ್ವೋತ್ತಮ' ಎಂಬುದನ್ನು ಸಾರಲು ಕೀರ್ತನ ಸಾಹಿತ್ಯವನ್ನು ಬಳಸಿಕೊಂಡು ಬೆಳೆಸಿದರು. ಸಾಹಿತ್ಯಕ್ಕೆ ಸಂಗೀತದ ಸ್ಪರ್ಷವನ್ನು ನೀಡಿ ಲಯಬದ್ಧತೆಗೆ ಒಳಪಡಿಸಿದರು. ಆ ಮೂಲಕ ಓದು ಬರಹ ಬಾರದವರಿಗೆ ಸಾಹಿತ್ಯವನ್ನು ಗೇಯಗುಣದ ಮೂಲಕ ತಲುಪಿಸುವಲ್ಲಿ ಹರಿದಾಸರು ಯಶಸ್ವಿಯಾದರು.

ಹರಿಯ ಸ್ಮರಣೆಯನ್ನೇ ಮುಖ್ಯವಾಗಿಟ್ಟುಕೊಂಡರೂ ಲೋಕನೀತಿ, ಸಮಾಜ ವಿಡಂಬನೆ, ಮಾನವ ಜನ್ಮದ ಸಾರ್ಥಕತೆ, ಸಂಸಾರದ ನಿಸ್ಸಾರತೆ, ಮುಂತಾದ ವಿಷಯಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಕೀರ್ತನೆ, ಸುಳಾದಿ, ಉಗಾಭೋಗಗಳು, ಖಂಡಕಾವ್ಯಗಳ ಮೂಲಕ ನಿರೂಪಿಸಿದರು. ಮಾನವರು ನೆಪಮಾತ್ರ, ಎಲ್ಲದಕ್ಕೂ ಶ್ರೀಹರಿಯೇ ಕಾರಣ. ಈ ಜಗತ್ತು ಸತ್ಯವಾದದು, ನಿತ್ಯವಾದುದು. ಹರಿಯ ಆರಾಧನೆಯನ್ನು ಮಾಡುವ ಮೂಲಕ ಮಾನವನು ತನ್ನ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳಬೇಕು. ಇದನ್ನೇ ಹರಿದಾಸರು 'ಮುಕ್ತಿಗೆ ಭಕ್ತಿಯೇ ಪರಮಸಾಧನ' ವೆಂದು ಸಾರಿದರು. ಅಂಥ ಮುಕ್ತಿಯ ಸಂಪಾದನೆಗಾಗಿ ಹರಿದಾಸರು ತ್ರಿಕರಣಪೂರ್ವಕವಾಗಿ ಶ್ರಮಿಸಿದರು. ಇನ್ನುಳಿದವರಿಗೂ ಮಾರ್ಗದರ್ಶನ ಮಾಡಿದರು. ತಾನೊಬ್ಬನೇ ಮುಕ್ತಿ ಗಳಿಸಿದರೇ ಸಾಲದು, ತನ್ನೊಂದಿಗೆ ಇತರರು ಆ ಸ್ಥಿತಿಯನ್ನು ತಲುಪಬೇಕೆಂಬ ಮಹದಾಶೆಯಿಂದ ತಮ್ಮ ಅನುಭವ, ಅನುಭಾವಗಳನ್ನು ಕೀರ್ತನೆಗಳಲ್ಲಿ ತುಂಬಿ ಜನಸಾಮಾನ್ಯರಿಗೆ ಅರುಹಿದರು. ಈ ಮೂಲಕ ಸಮಾಜ ಪರಿವರ್ತನೆಯತ್ತ ಮುಖ ಮಾಡಿದರು.

ನರಹರಿತೀರ್ಥರಿಂದ ಆರಂಭವಾದ ಈ ಪಂಥವು ಒಟ್ಟು ಸುಮಾರು ಒಂದುನೂರಾ ಮುವತ್ತೊಂಬತ್ತು ಜನ ಹರಿದಾಸರನ್ನು ಒಳಗೊಂಡಿದೆ ಎಂಬುದನ್ನೂ, ಹದಿನಾಲ್ಕು ಸಾವಿರಕ್ಕೂ ಹೆಚ್ಚು ಕೀರ್ತನೆಗಳು ಈ ಎಲ್ಲ ಹರಿದಾಸರಿಂದ ರಚನೆಯಾಗಿರುವ ಸಾಧ್ಯತೆಯನ್ನೂ ವಿದ್ವಾಂಸರು ಈಗಾಗಲೆ ಗುರುತಿಸಿದ್ದಾರೆ. ಹರಿದಾಸ ಸಾಹಿತ್ಯ ಅಂದಿನಿಂದ ಇಲ್ಲಿಯವರೆಗೂ ನಿರಂತರವಾಗಿ ಬೆಳೆದುಕೊಂಡು ಬಂದಿದೆ. ಇದು ಅದರ ಜೀವಂತಿಕೆ ಮತ್ತು ಜನಪ್ರೀಯತೆಯ ಪ್ರತೀಕ. ವಿದ್ವಾಂಸರು ಈ ದಾಸಪರಂಪರೆಯನ್ನು ನಾಲ್ಕು ಘಟ್ಟಗಳಲ್ಲಿ ವಿಂಗಡಿಸುತ್ತಾರೆ. ನರಹರಿತೀರ್ಥರ ಮತ್ತು ಶ್ರೀಪಾದರಾಯರದು ಮೊದಲು ಘಟ್ಟ, ವ್ಯಾಸರಾಯ, ಪುರಂದರದಾಸ, ಕನಕದಾಸರದು ಎರಡನೆಯ ಘಟ್ಟ. ಇದು ದಾಸಸಾಹಿತ್ಯದ ಸುಗ್ಗಿಯಕಾಲ. ವಿಜಯದಾಸ ಮತ್ತು ಗೋಪಾಲದಾಸರದು ಮೂರನೇಯ ಘಟ್ಟ. ವೇಣುಗೋಪಾಲ ಮತ್ತು ಪ್ರಾಣೇಶ ವಿಠ್ಠಲದಾಸರದು ನಾಲ್ಕನೆಯ ಘಟ್ಟ. ದಾಸಸಾಹಿತ್ಯವು ೧೩ನೇ ಶತಮಾನದಿಂದ ಆರಂಭವಾಯಿತಾದರೂ ಮಹಿಳಾ ಕೀರ್ತನಕಾರ್ತಿಯರು ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಕಾಣಿಸಿಗುತ್ತಾರೆ. ಅಂದರೆ ಆರಂಭದ ೫ ಶತಮಾನಗಳಲ್ಲಿ ಮಹಿಳೆಯರು ಕೀರ್ತನೆಗಳನ್ನು ರಚಿಸಿದುದರ ಬಗ್ಗೆ ಯಾವುದೇ ದಾಖಲೆಗಳು ಲಭ್ಯವಿಲ್ಲ. ಇಲ್ಲಿಯವರೆಗೆ ದೊರೆತ ಆಧಾರಗಳ ಮೇಲಿಂದ ಗಲಗಲಿ ಅವ್ವನವರೇ ಮಹಿಳಾ ಕೀರ್ತನಕಾರ್ತಿಯರಲ್ಲಿ ಮೊದಲಿಗಳು ಎಂಬುದು ತಿಳಿದುಬರುತ್ತದೆ.

ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿ ಮಹಿಳಾ ಕೀರ್ತನಕಾರ್ತಿಯರು ಪುರುಷರಂತೆ ಹರಿಪಾರಮ್ಯವನ್ನು ಸಾರುವ ಕೀರ್ತನೆ, ಸಂಪ್ರದಾಯದ ಹಾಡುಗಳು ಹಾಗೂ ಖಂಡಕಾವ್ಯಗಳನ್ನು ರಚಿಸಿರುವುದು ತಿಳಿದು ಬರುತ್ತದೆ. ಗೃಹಿಣಿಯ ಕೌಟುಂಬಿಕ ಜವಾಬ್ದಾರಿಯನ್ನು ನಿಭಾಯಿಸುವುದರ ಜೊತೆ ಜೊತೆಗೆ ಭಗವಂತನ ಸಂಕೀರ್ತನೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಸಂಪ್ರದಾಯಸ್ಥ ಮನೆಯಲ್ಲಿದ್ದುಕೊಂಡೇ ಸ್ವ ಆಸಕ್ತಿಯಿಂದ, ಸ್ವ-ಪ್ರೇರಣೆಯಿಂದ ಸಾಹಿತ್ಯಕೃಷಿ ಮಾಡಿರುವುದು ಮಹಿಳಾ ಕೀರ್ತನಕಾರ್ತಿಯರ ಮೇರು ಸಾಧನೆಯಾಗಿದೆ.

ರಾಮಾಯಣ, ಮಹಾಭಾರತ, ಹಿರಿಯ ಹರಿದಾಸರ ಬಗೆಗಿನ ಭಕ್ತಿ ಗೌರವ ಮುಂತಾದ ವಿಷಯ ಸಾರವನ್ನು ತಮ್ಮ ರಚನೆಗಳಲ್ಲಿ ಬಿಂಬಿಸಿರುವರು. ಈ ದಿಶೆಯಲ್ಲಿ ಗಿರಿಯಮ್ಮ, ಬಹು ಮುಖ್ಯ ಕೀರ್ತನಕಾರ್ತಿಯಾಗಿ ನಮಗೆ ತೋರುತ್ತಾಳೆ. ಹಾಗೆಯೇ ಹರಪನಹಳ್ಳಿಯ ಭೀಮವ್ವ ತನ್ನ ರಚನೆಗಳ ಮೂಲಕ ಜನಮನ ತಲುಪಿದ್ದಾಳೆ. ಇದೇ ಸಾಲಿನಲ್ಲಿ ನಿಲ್ಲಬಲ್ಲ ಮತ್ತೋರ್ವ ಸಮರ್ಥ ಕೀರ್ತನಕಾರ್ತಿ ನಿಡುಗುರಕಿಯ ಜೀವೂಬಾಯಿ. ಇವಳು ಕಮಲನಾಭ ವಿಠ್ಠಲ ಎಂಬ ಅಂಕಿತದಿಂದ ಕೀರ್ತನೆಗಳನ್ನು ಮತ್ತು ಖಂಡ ಕಾವ್ಯಗಳನ್ನು ರಚಿಸಿರುವಳು. ಅವಳ ಕೀರ್ತನೆಗಳು ಭಾವಗಮ್ಯತೆ, ಪರಿಸರ ಪ್ರೀತಿ, ಗುರುಭಕ್ತಿ, ಜೀವನ ಪ್ರೀತಿ, ಹಿರಿಯ ಹರಿದಾಸರ ಬಗೆಗಿನ ಗೌರವ ಮುಂತಾದ ವಸ್ತು ವೈವಿಧ್ಯತೆಗಳಿಂದ ರೂಪಿತಗೊಂಡಿವೆ. ಭಾಷಾ

ಪ್ರಯೋಗ ಮತ್ತು ಛಂದಸ್ಸಿನ ಬಳಕೆಯಲ್ಲಿ ಬಹುಮುಕ್ತತೆಯನ್ನು ಹೊಂದಿರುವ ಜೀವೂಬಾಯಿಯು ಮಹಿಳಾ ಕೀರ್ತನಕಾರ್ತಿಯರಲ್ಲಿ ಗಮನಿಸಲೇಬೇಕಾದ ಓರ್ವ ಸತ್ವಶಾಲಿ ಕೀರ್ತನಕಾರ್ತಿಯಾಗಿದ್ದಾಳೆ.

ಪ್ರಸ್ತುತ ಮಹಾಪ್ರಬಂಧದಲ್ಲಿ ಜೀವೂಬಾಯಿಯವರ ಬದುಕಿನ ಚಿತ್ರಣದೊಂದಿಗೆ ಅವರು ರಚಿಸಿರುವ ಕೀರ್ತನೆ ಹಾಗೂ ಖಂಡ ಕಾವ್ಯಗಳನ್ನು ವಿಶೇಷ ಅಧ್ಯಯನಕ್ಕೊಳಪಡಿಸಿ ಆ ಮೂಲಕ ಕೆಲವು ಹೊಸ ಒಳನೋಟಗಳನ್ನು ಕಂಡುಕೊಳ್ಳಲಾಗಿದೆ.

೧. ಸಂಪ್ರದಾಯಸ್ಥ ವೈದಿಕ ಕುಟುಂಬದಲ್ಲಿ ಜನಿಸಿದ ಜೀವೂಬಾಯಿಯು ಚಿಕ್ಕ ವಯಸ್ಸಿನಲ್ಲಿಯೇ ಮದುವೆಗೊಳಗಾಗಿ, ಗಂಡ ಎಂದರೇನು ಎಂದು ತಿಳಿಯುವ ಮೊದಲೆ ಬಾಲ ವಿಧವೆಯಾದಳು. ಈ ವೇದನೆಯನ್ನು ಮರೆಯಲು ಮನೆಗೆಲಸ, ಗೋವುಗಳ ಪಾಲನೆ, ಹೆಣ್ಣುಮಕ್ಕಳ ಆರೈಕೆ, ಬಸಿರು ಬಾಣಂತಿಯರ ಉಪಚಾರ ಹೀಗೆ ಮನೆಯ ಒಳಗಿನ ಹಾಗೂ ಹೊರಗಿನ ಜನರಿಗೆ ಮಾಡುವ ಪರೋಪಕಾರದ ಕೆಲಸಗಳ ಮೂಲಕ ತನ್ನ ಬಾಳಿನಲ್ಲಿ ಸಂತೃಪ್ತಿಯನ್ನು ಕಂಡಳು. ತಂದೆಯವರ ಪ್ರಭಾವದಿಂದ ರಾಮಾಯಣ, ಮಹಾಭಾರತ, ಇತರೇ ಹರಿ ಸ್ತೋತ್ರಗಳನ್ನು ಮನೆಯಲ್ಲಿಯೇ ಕಲಿತಳು. ತಂದೆಯಿಂದ ಮನೆಯಲ್ಲಿ ಅಕ್ಷರಾಭ್ಯಾಸವನ್ನು ರೂಢಿಸಿಕೊಂಡು ಹರಿಸಂಕೀರ್ತನೆ, ಪೂಜೆ ವ್ರತ, ಭಜನೆಗಳಲ್ಲಿ ತೊಡಗಿ, ಸಾಹಿತ್ಯಿಕ ರಚನೆಯನ್ನು ರೂಢಿಸಿಕೊಂಡು ಇದೂ ಶ್ರೀಹರಿಯ ಸೇವೆಯಂದು ಬಗೆದು, ಲೌಕಿಕದೊಂದಿಗೆ ಪಾರಮಾರ್ಥಿಕ ಪಥದಲ್ಲಿಯೂ ಮುನ್ನಡೆದುಕೊಂಡು ಬಂದಳು. ಇದು ಈ ಅಧ್ಯಯನದ ತಿರುಳು.

೨. ಕೀರ್ತನೆಗಳು ಜೀವೂಬಾಯಿಯವರ ಸೃಜನಶೀಲ ಪ್ರತಿಭೆಗೆ ಉತ್ತಮ ನಿದರ್ಶನಗಳು. ಅವರ ಒಟ್ಟು ಕಿರ್ತನೆಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಸ್ತುತಿ ಸ್ತೋತ್ರಪರವಾದ ಕೀರ್ತನೆಗಳನ್ನು, ನವವಿಧ ಭಕ್ತಿಭಾವವನ್ನು, ಭಗವಂತನ ಸಂಕೀರ್ತನೆಯನ್ನು, ಆತ್ಮ ನಿವೇದನೆಯ ಹಂಬಲವನ್ನು, ದಶಾವತಾರ ವರ್ಣನೆಯ ಕೌಶಲ್ಯವನ್ನು, ಲೋಕನೀತಿಯ ಸಾರ ಸಂಗ್ರಹವನ್ನು ಗುರುತಿಸಲಾಗಿದೆ.

೩. ವಿಶೇಷ ರಚನೆಗಳಾದ ಸಂಪ್ರದಾಯದ ಹಾಡುಗಳಲ್ಲಿ ಅಡಗಿರುವ ವಿವಿಧ ಆಚರಣೆಗಳನ್ನು ಕೀರ್ತನೆಗಳ ಹಿನ್ನೆಲೆಯಲ್ಲಿ ಚರ್ಚಿಸುವ ಮೂಲಕ ಸೋಬಾನದ ಹಾಡು, ಬಾಗಿಲು ತೆಗೆಯುವ ಹಾಡು, ಹಸೆಗೆ ಕರೆಯುವ ಹಾಡು, ಜೋಗುಳದ ಹಾಡುಗಳು, ಮಂಗಲ-ಆರತಿ ಹಾಡುಗಳನ್ನು ಗುರುತಿಸಿ ಅವುಗಳ ಹಿಂದಿರುವ ಭಾವ ವೈವಿಧ್ಯತೆ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಕಂಡು ಕೊಳ್ಳಲಾಗಿದೆ.

೪. ಕೀರ್ತನೆಗಳಲ್ಲಿ ಮೂಡಿಬಂದ ಹನುಮ-ಭೀಮ-ಮಧ್ವರ ಬಗೆಗಿನ ಭಕ್ತಿ, ರಾಘವೇಂದ್ರ ಯತಿಗಳ ಮತ್ತು ಪುರಂದರದಾಸರ ಮೇಲಿರುವ ಶ್ರದ್ಧೆ-ಗೌರವ, ಮಹಾಲಕ್ಷ್ಮಿಯನ್ನು ಅಪಾರ ಭಕ್ತಿಯಿಂದ ಪರಿಪರಿಯಾಗಿ ಆರಾಧಿಸುವ ಕ್ರಮ, ಭಾರತಿದೇವಿಯ ಗುಣಗಾನ, ಕರ್ನಾಟಕದ ಒಳಗಿನ ಮತ್ತು ಹೊರಗಿನ ನದಿ-

ತೀರ್ಥಕ್ಷೇತ್ರಗಳನ್ನು ಗುರುತಿಸುವದರೊಂದಿಗೆ ಜೀವೂಬಾಯಿಯಲ್ಲಿ ಅಂತರ್ಗತವಾಗಿರುವ ರಾಷ್ಟ್ರೀಯತೆ ಹಾಗೂ ದೇಶೀಯತೆಯನ್ನು ಸೂಕ್ಷ್ಮವಾಗಿ ವಿಶ್ಲೇಶಿಸಲಾಗಿದೆ.

೫. ಖಂಡಕಾವ್ಯಗಳಲ್ಲಿ ಒಡಮೂಡಿ ಬಂದ ಪುರಂದರದಾಸರ ಜೀವನ ಚಿತ್ರಣ, ಹರಿಯ ಬಗೆಗಿನ ಭಕ್ತಿ, ಮನಸ್ಸಿನಲ್ಲಿ ಹರಿಯನ್ನು ಅರಾಧಿಸುವ ಕ್ರಮ, ಗಾಲವ ಚರಿತೆಯಲ್ಲಿಯ ವಚನಬದ್ಧತೆಯ ಗುಣ, ರಾಧಾ-ಮಾಧವ ವಿಲಾಸದಲ್ಲಿಯ ಪವಿತ್ರ ಪ್ರೇಮ, ಶ್ರೀರಾಮ ಜನನ-ಸೀತಾ ಕಲ್ಯಾಣದಲ್ಲಿ ಯುವ ರಾಮ-ಲಕ್ಷ್ಮಣರ ಶೌರ್ಯ, ಜನಕ ನೆರವೇರಿಸಿದ ಮಕ್ಕಳ ಮದುವೆ, ಸಮುದ್ರಮಥನದಲ್ಲಿ ಶ್ರೀಹರಿ ಮೋಹಿನಿಯಾಗಿ ತನ್ನ ಮೋಹಕತೆಯಿಂದ ದಾನವರಿಗೆ ಮಾಡಿದ ಮೋಸ ಮುಂತಾದ ಪೌರಾಣಿಕ ಪ್ರಸಂಗಗಳನ್ನು ಜೀವಮ್ಮ ನಿವೇದಿಸಿದ ಕ್ರಮ ಹಾಗೂ ಅದರಲ್ಲಿಯ ವಿಶಿಷ್ಟ ಅಂಶಗಳನ್ನು ಗುರುತಿಸಲಾಗಿದೆ. ಪ್ರತಿಯೊಂದು ಖಂಡಕಾವ್ಯಗಳ ವಿಶ್ಲೇಷಣೆಯ ಕೊನೆಗೆ ಅವುಗಳಲ್ಲಿಯ ವಿಷಯದ ಪ್ರಸ್ತುತತೆಯನ್ನು ಗುರುತಿಸಲಾಗಿದೆ.

೬. ಖಂಡಕಾವ್ಯಗಳಲ್ಲಿ ಬಳಸಿರುವ ಛಂದಸ್ಸಿನ ನೈಜತೆಯನ್ನು ಗುರುತಿಸಿ ಅಲ್ಲಿಯ ಛಂದೋಬಂಧಗಳು ಕೇವಲ ಹೆಸರಿಗೆ ಮಾತ್ರ, ಯಾವುದೇ ಛಂದಸ್ಸಿನ ನಿಯಮಗಳಿಗೆ ಪೂರ್ಣಪ್ರಮಾಣದಲ್ಲಿ ಹೊಂದಿಕೆಯಾಗುವುದಿಲ್ಲ ಎಂಬ ಸಂಗತಿಯನ್ನು ಕಂಡುಕೊಳ್ಳಲಾಗಿದೆ. ಆರು ಬಗೆಯ ಆದಿಪ್ರಾಸಗಳಲ್ಲಿ ಕೇವಲ ಐದು ಬಗೆಯ ಆದಿ ಪ್ರಾಸಗಳನ್ನು ಬಳಸಿರುವುದನ್ನು, ಮದ್ಯ ಪ್ರಾಸ ಮತ್ತು ಅಂತ್ಯ ಪ್ರಾಸ ಬಳಕೆಯನ್ನು ಉದಾಹರಣೆಗಳ ಮೂಲಕ ಗುರುತಿಸಲಾಗಿದೆ.

೭. ಕೀರ್ತನೆಗಳಲ್ಲಿ ಮತ್ತು ಖಂಡಕಾವ್ಯಗಳಲ್ಲಿ ಬಳಕೆಯಾದ ವಿಶಿಷ್ಠ ಭಾಷಾ ಪ್ರಯೋಗಗಳನ್ನು ಗಮನಿಸಿ ಅನುಕರಣಾವ್ಯಯಗಳನ್ನು, ದ್ವಿರುಕ್ತಿಗಳನ್ನು, ದ್ವನಿವ್ಯತ್ಯಾಸಗಳನ್ನು, ಪರಭಾಷೆಯ ಪದಗಳ ಬಳಕೆಯನ್ನು ಗುರುತಿಸಲಾಗಿದೆ. ಈ ಎಲ್ಲ ರಚನೆಗಳಿಗೆ ಜೀವಮ್ಮ ತನ್ನ ಸುತ್ತಲ ಪರಿಸರದ ದಿನಬಳಕೆಯ ಭಾಷೆಯನ್ನು, ಕೆಲ ಸಂದರ್ಭದಲ್ಲಿ ಗ್ರಂಥಸ್ಥ ಭಾಷೆಯನ್ನು ಬಳಸಿರುವುದನ್ನು ಗುರುತಿಸಲಾಗಿದೆ.

೮. ನೀರು ಮತ್ತು ಹುಣಸೆಯನ್ನು ಕುರಿತು ಬರೆದ ವಿಶೇಷ ಕೀರ್ತನೆಗಳು ಜೀವಮ್ಮಳ ಜಾಣ್ಮೆಗೆ ಸಾಕ್ಷಿಯಾಗಿವೆ. ಮಾನವನ ಎಲ್ಲ ಕಾರ್ಯ ಚಟುವಟಿಕೆಗಳಿಗೆ ನೀರೆ ಮೂಲ. ನೀರಿಲ್ಲದಿದ್ದರೆ ಮಾನವನಿಗೆ ಅಸ್ತಿತ್ವವೇ ಇಲ್ಲ ಎಂಬ ಸಾರ್ವತ್ರಿಕ ಮತ್ತು ಸಾರ್ವಕಾಲಿಕ ಸತ್ಯವನ್ನು ಗುರುತಿಸಲಾಗಿದೆ. ಎಲ್ಲ ಬಗೆಯ ಆಹಾರ ತಯಾರಿಕೆಯಲ್ಲಿ ಹುಣಸೆ ಹಣ್ಣು ಮುಖ್ಯ, ಜನಸಾಮಾನ್ಯರಿಗೆ ಅತ್ಯಂತ ಸುಲಭದಲ್ಲಿ ದೊರೆಯುವ ಈ ಹಣ್ಣಿನ ಬಗೆಗೆ ಜೀವಮ್ಮಳಿಗಿರುವ ಪ್ರೀತಿಯನ್ನು ಕಂಡುಕೊಳ್ಳಲಾಗಿದೆ.

೯. ಬಸವಣ್ಣನವರು ಲಿಂಗೈಕ್ಯರಾದ ನಂತರ ಅವರ ಕುರಿತು ಹಲವಾರು ಕವಿಗಳು ಕಾವ್ಯಗಳನ್ನು ಬರೆದರು. ಇದೇ ರೀತಿಯಾಗಿ ದಾಸ ಸಾಹಿತ್ಯದಲ್ಲಿ ಪ್ರಮುಖರಾದ ಪುರಂದರದಾಸರ ನಂತರ ಅವರ ಕುರಿತು

ಒಂದು ಚರಿತ್ರಾತ್ಮಕ ಖಂಡಕಾವ್ಯ ರಚಿಸಿದವರಲ್ಲಿ ಜೀವೂಬಾಯಿಯವರು ಮೊದಲಿಗರು ಎಂಬುದು ಈ ಅಧ್ಯಯನದಿಂದ ಗೊತ್ತಾಗುತ್ತದೆ.

೧೦. ತನ್ನ ವೈದವ್ಯತೆಯನ್ನು, ಬದುಕಿನ ದುಗುಡದುಮ್ಮಾನಗಳನ್ನು ಎದುರಿಸಲು ಜೀವಮ್ಮಳು ತನ್ನ ರಚನೆಗಳ ಮೂಲಕ ಅಂತರ್ಮುಖಿಯಾದ ಪ್ರತಿಭಟನೆ ಕೈಗೊಂಡಿರುವದು ಈ ಮೂಲಕ ತನ್ನ ಏಕಾಂಗಿತನದ ಬೇಸರವನ್ನು ಕಳೆದುಕೊಂಡಿರುವುದು ತಿಳಿದು ಬರುತ್ತದೆ.

೧೧. ಜೀವಮ್ಮ ಬದುಕಿದ್ದ ಕಾಲಘಟ್ಟದಲ್ಲಿ ಕನ್ನಡ ಭಾಷೆಯ ರಚನೆ ಮತ್ತು ಕೀರ್ತನೆಗಳ ಲಯದಲ್ಲಿ ಶಿಥಿಲತೆ ಪ್ರಾಪ್ತವಾಗಿತ್ತು. ಆದ್ದರಿಂದ ಜೀವಮ್ಮಳು ಛಂದಸ್ಸಿನ ಕಟ್ಟುಪಾಡುಗಳನ್ನು ಮೀರಿ ಮುಕ್ತ ಛಂದಸ್ಸಿನಲ್ಲಿ ಲಯ ಪ್ರಾಧಾನ್ಯತೆಯ ಕೀರ್ತನೆ ಮತ್ತು ಖಂಡಕಾವ್ಯಗಳನ್ನು ರಚಿಸಿರುವುದು ಈ ಅಧ್ಯಯನದಿಂದ ಮನದಟ್ಟಾಗುತ್ತದೆ.

೧೨. ಮೊದಲ ಬಾರಿಗೆ ಸ್ಥಳ ಮಹಿಮೆಯನ್ನು ಕುರಿತು ಕೀರ್ತನಗಳಲ್ಲಿ ನಿರೂಪಿಸಿರುವ ಮಹಿಳಾ ಕೀರ್ತನಕಾರ್ತಿಯರಲ್ಲಿ ನಿಡಗುರುಕಿ ಜೀವೂಬಾಯಿಯವರು ಮೊದಲಿಗರು. ಎಂಬುದನ್ನು ಈ ಅಧ್ಯಯನ ದಾಖಲಿಸುತ್ತದೆ.

೧೩. ಮಹಿಳಾ ಕೀರ್ತನಕಾರ್ತಿಯರ ಬಗೆಗೆ ಚರ್ಚಿಸಿ ಜೀವಮ್ಮಳ ಮೇಲೆ ಪ್ರಭಾವ ಬೀರಿದ ಹಿರಿಯ ಕೀರ್ತನಕಾರ್ತಿಯರ ರಚನೆಗಳನ್ನು ಮತ್ತು ಜೀವಮ್ಮಳ ಪ್ರಭಾವಕ್ಕೊಳಗಾದ ನಂತರದ ಕೀರ್ತನ ಕಾರ್ತಿಯರ ರಚನೆಗಳನ್ನು ಗುರುತಿಸಲಾಗಿದೆ. ಈ ಮೂಲಕ ಜೀವಮ್ಮಳ ಪ್ರಭಾವವನ್ನು ಕಂಡುಕೊಳ್ಳಲಾಗಿದೆ. ಮಹಿಳಾ ಹರಿದಾಸ ಪರಂಪರೆಯಲ್ಲಿ ಜೀವಮ್ಮ ಗಮನಿಸಲೇಬೇಕಾದ ಮಹತ್ವದ ಕೀರ್ತನಕಾರ್ತಿಯರಲ್ಲಿ ಒಬ್ಬರೆಂಬುದನ್ನು ಈ ಅಧ್ಯಯನವು ಎತ್ತಿ ತೋರಿಸುತ್ತದೆ.

ಹೀಗೆ ಕನ್ನಡ ಸಾಹಿತ್ಯ ಪರಂಪರೆಯ ವಿಭಿನ್ನ ಸಾಹಿತ್ಯ ರೂಪಗಳಲ್ಲಿ ಒಂದಾದ ಕೀರ್ತನಸಾಹಿತ್ಯದ ಬೆಳವಣಿಗೆಯಲ್ಲಿ ಮಹಿಳಾ ಕೀರ್ತನಕಾರ್ತಿಯರು ಕೂಡ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಆ ಮೂಲಕ ಸಾಹಿತ್ಯ ಪ್ರೀತಿಯನ್ನು ಮೆರೆದಿದ್ದಾರೆ. ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಇಂಥ ಪ್ರತಿಭಾವಂತ ಕೀರ್ತನಕಾರ್ತಿಯರ ಸಾಲಿನಲ್ಲಿ ಸದಾಕಾಲ ನಿಲ್ಲಬಲ್ಲ ಎಲ್ಲ ಗುಣಗಳನ್ನು ಜೀವೂಬಾಯಿಯ ಕೀರ್ತನೆಗಳು ಪಡೆದುಕೊಂಡಿವೆ. ಇದು ಹರಿದಾಸ ಪರಂಪರೆಯಲ್ಲಿ ಮಹತ್ವದ ಅಂಶ ಆಗಿರುವಂತೆ ಕನ್ನಡ ಮಹಿಳೆಯರ ಸಾಹಿತ್ಯ, ಅಭಿವ್ಯಕ್ತಿ ಪರಂಪರೆ, ಮಹಿಳಾ ಸೃಜನಶೀಲತೆಯ ಕಾರಣಗಳಿಂದಲೂ ಮಹತ್ವ ಪಡೆಯುತ್ತದೆ. ಲೋಕದ ಜನತೆಯನ್ನು ಸರಿದಾರಿಗೆ ತರುವುದರ ಜೊತೆಗೆ ತಾವೂ ಸಹ ಸರಿದಾರಿಯಲ್ಲಿ ಸಾಗಬೇಕು ಎಂಬ ಬಯಕೆ ಜೀವೂಬಾಯಿಯವರದ್ದಾಗಿತ್ತೆಂಬುದು ತಿಳಿಯುತ್ತದೆ. ತಾನು ಏನೇ ಬರೆದರೂ 'ನನ್ನ ತಪ್ಪನ್ನು ತಿದ್ದಿ ಬೆಳೆಸಬೇಕು' ಎಂಬ ವಿನಮ್ರಭಾವ

ಜೀವೂಬಾಯಿಯವರನ್ನು ಉನ್ನತಮಟ್ಟಕ್ಕೇರಿಸುತ್ತದೆ. ತಾನು ಬರೆದದ್ದೇ ಸರಿ ಎಂಬ ಹಠಮಾರಿ ಮನೋಭಾವ ಜೀವಮ್ಮಳದಲ್ಲ. ತಾನು ಇನ್ನೂ ಬೆಳೆಯಬೇಕು 'ನನ್ನ ಓರೆ-ಕೋರೆಗಳನ್ನು ತಿದ್ದಿ' ಎಂದು ಓದುಗರಲ್ಲಿ ಪ್ರಾರ್ಥಿಸಿಕೊಳ್ಳವಳು.

ಒಟ್ಟಿನಲ್ಲಿ, ಕನ್ನಡ ಮಹಿಳಾ ಕೀರ್ತನಕಾರರಲ್ಲಿ ನಿಡಗುರುಕಿ ಜೀವೂಬಾಯಿಯವರಿಗೆ ಖಂಡಿತವಾಗಿ ಮಹತ್ವದ ಸ್ಥಾನವಿದೆ. ಸಂಪ್ರದಾಯಸ್ಥ ಮನೆತನದಲ್ಲಿ ಹುಟ್ಟಿದ ಜೀವಮ್ಮ ವಿವಾಹಕ್ಕೊಳಗಾದದ್ದು, ವಿಧವೆಯಾದದ್ದು, ಅಂತರ್ಮುಖಿಯಾಗಿ ಪ್ರತಿಭಟನೆ ಮಾಡಿದ್ದು, ಧಾರ್ಮಿಕ ಮುಖಿಯಾದ ಕೀರ್ತನೆಗಳನ್ನು ರಚಿಸಿದ್ದು, ಖಂಡಕಾವ್ಯಗಳನ್ನು ಅರ್ಥಪೂರ್ಣವಾಗಿ ನಿರೂಪಿಸಿದ್ದು, ಸ್ಥಳ ಮಹಾತ್ಮೆಯನ್ನು ಮೊದಲ ಬಾರಿಗೆ ಹೇಳಿದ್ದು ಜೀವೂಬಾಯಿಯವರು ಎಂಬುದರಲ್ಲಿ ಎರಡು ಮಾತಿಲ್ಲ. ಹೀಗೆ ಮಹಿಳಾ ಕೀರ್ತನಕಾರ್ತಿಯರಲ್ಲಿ ಅಷ್ಟೇ ಅಲ್ಲ, ಒಟ್ಟು ಕನ್ನಡ ಮಹಿಳಾ ಸಾಹಿತ್ಯದಲ್ಲಿ ವಿಶೇಷ ಸ್ಥಾನವಿದೆ. ಇಂಥ ಉಪೇಕ್ಷಿತ ಕೀರ್ತನಕಾರ್ತಿಯ ಸಾಧನೆಯನ್ನು ವಿಸ್ತಾರವಾಗಿ ವಿವೇಚನೆ ಮಾಡಿದ್ದು ಈ ಅಧ್ಯಯನದ ಹೆಚ್ಚುಗಾರಿಕೆಯಾಗಿದೆ.

ಅನುಬಂಧ-೧

## ಭಾವಚಿತ್ರಗಳು



ನಿಡಗುರ್ಕಿ ಗ್ರಾಮ ಪ್ರವೇಶ ಫಲಕ



ನಿಡಗುರ್ಕಿ ಗ್ರಾಮದ ಪಾರ್ಶ್ವ ನೋಟ



ಜೀವುಬಾಯಿಯವರು ವಾಸವಾಗಿದ್ದ ಮನೆಯ ಸ್ಥಳ



ಜೀವುಬಾಯಿಯವರ ಮನೆಯ ಪಕ್ಕದ ಸಾಸಲಮ್ಮ ಮತ್ತು ನಾಗ ಪ್ರತಿಮೆಗಳು



ಜೀವುಬಾಯಿಯವರ ಮನೆಯ ಹಿಂದಿನ ಬಾವಿ



ಬಾವಿಯ ಮೇಲಿನ 'ತುಳಸಾಬಾಇ ಧರ್ಮಾ' ಬರಹದ ಕಲ್ಲು



ಜೀವುಬಾಯಿಯವರ ಮನೆಯ ಹಿಂದಿನ ಬಯಲು ಸ್ಥಳ



ಜೀವುಬಾಯಿಯವರ ಮನೆಯ ಅವಶೇಷಗಳ ವೀಕ್ಷಣೆಯ ಸಂದರ್ಭ



ಜೀವುಬಾಯಿಯವರ ಬಗ್ಗೆ ಸ್ಥಳೀಯರಿಂದ ಮಾಹಿತಿ ಸಂಗ್ರಹ



ಜೀವುಬಾಯಿಯವರ ಬಗ್ಗೆ ಸ್ಥಳೀಯರಿಂದ ಮಾಹಿತಿ ಸಂಗ್ರಹ



ವೆಂಕಟರಮಣಸ್ವಾಮಿ ದೇವಾಲಯ



ವೆಂಕಟರಮಣಸ್ವಾಮಿ ದೇವಾಲಯದ ಮೂರ್ತಿಗಳು



ವೆಂಕಟರಮಣಸ್ವಾಮಿ ದೇವಾಲಯದ ಹೊರನೋಟ



ಗಂಗಮ್ಮ ದೇವಾಲಯದ ಹೊರನೋಟ



ಗಂಗಮ್ಮ ದೇವಾಲಯದ ಮೂರ್ತಿ



ಗಂಗಮ್ಮ ದೇವಾಲಯದ ಆವರಣದ ಪ್ರಾಚೀನ ಆಲದ ಮರ

ಅನುಬಂಧ–೨

## ಆಕರ ಗ್ರಂಥಗಳು

೧. ಅಪ್ರತಿಮವೀರ ಚರಿತೆ – ತಿರುಮಲಾರ್ಯ – ೨ನೇ ಮುದ್ರಣ

೨. ಅಕ್ಕಮಹಾದೇವಿಯ ವಚನಗಳ ಸಾಂಸ್ಕೃತಿಕ ಮುಖಾಮುಖಿ – ಸಂ. ಡಾ. ರಹಮತ್ ತರಿಕೇರಿ– ೨೦೦೫ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ – ಎಸ್.ಎಸ್.ಕಬ್ಬಿನ್ – ೧೯೭೧

೪. ಆರ್ತನಾದ – ಸಂ. ಬೆಟಗೇರಿ ಕೃಷ್ಣಶರ್ಮ, ಬೆಂಗೇರಿ ಹುಚ್ಚರಾಯ – ೧೯೬೪

೫. ಇಪ್ಪತ್ತನೆಯ ಶತಮಾನದ ಭಾರತೀಯ ಅನುಭಾವಿಗಳು ಮತ್ತು ಬಸವಣ್ಣ– ಡಾ.ಸಾ.ಸಿ.ಮರುಳಯ್ಯ ೨೦೦೩

೬. ಈ ಪರಿಯ ಸೊಬಗು – ಸಂ. ಡಾ.ಎಚ್.ಎನ್. ಮುರಳಿಧರ–೨೦೧೦

೭. ಕರ್ನಾಟಕದ ಹರಿದಾಸ ಸಾಹಿತ್ಯ–ಡಾ.ಆರ್.ಎಸ್.ಪಂಚಮುಖಿ ೧೯೫೨

೮. ಕರ್ನಾಟಕದ ಕವಯತ್ರಿಯರು–ಡಾ.ಸರೋಜನಿ ಮಹೀಷಿ ೧೯೬೫

೯. ಕರ್ನಾಟಕದ ಹರಿದಾಸ ಸಂಚಯ ಮತ್ತು ಸಾಹಿತ್ಯ ಚಿಂತನ– ಡಾ.ಅರಳುಮಲ್ಲಿಗೆ ಪಾರ್ಥಸಾರಥಿ–೨೦೦೮

೧೦. ಕನ್ನಡ ಛಂದೋವಿಕಾಸ–ಡಾ. ಡಿ.ಎಸ್.ಕರ್ಕಿ

೧೧. ಕನ್ನಡ ಸಾಹಿತ್ಯ ಚರಿತ್ರೆ – ಡಾ.ರಂ.ಶ್ರೀ.ಮುಗಳಿ

೧೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ– ಡಾ.ಎಂ.ಚಿದಾನಂದಮೂರ್ತಿ

೧೩. ಕನ್ನಡ ನಿಘಂಟು(ಕ.ಸಾ.ಪ.)–ಸಂ.ಡಾ.ಡಿ.ಎಲ್.ನರಸಿಂಹಾಚಾರ್ಯ

೧೪. ಕರ್ನಾಟಕ ಸಂಸ್ಕೃತಿ ಸಮೀಕ್ಷೆ–ಡಾ.ಎಚ್.ತಿಪ್ಪೆರುದ್ರಸ್ವಾಮಿ ೨೦೦೧

೧೫. ಕನ್ನಡ ಸಾಹಿತ್ಯ ದರ್ಶನ–ಡಾ.ದೇ ಜವರೇಗೌಡ ೧೯೯೦

೧೬. ಕರ್ನಾಟಕದ ಧರ್ಮಗಳು – ಡಾ.ಶಿ.ಚ. ನಂದಿಮಠ ೧೯೮೩

೧೭. **ಕನ್ನಡ ಮಹಿಳಾಸಾಹಿತ್ಯ ಚರಿತ್ರೆ**–ಸಂ. ಡಾ.ಎಚ್.ಎಸ್.ಶ್ರೀಮತಿ ೨೦೦೬

೧೮. **ಕೆಲವು ಜಾನಪದ ಸಂಪ್ರದಾಯಗಳು**–ಟಿ.ಜಿ.ಚಲವೆಗೌಡ ೧೯೭೮

೧೯. **ಕೈವಲ್ಯ ಪದ್ಧತಿ ನಿಜಗುಣರು**–ಸಂ.ಪಿ.ಬಸವಣ್ಣ

೨೦. **ಕೈವಲ್ಯ ದರ್ಪಣ**– ಬಾಲಲೀಲಾ ಮಹಾಂತ ಶಿವಯೋಗಿ

೨೧. **ಕೃಷ್ಣಲೀಲೆ**–ಸಂ.ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯ ೧೯೬೪

೨೨. **ಕನ್ನಡ ಸಾಹಿತ್ಯದಲ್ಲಿ ಮುಕ್ತಿಯ ನಿರ್ವಚನ** (ಅಪ್ರಕಟಿತ ಪಿಚ್.ಡಿ.ಪ್ರಬಂಧ)– ಡಾ.ಎಸ್.ಆರ.ಚನ್ನವೀರಪ್ಪ.

೨೩. **ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ**–ಡಾ.ಗುರುಪಾದ ಮರಿಗುದ್ದಿ

೨೪. **ಗಲಗಲಿ ಅವ್ವನವರ ಕೀರ್ತನೆಗಳ ಅಧ್ಯಯನ** (ಅಪ್ರಕಟಿತ ಪಿಎಚ್.ಡಿ.ಪ್ರಬಂಧ)

೨೫. **ಗರತಿಯ ಹಾಡು**–ಸಂ.ಹಲಸಂಗಿ ಗೆಳೆಯರು

೨೬. **ಛಂದೋಂಬುಧಿ**–ನಾಗವರ್ಮ

೨೭. **ಜನಪದ ಸಾಹಿತ್ಯ ದರ್ಶನ ಭಾಗ ೨೦**–ಸಂ. ಡಾ. ವೀರಣ್ಣಾ ರಾಜೂರ

೨೮. **ಜನಪದ ಸಾಹಿತ್ಯ ದರ್ಶನ ಭಾಗ–೨೧**–ಸಂ. ಡಾ.ವೀರಣ್ಣಾ ರಾಜೂರ

೨೯. **ಚಲುವ ಕನ್ನಡ ನಾಡು** – ಸುರೇಶ ವೆ. ಕುಲಕರ್ಣಿ ೨೦೦೮

೩೦. **ಜಾಗತಿಕ ಧರ್ಮಗಳು**– ಶೇಷ ನವರತ್ನ– ೧೯೯೮

೩೧. **ದಾಸಮಾರ್ಗ**– ಎ.ವಿ.ನಾವಡ– ೨೦೦೪

೩೨. **ದಾಸ ಪರಂಪರೆ**– ನಿರುಪಮಾ ಲಲಿತಾ ಶಾಸ್ತ್ರಿ ೧೯೯೧

೩೩. **ದಾಸ ದರ್ಶನ**– ಸ್ವಾಮಿರಾವ ಕುಲಕರ್ಣಿ– ೨೦೦೨

೩೪. **ದಾಸ ಸಾಹಿತ್ಯದಲ್ಲಿ ಜಾನಪದ ಅಂಶಗಳು: ಒಂದು ಅಧ್ಯಯನ**– ಆರ್.ಸುನಂದಮ್ಮ ೧೯೯೪

೩೫. **ದಾಸ ಸಾಹಿತ್ಯದ ಭಾಷೆ**–ಡಾ.ಎಸ್.ಎಸ್.ಅಂಗಡಿ

೩೬. **ದಾಸ ಸಾಹಿತ್ಯ**– ಕ.ವಿವಿ.ಧಾರವಾಡ ೧೯೭೦

೩೭. **ನಡೆನುಡಿ ಸಿದ್ಧಾಂತ**– ರಂಜಾನ್ ದರ್ಗಾ ೨೦೧೦

೩೮. **ನಾಗವರ್ಮ ಛಂದಸ್ಸು**– ಸಂ.ಕಿಟೆಲ್

೩೯. **ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ**– ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ

೪೦. **ಪೂಜಾ ತತ್ವ**–ಸಂ.ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯ–೧೯೬೩

೪೧. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆ–ಸಂ.ಲೀಲಾವತಿ ಎಸ್.ರಾವ್.೨೦೦೦

೪೨. ಭರತೇಶ ವೈಭವ : ಭಾಷೆ–ಛಂದಸ್ಸು (ಅಪ್ರಕಟಿತ)–ದೀಪಾ ನಾಡಿಗೇರ

೪೩. ಬಸವೇಶ್ವರ ಮತ್ತು ಪುರಂದರ ದಾಸರು–ಡಾ.ಬಸವರಾಜ ಸಬರದ ೧೯೯೨

೪೪. ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ–ಡಾ.ಸಿ.ಪಿ.ಪ್ರಭುಶಂಕರ ೧೯೬೫

೪೫. ಭಕ್ತವಾಣಿ–ಕ.ಸಾ.ಪ.ಬೆಂಗಳೂರು–೧೯೭೧

೪೬. ಭಾರತದ ಸಂಸ್ಕೃತಿಯ ಸಂಘಟನೆ–ಸಿಂಪಿ ಲಿಂಗಣ್ಣ ೧೯೬೭

೪೭. ಮಧುರ ಭಕ್ತಿಯ ಮೀರಾಬಾಯಿ–ಡಾ.ವ್ಹಿ.ಎಸ್.ಕಂಬಿ. ೧೯೮೦

೪೮. ಲೋಕನೀತಿ–ಸಂ.ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯ ೧೯೬೫

೪೯. ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು: ಒಂದು ಅಧ್ಯಯನ–ಡಾ.ಸಿ.ಕೆ.ನಾವಲಗಿ ೨೦೦೦

೫೦. ವಚನ ಸಂಪುಟ ೫–ಶಿವಶರಣೆಯರ ವಚನ ಸಂಪುಟ–ಡಾ.ವೀರಣ್ಣಾ ರಾಜೂರ–೧೯೯೩

೫೧. ವೈದಿಕ ಪುರಾಣಗಳು–ಡಾ.ಸದಾನಂದ ನಾಯಕ–೧೯೬೩

೫೨. ಶಿವಶರಣೆಯರ ವಚನಗಳ ವಿಭಿನ್ನ ನೆಲೆಗಳು–ಡಾ.ವೀರಣ್ಣ ರಾಜೂರ

೫೩. ಶತಕತ್ರಯ–ಸಂ. ಚೆನ್ನಮಲ್ಲಿಕಾರ್ಜುನ ದೇವರು

೫೪. ಶಿವಾನುಭವ ಶಬ್ದಕೋಶ–ಡಾ.ಫ.ಘು.ಹಳಕಟ್ಟಿ ೨೦೦೩

೫೫. ಶಿವದಾಸ ಗೀತಾಂಜಲಿ–ಡಾ.ಎಲ್.ಬಸವರಾಜು

೫೬. ಶರಣರ ದಾಸರ ಭಕ್ತಿ–ಪ್ರೊ. ಸಿದ್ದಣ್ಣ ಉತ್ನಾಳ ೨೦೧೦

೫೭. ಶರಣರ ಅನುಭವ ಅನುಭಾವ ಅನುಭೂತಿ–ಡಾ.ಆರ್.ಆರ್.ದಿವಾಕರ ೧೯೭೬

೫೮. ಶರಣರ ವಿಚಾರ ವಾಹಿನಿ–ಎಂ.ಎಸ್.ಲಠ್ಠೆ ೧೯೭೩

೫೯. ಶ್ರೀ ಜ.ಚ.ನಿ.ವಚನ ಸಾಹಿತ್ಯ ಒಂದು ಅಧ್ಯಯನ–ಡಾ.ಸಂಗಮೇಶ ಹಂಡಗಿ ೧೯೫೬

೬೦. ಶ್ರೀಕೃಷ್ಣ ಪರೀಕ್ಷಣಂ–ಡಿ.ವಿ.ಜಿ. ೧೯೭೧

೬೧. ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು–ಡಾ.ಎ.ಟಿ.ಪಾಟೀಲ ೧೯೫೬

೬೨. ಷಟಸ್ಥಲ ಒಂದು ಅಧ್ಯಯನ–ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳು ಮುಂಡರಗಿ–೨೦೦೩

೬೩. ಸಮಗ್ರ ದಾಸಸಾಹಿತ್ಯ ಸಂಪುಟ ೭–(ಗಲಗಲಿ ಅವ್ವನವರ ಕೀರ್ತನೆಗಳು)ಸಂ.ಹಣಮಂತ ತಾಸಗಾಂವಕರ–೨೦೦೩

೬೪. ಸಮಗ್ರ ದಾಸಸಾಹಿತ್ಯ ಸಂಪುಟ ೧೮ ಭಾಗ–೧ (ಹೆಳವನಕಟ್ಟೆ ಗಿರಿಯಮ್ಮನ ಕೀರ್ತನೆಗಳು)–ಸಂ.ಲೀಲಾವತಿ ಎಸ್.ರಾವ್–೨೦೦೩

೬೫. ಸಮಗ್ರ ದಾಸಸಾಹಿತ್ಯ ಸಂಪುಟ ೧೯--(ಹರಪನಹಳ್ಳಿ ಭೀಮವ್ವನ ಕೀರ್ತನೆಗಳು) ಸಂ.ಡಾ.ಟಿ.ಎಸ್.ನಾಗರತ್ನ ಡಾ.ಅಕ್ಕಮಹಾದೇವಿ ೨೦೦೩

೬೬. ಸಮಗ್ರ ದಾಸಸಾಹಿತ್ಯ ಸಂಪುಟ ೧೮, ಭಾಗ–೪ ಸಂ.ಡಾ.ರುಕ್ಮಿಣಿ ಗಿರಿಮಾಜಿ ಮತ್ತು ಇತರರು–೨೦೦೩

೬೭. ಸಮಗ್ರ ದಾಸಸಾಹಿತ್ಯ ಸಂಪುಟ ೧೮, ಭಾಗ ೩ (ಅಂಬಾಬಾಯಿಯವರ ಕೀರ್ತನೆಗಳು) ಸಂ.ಡಾ.ಅನಂತ ಪದ್ಮನಾಭರಾವ್.

೬೮. ಸಮಗ್ರ ದಾಸಸಾಹಿತ್ಯ ಸಂಪುಟ ೮, ಭಾಗ ೨ (ನಿಡಗುರುಕಿ ಜೀವೂಬಾಯಿಯ ಕೀರ್ತನೆಗಳು) ಸಂ.ಲೀಲಾವತಿ ಎಸ್.ರಾವ್.೨೦೦೩

೬೯. ಸಮಗ್ರ ದಾಸಸಾಹಿತ್ಯ ಸಂಪಟ ೩ – ಭಾಗ ೧ ಮತ್ತು ೨ (ಪುರಂದರದಾಸರ ಕೀರ್ತನೆಗಳು) ಸಂ.ಡಾ.ಬಸವರಾಜ ಸಬರದ–೨೦೦೩

೭೦. ಸಮುಚ್ಚಯ–ಶಾಂತಾದೇವಿ ಮಾಳವಾಡ

೭೧. ಸಾವಿರಾರು ಕೀರ್ತನೆಗಳು–ಸಂ.ಎ.ಎ.ನಾವಡ ಗಾಯತ್ರಿ ನಾವಡ ೨೦೦೦

೭೨. ಸಂಶೋಧನಾ ಶಾಸ್ತ್ರ–ಡಾ. ಎಂ.ಎಂ.ಕಲಬುರ್ಗಿ

೭೩. ಸಂಶೋಧನೆಯ ತಾತ್ವಿಕತೆ–ಡಾ.ರಹಮತ್ ತರಿಕೆರೆ

೭೪. ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ–ಡಾ.ಚಂದ್ರಶೇಖರ ಶಿವಾಚಾರ್ಯರು

೭೫. ಸಿದ್ಧಾಂತ ಶಿಖಾಮಣಿ–ಸಂ. ಪಂಡಿತ ಕಾಶೀನಾಥ ಶಾಸ್ತ್ರಿಗಳು

೭೬. ಸಂಕ್ಷಿಪ್ತ ಕನ್ನಡ ನಿಘಂಟು–ಕ.ಸಾ.ಪ.೧೯೬೫

೭೭. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ – ಕೀರ್ತನಕಾರರು–ಎಚ್.ಎಸ್.ವೆಂಕಟೇಶಮೂರ್ತಿ–೨೦೧೦

೭೮. ಹರಿಭಕ್ತಿ ಸುಧೆ–ರಂಗನಾಥ ದಿವಾಕರ–೧೯೫೬

೭೯. ಹರಿದಾಸ ಪರಂಪರೆ ಮತ್ತು ಕೀರ್ತನಕಾರ್ತಿಯರು–ಡಾ.ಜ್ಯೋತಿ ಶಂಕರ ೨೦೧೧

೮೦. ಹರಿದಾಸ ಭಕ್ತಿ ಸ್ವರೂಪ–ಟಿ.ಎಸ್.ನಾಗರತ್ನ

೮೧. ಹರಿದಾಸ ಸಾಹಿತ್ಯಸಾರ–ಜಿ.ವರದರಾಜ ರಾವ್–೧೯೯೭

೮೨. ಹರಿದಾಸ ಆಂದೋಲನ–ಎನ್.ಕೆ.ರಾಮಶೇಷನ್–೧೯೯೧

೮೩. ಹರಪನಹಳ್ಳಿ ಭೀಮವ್ವನ ಹಾಡುಗಳು: ಒಂದು ಅಧ್ಯಯನ–ಸರಿತಾ ಸುಕುಮಾರ ದೇಸಾಯಿ ೨೦೦೧

೮೪. ಹರಿದಾಸ ಹೃದಯ–ಜಿ.ವರದರಾಜರಾವ್–೧೯೯೭

೮೫. ಹೆಳವನಕಟ್ಟೆ ಗಿರಿಯಮ್ಮನ ಜೀವನ ಮತ್ತು ಕೀರ್ತನಗಳು (ಅಪ್ರಕಟಿತ)– ಡಾ.ಪಿ.ಉಷಾರಾಣಿ